

ಕರ್ನಾಟಕ ಸರ್ಕಾರ
**ಕನ್ನಡ ಪುಸ್ತಕ ಪ್ರಾಧಿಕಾರ**
ಬೆಂಗಳೂರು

# ಪುಸ್ತಕ ಲೋಕ

ಜನವರಿ – ಜೂನ್ ೨೦೧೦
| ಸಂಪುಟ ೧ | ಸಂಚಿಕೆ ೩
ಸಂಯುಕ್ತ ಸಂಚಿಕೆ

ಪ್ರಧಾನ ಸಂಪಾದಕರು
**ಡಾ. ಸಿದ್ಧಲಿಂಗಯ್ಯ**

ಸಂಪಾದಕ
**ಜೆ. ಎನ್. ಶಾಮರಾವ್**

ವಿನ್ಯಾಸ
**ಯು. ಟಿ. ಸುರೇಶ್**






ಪ್ರಕಾಶಕರು

**ಅಶೋಕ ಎನ್. ಚಲವಾದಿ**

ಆಡಳಿತಾಧಿಕಾರಿಗಳು

**ಕನ್ನಡ ಪುಸ್ತಕ ಪ್ರಾಧಿಕಾರ**

ಕನ್ನಡ ಭವನ, ಜೆ.ಸಿ. ರಸ್ತೆ

ಬೆಂಗಳೂರು-560002

ದೂರವಾಣಿ / ಫ್ಯಾಕ್ಸ್: 080-22484516





ಮುದ್ರಕರು

**ರಾಜಾ ಪ್ರಿಂಟರ್ಸ್**

ಬೆಂಗಳೂರು - 27. ದೂರವಾಣಿ: 22234066


---

# ಪುಸ್ತಕ ಲೋಕ

ಜನವರಿ – ಜೂನ್ ೨೦೧೦

ಪುಸ್ತಕ ಲೋಕ

ಜನವರಿ – ಜೂನ್ ೨೦೧೦
ಸಂಯುಕ್ತ ಸಂಚಿಕೆ

ಪ್ರಧಾನ ಸಂಪಾದಕರ ಮಾತು

## ಭಾಗ – ೧

ಕನ್ನಡ ಕ್ಲಾಸಿಕಲ್ ಭಾಷೆ ಆಗಬೇಕು – **ನಾಡೋಜ ಪಾಟೀಲ ಪುಟ್ಟಪ್ಪ**
ಶಾಸ್ತ್ರೀಯ ಭಾಷಾ ದರ್ಜೆ – **ಡಾ|| ಶಾಂತರಸ ಹೆಂಬೇರಾಳು**
ಶಾಸ್ತ್ರೀಯ ಸ್ಥಾನಮಾನದ ಮಕುಟ – ನ್ಯಾಯಯುತ – **ನಾಡೋಜ ಪ್ರೊ. ಕೆ.ಎಸ್. ನಿಸಾರ್ ಅಹಮದ್**
ಶಾಸ್ತ್ರೀಯ ಭಾಷೆ – **ಪ್ರೊ. ಎಲ್.ಎಸ್. ಶೇಷಗಿರಿರಾವ್**
ಶಾಸ್ತ್ರೀಯ ಭಾಷೆಯಾಗಿ ಕನ್ನಡ–ಏನು? ಏಕೆ? – **ಡಾ|| ಎಂ. ಚಿದಾನಂದಮೂರ್ತಿ**
ಕನ್ನಡಕ್ಕೆ ೨೫೦೦ ವರ್ಷ: ಇನ್ನೂ ಏಕೆ ಮೀನ–ಮೇಷ? – **ಪ್ರೊ. ಎ.ವಿ. ನರಸಿಂಹಮೂರ್ತಿ**
ಶಾಸ್ತ್ರೀಯ ಭಾಷೆ ಸ್ಥಾನ – ನಾಡುನುಡಿ ಅಭಿವೃದ್ಧಿಗೆ ಕನ್ನಡತನದ ಅರಿವು ಮುಖ್ಯ
ಕನ್ನಡ ಪ್ರಾಚೀನ ಭಾಷೆ ಅಲ್ಲವೇ? – **ಡಾ. ಆರ್ವಿಯಸ್ ಸುಂದರಂ**
ಶಾಸ್ತ್ರೀಯ ಸ್ಥಾನಮಾನ–ಕನ್ನಡದ ಅರ್ಹ ಹಕ್ಕೊತ್ತಾಯ – **ಡಾ. ಪ್ರಧಾನ ಗುರುದತ್ತ**
ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನ – **ನಾ. ಗೀತಾಚಾರ್ಯ**
ಶಾಸ್ತ್ರೀಯ ಭಾಷಾ ಸ್ಥಾನಮಾನ, ಅಳಿದು ಹೋಗಲಿ ಎಲ್ಲ ಅನುಮಾನ – **ಮನು ಬಳಿಗಾರ್**

## ಭಾಗ – ೨

ಕನ್ನಡ ಶಾಸ್ತ್ರೀಯ ಭಾಷೆ – **ಡಾ. ದೇಜಗೌ**
ಕನ್ನಡ ಬೆಳೆಸುವ ಬಗೆ
ಕನ್ನಡಕ್ಕೆ ಶಾಸ್ತ್ರೀಯ ಸ್ಥಾನದ ಗರಿ
ರಾಜಕೀಯ ದಾಳವಾಗಿ ಶಾಸ್ತ್ರೀಯ ಭಾಷೆ – **ಲಿಂಗದೇವರು ಹಳೆಮನೆ**

## ಪುಸ್ತಕ ಲೋಕ

ಜನವರಿ - ಜೂನ್ ೨೦೧೦
ಸಂಯುಕ್ತ ಸಂಚಿಕೆ

ಉತ್ಕೃಷ್ಟತೆಯತ್ತ ಹೆಜ್ಜೆ – **ಅಗ್ರಹಾರ ಕೃಷ್ಣಮೂರ್ತಿ**
ಪಾರಂಪರಿಕ ಭಾಷೆ – ಚಾರಿತ್ರಿಕ ಅವಕಾಶ – **ಡಾ. ಕೆ.ವಿ. ನಾರಾಯಣ**
ಶಾಸ್ತ್ರೀಯ ಭಾಷೆ ಸ್ಥಾನಮಾನ: ಮುಂದೇನು? – **ಪ್ರೊ. ಟಿ.ವಿ. ವೆಂಕಟಾಚಲ ಶಾಸ್ತ್ರೀ**
ಅಭಿಜಾತ ಭಾಷೆಯಾಗಿ ಕನ್ನಡ : ಈಚಿನ ಬೆಳವಣಿಗೆಗಳು – **ಡಾ॥ ಎಂ. ಚಿದಾನಂದಮೂರ್ತಿ**
ಶಾಸ್ತ್ರೀಯ ಭಾಷೆಗಳು: ವಾಸ್ತವ ಪರಿಸ್ಥಿತಿ ಮತ್ತು ಮೂಲ ಸಮಸ್ಯೆ –
**ಮೂಲ: ಶೆಲ್ಡನ್ ಪೋಲಕ್, ಅನುವಾದ: ಎನ್.ಎಸ್. ಸುಬ್ಬಣ್ಣ**
ನಮ್ಮದು ಕೊಡುವ ಭಾಷೆಯಾಗಬೇಕು – **ಡಾ॥ ಕೆ.ವಿ. ನಾರಾಯಣ** ಅವರ ಸಂದರ್ಶನ
ರಾಜಕೀಯದ ಮಧ್ಯೆ ಬಿಡುವು: ಇನ್ನಾದರೂ ಉಸಿರಾಗಲಿ ಕನ್ನಡ – **ಎಂ.ಪಿ. ಪ್ರಕಾಶ್**
ಕನ್ನಡ ಶಾಸ್ತ್ರೀಯ ಭಾಷೆ: ಅಡಿಯಿಡುವ ಮುನ್ನ... – **ಡಿ. ಪಾಂಡುರಂಗ ಬಾಬು**
ಅಭಿಜಾತ ಅನುದಾನ ದೊರಕದ್ದಕ್ಕೆ ಕಾರಣರ್ಯಾರು? – **ಬಿ. ಆರ್. ಜಯರಾಮರಾಜೇ ಅರಸ್**
ಶಾಸ್ತ್ರೀಯ ಭಾಷೆ ಕನ್ನಡದ ಮುಂದಿರುವ ಸವಾಲು – **ಕಿಕ್ಕೇರಿ ನಾರಾಯಣ**

## ಭಾಗ – ೩

ಶಾಸ್ತ್ರೀಯ ಭಾಷೆಗಳು: ಒಂದು ಟಿಪ್ಪಣಿ – **ಡಾ. ಪುರುಷೋತ್ತಮ ಬಿಳಿಮಲೆ**
ಕನ್ನಡ ಭಾಷೆ – ಸಾಹಿತ್ಯದ ಪ್ರಾಚೀನತೆ – **ಎಚ್. ದಂಡಪ್ಪ**
ಶಾಸ್ತ್ರೀಯ ಪಟ್ಟ! ಎತ್ತ ಸಾಗಿದೆ ಪ್ರಯತ್ನ – **ಎಸ್. ಮಂಜುನಾಥ್**
ಶಾಸ್ತ್ರೀಯ ಭಾಷೆ ಕನ್ನಡ: ಮುಂದಿನ ಯೋಜನೆಗಳು – **ಡಾ. ಡಿ.ಕೆ. ಚಿತ್ತಯ್ಯ ಪೂಜಾರ್**

## ಭಾಗ – ೪

ಶಾಸ್ತ್ರೀಯ ಭಾಷೆ ಕುರಿತ ಭಾರತ ಸರ್ಕಾರದ ಆದೇಶಗಳು

# ಪ್ರಧಾನ ಸಂಪಾದಕರ ಮಾತು

ಕನ್ನಡಕ್ಕೆ ಶಾಸ್ತ್ರೀಯಭಾಷೆಯ ಸ್ಥಾನಮಾನ ದೊರೆತಿದೆ. ಕನ್ನಡದ ಜನತೆಗೆ ಅಪಾರ ಸಂತೋಷ ಹಾಗೂ ಹೆಗ್ಗಳಿಕೆ ತಂದುಕೊಟ್ಟಿರುವ ಈ ಸ್ಥಾನಮಾನ ಕನ್ನಡ ಭಾಷೆಯ ಮಟ್ಟಿಗೆ ಕೇಂದ್ರ ಸರ್ಕಾರ ಕೊಡಮಾಡಿರುವ ಒಂದು **ಮಾನ್ಯತೆ:** ಕನ್ನಡಿಗರಿಗೆ ಒಂದು **ಸದವಕಾಶ.**

ಈ ಸದವಕಾಶದ ಸದುಪಯೋಗ ನಮ್ಮ ಮೊದಲ ಹೆಜ್ಜೆ. ಶಾಸ್ತ್ರೀಯ ಭಾಷೆಯ ಮಾನ್ಯತೆಯೊಂದಿಗೆ ಕೇಂದ್ರ ಸರ್ಕಾರವು ನೀಡುವ ನೆರವು ಬಹುಮಟ್ಟಿಗೆ ಹಳಗನ್ನಡ ಹಾಗೂ ನಡುಗನ್ನಡ ಭಾಷಾ ಸಾಹಿತ್ಯಕ್ಕೆ ಸೀಮಿತವಾಗಿರುತ್ತದೆ ಎಂದು ನಿರೀಕ್ಷಿಸಲಾಗಿದೆ. ಈ ದೃಷ್ಟಿಯಿಂದಲೂ ಇದೊಂದು ಅವಕಾಶವೇ.

ಹಳಗನ್ನಡ ಹಾಗೂ ನಡುಗನ್ನಡ ಸಾಹಿತ್ಯ ಕುರಿತ ಓದು, ಚರ್ಚೆ, ವಿಮರ್ಶೆ ಹಾಗೂ ಪ್ರಸಾರಗಳು ಬಹುಮಟ್ಟಿಗೆ ಕನ್ನಡವನ್ನು ಐಚ್ಛಿಕವಾಗಿ ಓದುವ ಕಾಲೇಜು ವಿದ್ಯಾರ್ಥಿ–ಬೋಧಿಸುವ ಉಪನ್ಯಾಸಕರಿಗೆ ಸೀಮಿತವಾಗಿರುವ ಈ ಕಾಲದಲ್ಲಿ ದೊರಕಿರುವ ಶಾಸ್ತ್ರೀಯ ಭಾಷೆಯ ಮಾನ್ಯತೆಯನ್ನು ಸರ್ವತೋಮುಖವಾಗಿ ದುಡಿಸಿಕೊಳ್ಳುವುದು ಎಲ್ಲ ಕನ್ನಡಿಗರ ಕರ್ತವ್ಯವಾಗಬೇಕು. ಆ ಕಾಲಮಾನದ ಕೃತಿಗಳ ಸಂಪಾದನೆ, ಪ್ರಕಟಣೆ, ವಿಮರ್ಶೆ, ಸಾಮಾನ್ಯ ಓದುಗನಿಗೂ ತಲಪುವಂತೆ ಹೊಸಗನ್ನಡಕ್ಕೆ ಅನುವಾದಿಸುವುದೇ ಮೊದಲಾದ ಬೃಹತ್ ಯೋಜನೆಗಳನ್ನು ಹಮ್ಮಿಕೊಳ್ಳಬೇಕಾಗಿದೆ. ಅಲ್ಲದೆ ಹಳಗನ್ನಡ ಹಾಗೂ ನಡುಗನ್ನಡ ಭಾಷೆಯಲ್ಲಿನ ಅಗಾಧ ಅಪ್ರಕಟಿತ ವೈವಿಧ್ಯಮಯ ಜ್ಞಾನರಾಶಿಯನ್ನು ಸಂಶೋಧಿಸಿ, ಸಂಪಾದಿಸಿ ಪ್ರಕಟಿಸುವ ಕಾರ್ಯವನ್ನು ಆದ್ಯತೆಯ ಮೇಲೆ ಕೈಗೊಳ್ಳಬೇಕಾಗಿದೆ. ಈ ಕಾರ್ಯಗಳಲ್ಲಿ ನಿರತರಾಗುವವರಿಗೆ ವಿದ್ಯಾರ್ಥಿವೇತನ, ಸಂಶೋಧನ ವೇತನ ಮೊದಲಾದ ಸೌಲಭ್ಯಗಳನ್ನು ಒದಗಿಸಿಕೊಡಬೇಕಾಗಿದೆ. 'ಕನ್ನಡದಿಂದ ಅನ್ನ ದೊರೆಯುತ್ತದೆ', ಎಂಬ ವಿಶ್ವಾಸ ಹುಟ್ಟಿಸುವ ಕೆಲಸ ಆರಂಭವಾಗಬೇಕು.

ಈ ದಿಸೆಯಲ್ಲಿ ಕರ್ನಾಟಕ ಸರ್ಕಾರವು ಈಗಾಗಲೇ ಮೊದಲ ಹೆಜ್ಜೆಯನ್ನಿರಿಸಿದೆ. ರಾಜ್ಯದ ವಿಶ್ವವಿದ್ಯಾನಿಲಯಗಳು ಶಾಸ್ತ್ರೀಯ ಭಾಷೆ ಕುರಿತು ಕೈಗೊಂಡಿರುವ ವಿವಿಧ ಯೋಜನೆಗಳಿಗೆ ಅನುದಾನ ಬಿಡುಗಡೆ ಮಾಡಿದೆ. ರಾಜ್ಯದ ವಿಶ್ವವಿದ್ಯಾನಿಲಯಗಳು ಪರಸ್ಪರ ಸಮನ್ವಯತೆಯಿಂದ ಕಾರ್ಯಪ್ರವೃತ್ತ–ವಾಗಿವೆಯೆಂದು ನಿರೀಕ್ಷಿಸುತ್ತೇನೆ.

'ಪುಸ್ತಕಲೋಕ'ದ ವಿಶೇಷ ಸಂಚಿಕೆ ಹೊರತರಲು ರಚಿಸಲಾಗಿದ್ದ ತಜ್ಞರ ಸಮಿತಿಯು 'ಪುಸ್ತಕಲೋಕ'ವನ್ನು ಶಾಸ್ತ್ರೀಯಭಾಷೆ ಕುರಿತ ದಾಖಲೆಯನ್ನಾಗಿ ರೂಪಿಸಲು ಸೂಚಿಸಿತು. ಕನ್ನಡಕ್ಕೆ ಶಾಸ್ತ್ರೀಯಭಾಷೆ ಸ್ಥಾನಮಾನ ನೀಡಬೇಕೆಂಬ ಒತ್ತಾಯ ಹಾಗೂ ಮಾನ್ಯತೆ ದೊರೆತ ಐತಿಹಾಸಿಕ ಸುಸಂದರ್ಭಗಳನ್ನು ದಾಖಲಿಸುವುದು ಪ್ರಯೋಜನಕಾರಿಯಾದ ಕೆಲಸ ಎಂದು ಕನ್ನಡ ಪುಸ್ತಕ ಪ್ರಾಧಿಕಾರವು ಭಾವಿಸಿತು. ಇಂಥ ಅಮೂಲ್ಯ ಸಲಹೆ ನೀಡಿದ ವಿದ್ವಾಂಸರಾದ ಪ್ರೊ. ಎಂ.ಹೆಚ್.



# ಪ್ರಧಾನ ಸಂಪಾದಕರ ಮಾತು

ಕೃಷ್ಣಯ್ಯ, ಪ್ರೊ. ಕೆ.ಜಿ. ನಾಗರಾಜಪ್ಪ, ಪ್ರೊ. ಕಿ.ರಂ. ನಾಗರಾಜ್, ಶ್ರೀ ಎಸ್. ದಿವಾಕರ್, ಡಾ. ವಿಜಯಾ, ಡಾ. ಕೆ.ಆರ್. ಸಂಧ್ಯಾರೆಡ್ಡಿ, ಡಾ. ಬೈರಮಂಗಲ ರಾಮೇಗೌಡ, ಶ್ರೀ ಕೇಶವ ಮಳಗಿ, ಪ್ರೊ. ಎಂ.ಜಿ. ಚಂದ್ರಶೇಖರಯ್ಯ ಇವರಿಗೆ ನನ್ನ ಕೃತಜ್ಞತೆಗಳು.

ನಿಯತಕಾಲಿಕೆಯ ಕಾಲಮಿತಿಯಲ್ಲಿ ವಿಶೇಷ ಸಂಚಿಕೆ ರೂಪಿಸುವುದು ಕಷ್ಟದಾಯಕವಾದ ಕೆಲಸ. ೨೦೦೪ರಿಂದ ಈವರೆಗೆ ಪ್ರಕಟವಾದ ವಿವಿಧ ಲೇಖನಗಳ ಸಂಗ್ರಹ, ಆಯ್ಕೆಯ ಕಾರ್ಯ ಹೆಚ್ಚಿನ ಕಾಲವನ್ನು ಬಯಸಿತು. ಆದ್ದರಿಂದ ಈ ಸಂಚಿಕೆಯನ್ನು ಸಂಯುಕ್ತ ಸಂಚಿಕೆಯೆಂದು ಪ್ರಕಟಿಸಲಾಗಿದೆ. ಈ ಸಂಚಿಕೆಯಲ್ಲಿ ತಮ್ಮ ಲೇಖನ ಪ್ರಕಟಿಸಲು ಅನುಮತಿ ನೀಡಿದ ಎಲ್ಲ ಲೇಖಕರಿಗೆ ಹಾಗೂ ಬಹುಮಟ್ಟಿನ ಪತ್ರಿಕಾ ಭಾಗಗಳನ್ನು ಒದಗಿಸಿಕೊಟ್ಟ ಮಂ.ಅ. ವೆಂಕಟೇಶ್ ಅವರಿಗೆ ನನ್ನ ಕೃತಜ್ಞತೆಗಳು.

ಈ ಸಂಚಿಕೆಯನ್ನು ಸಮರ್ಪಕವಾಗಿ ಸಂಪಾದಿಸಿ ಕೊಟ್ಟಿರುವ ಶ್ರೀ ಜೆ.ಎನ್. ಶಾಮರಾವ್ ಹಾಗೂ ಈ ಕಾರ್ಯದಲ್ಲಿ ನೇರವಾದ ಶ್ರೀ ಅಶೋಕ ಎನ್. ಚಲವಾದಿ, ಶ್ರೀ ಕೆ. ಮುಕುಂದನ್ ಅವರಿಗೆ ನನ್ನ ಕೃತಜ್ಞತೆಗಳು.

ಡಾ. ಸಿದ್ಧಲಿಂಗಯ್ಯ
ಅಧ್ಯಕ್ಷರು, ಕನ್ನಡ ಪುಸ್ತಕ ಪ್ರಾಧಿಕಾರ



# ಕನ್ನಡ ಕ್ಲಾಸಿಕಲ್ ಭಾಷೆ ಆಗಬೇಕು


ನಾಡೋಜ ಪಾಟೀಲ ಪುಟ್ಟಪ್ಪ

ಹಳೆಯ ಇತಿಹಾಸ ಇದ್ದವರು ಅದನ್ನು ತಿಳಿದುಕೊಳ್ಳುವ ಪ್ರಯತ್ನ ಮಾಡದೇ ಅದರ ಬಗೆಗೆ ಉದಾಸೀನ ತಳೆಯುತ್ತಾರೆ. ಹೇಳಿಕೊಳ್ಳುವಂಥ ಹಳೆಯ ಇತಿಹಾಸ ಇಲ್ಲದಿರುವ ಜನರು ಹೊಸ ಇತಿಹಾಸವನ್ನು ಸೃಷ್ಟಿಮಾಡಿಕೊಳ್ಳಲು ಮುಂದಾಗುತ್ತಾರೆ.

ಕನ್ನಡಿಗರು ಭಾರತ ದೇಶದ ಅತ್ಯಂತ ಹಳೆಯ ಜನಪದಕ್ಕೆ ಸೇರಿದವರಾಗಿದ್ದಾರೆ. ಭಾರತದ ಪ್ರಾಚೀನದಲ್ಲಿ ದ್ರಾವಿಡರ ಬೇರುಗಳೇ ತುಂಬಿಕೊಂಡಿವೆ. ಆ ಬೇರುಗಳು ಕನ್ನಡಿಗರಿಗೆ ಹಾಗೂ ತಮಿಳರಿಗೆ ಸೇರಿವೆ. ಆ ಪ್ರಜ್ಞೆ ತಮಿಳರಿಗೆ ಇದೆ. ಕನ್ನಡಿಗರಿಗೆ ಇಲ್ಲ. ಕನ್ನಡ ಹಾಗೂ ತಮಿಳು, ಭಾರತದ ಪ್ರಾಚೀನ ಭಾಷೆಗಳೆನ್ನುವ ಹೆಮ್ಮೆ ತಮಿಳರಿಗೆ ಇರುವಂತೆ, ಕನ್ನಡಿಗರಿಗೂ ಇರಬೇಕು.

ಭಾರತದ ತುಂಬೆಲ್ಲ ಕನ್ನಡ ಸಂಸ್ಕೃತಿ ಪಸರಿಸಿಕೊಂಡಂತೆ, ಬೇರೆ ಯಾವ ಸಂಸ್ಕೃತಿಯೂ, ತಮಿಳು ಸಂಸ್ಕೃತಿ ಕೂಡ ಪಸರಿಸಿಲ್ಲ. ಕನ್ನಡದ ಪ್ರಾಚೀನ ಪರಂಪರೆ ಭವ್ಯವಾಗಿದೆ. ವೈಭವಪೂರ್ಣವಾಗಿದೆ. ಪ್ರಾಚೀನದ ಯಥಾರ್ಥವಾದ ಜ್ಞಾನ ಇದ್ದವರು, ಪ್ರಾಚೀನ ಪರಂಪರೆಗೆ ಸೇರಿದ ಇತಿಹಾಸ ಇರುವ ಭಾಷೆ ಕನ್ನಡ ಎಂಬ ತಿಳಿವಳಿಕೆಯನ್ನು ಹೊಂದಿರುತ್ತಾರೆ.

ಗ್ರೀಕ್ ಭಾಷೆ ಜಗತ್ತಿನ ಪ್ರಾಚೀನ ಭಾಷೆ ಎಂಬ ಬಗೆಗೆ ಅನುಮಾನ ಇಲ್ಲ. ಅದು ಲ್ಯಾಟಿನ್ ಭಾಷೆಯಷ್ಟೇ ಹಳೆಯದಾಗಿದೆ. ಆ ಗ್ರೀಕ್ ಭಾಷೆಯಲ್ಲಿ ಕನ್ನಡ ಮಾತುಗಳು ಇವೆಯೆನ್ನುವುದು ಕನ್ನಡಿಗರಿಗೆ ಮಾತ್ರವಲ್ಲದೇ, ಭಾಷಾ ತಜ್ಞರಿಗೆಲ್ಲ ರೋಮಾಂಚನ ಉಂಟು ಮಾಡುವ ಸಂಗತಿಯಾಗಿದೆ.

ಇಜಿಪ್ತದಲ್ಲಿ ಉತ್ಖನನ ಮಾಡುವಾಗ ಎರಡನೆಯ ಶತಮಾನದ ಒಂದು ಗ್ರೀಕ್ ನಾಟಕ, ಆಗ್ಝಿರಿಂಕಸ್ ಎಂಬ ಸ್ಥಳದಲ್ಲಿ ಸಿಕ್ಕಿದೆ. ಆ ನಾಟಕದಲ್ಲಿ ಕನ್ನಡ ಮಾತು ಇರುವುದನ್ನು ಭಾಷಾಶಾಸ್ತ್ರಜ್ಞರು ಕಂಡುಹಿಡಿದಿದ್ದಾರೆ. ಇದನ್ನು ಫಾದರ್ ಹೆರಾಸ್, ಮಂಜೇಶ್ವರ ಗೋವಿಂದ ಪೈ, ಪ್ರೊ. ಬಿ.ಎ. ಸಾಲತೊರೆ, ತಮ್ಮ ಬರಹಗಳಿಂದ ದೃಢಪಡಿಸಿದ್ದಾರೆ.

ಮಂಜೇಶ್ವರ ಗೋವಿಂದ ಪೈಗಳು ಇಂಡಿಯನ್ ಎಂಟಿಕ್ವೇರಿಯನ್ ಜರ್ನಲ್‌ದಲ್ಲಿ ಏಳೆಂಟು ಪುಟಗಳ ಸುದೀರ್ಘ ಲೇಖನ ಬರೆದು, ಆ ನಾಟಕದಲ್ಲಿ ಕನ್ನಡದ ಯಾವ ಯಾವ ಮಾತುಗಳು ಸೇರಿಕೊಂಡಿವೆ ಎನ್ನುವುದನ್ನು ನಮಗೆ ತಿಳಿಸಿದ್ದಾರೆ. ಕನ್ನಡ ಭಾಷೆ, ತಮಿಳು ಭಾಷೆಯಷ್ಟೇ ಪ್ರಾಚೀನವಾದುದೆಂದು ಇದು ತೋರಿಸುತ್ತದೆ.

ಕನ್ನಡ ಭಾಷಾತಜ್ಞರು ಹೇಳುವಂತೆ, ಕನ್ನಡ ಶಬ್ದಗಳು, ಎರಡನೆಯ ಶತಮಾನದ ಗ್ರೀಕ್ ನಾಟಕದಲ್ಲಿ ಉಪಯೋಗವಾಗಬೇಕಾದರೆ, ಆ ಕಾಲದಲ್ಲಿ ಆಗಲೇ ಕನ್ನಡ ಭಾಷೆಯು, ಗ್ರೀಕ್‌ರ ಗಮನ ಸೆಳೆಯುವಂಥ ಪ್ರೌಢಿಮೆಯನ್ನು ಪಡೆದುಕೊಂಡಿರಬೇಕು. ಸಾಗರೋತ್ತರ ಜನರು ಕನ್ನಡ ಭಾಷೆಯ ಬಗೆಗೆ ಆಕರ್ಷಿತರಾಗಬೇಕಾದರೆ, ಅದಕ್ಕೆ ಅಂಥ ಮಹತ್ವ ಇರಬೇಕೆನ್ನುವುದು ಸ್ಪಷ್ಟಪಡುತ್ತದೆ.

ಬಲೂಚಿ ಭಾಷೆಯಲ್ಲಿ ದ್ರಾವಿಡ ಭಾಷೆಯ ಪದಗಳಿವೆಯೆಂದೂ, ಅವು ಹೆಚ್ಚಾಗಿ ಕನ್ನಡ ಪದಗಳೆಂದೂ ಭಾಷಾಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ. ಕನ್ನಡವು, ಭಾರತದ ಪ್ರಾಚೀನ ಭಾಷೆ ಮಾತ್ರವಲ್ಲದೆ, ಜಗತ್ತಿನ ಪ್ರಾಚೀನ ಭಾಷೆಗಳಲ್ಲಿ ಒಂದು. ಪರಂಪರೆಯ ಭಾಷೆ ಎನ್ನುವ ಬಹುಮಾನಕ್ಕೆ ತಮಿಳಿನಂತೆ ಕನ್ನಡ ಭಾಷೆಯೂ ಅರ್ಹವಾಗಿದೆ. ಭಾರತದ ಪ್ರಾಚೀನ ಭಾಷೆಗಳಲ್ಲಿ, ತಮಿಳು ಮತ್ತು ಕನ್ನಡ ಎರಡೇ ಎರಡು ಹಳೆಯ ಭಾಷೆಗಳೆಂದಾಗ, ಅವುಗಳಲ್ಲಿ ಒಂದೇ ಒಂದಕ್ಕೆ ಪರಂಪರೆಯ ಬಹುಮಾನವನ್ನು ನೀಡಿ ಕನ್ನಡ ಭಾಷೆಯನ್ನು ಕಡೆಗಣಿಸುವುದು ಸರಿಯಲ್ಲ. ಭಾರತವು ತನ್ನ ಪರಂಪರೆಯ ಬಗೆಗೆ ಹೆಮ್ಮೆ ಪಟ್ಟುಕೊಳ್ಳಬೇಕಲ್ಲದೆ, ಅವುಗಳಲ್ಲಿ ಒಂದನ್ನು ಪುರಸ್ಕರಿಸಿ, ಇನ್ನೊಂದನ್ನು ತಿರಸ್ಕರಿಸುವುದು ಸರಿಯಲ್ಲ. ಕನ್ನಡಕ್ಕೆ ಕೂಡ ಕ್ಲಾಸಿಕಲ್ ಲ್ಯಾಂಗ್ವೇಜ್ ಶ್ರೇಷ್ಠ ವರ್ಗದ ಭಾಷೆ, ಎನ್ನುವ ಬಹುಮಾನ ಸಲ್ಲಿಸಬೇಕು. ಭಾರತ ಸರಕಾರದ ಮಾನವ ಸಂಪನ್ಮೂಲ ಅಭಿವೃದ್ಧಿ ಮಂತ್ರಿ ಶಾಖೆ ಕನ್ನಡದ ಶ್ರೇಷ್ಠತೆಯನ್ನು ಗಮನಿಸಬೇಕು.

ಸಂಸ್ಕೃತವನ್ನು ಬಿಟ್ಟರೆ, ಭಾರತದ ಪ್ರಾಚೀನ ಭಾಷೆಗಳೆನ್ನುವ ಬಹುಮಾನ ತಮಿಳು ಹಾಗೂ ಕನ್ನಡಗಳಿಗೆ ಸಲ್ಲುತ್ತದೆ. ಭಾರತದ ಮಿಕ್ಕುಳಿದ ಭಾಷೆಗಳೂ ಅವುಗಳ ನಂತರವೇ ಬಂದಿವೆ.*

* ಸೌಜನ್ಯ: ಹೊನ್ನಾರು ಮಾಲೆ, ಕನ್ನಡ ವಿ.ವಿ.



# ಶಾಸ್ತ್ರೀಯ ಸ್ಥಾನಮಾನದ ಮಕುಟ ನ್ಯಾಯಯುತ



ನಾಡೋಜ ಪ್ರೊ. ಕೆ.ಎಸ್. ನಿಸಾರ್ ಅಹಮದ್

ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನವನ್ನು ಪಡೆಯುವ ಬಗ್ಗೆಯೂ ನಮ್ಮ ಸಂಸದರ ಮತ್ತು ಇಲ್ಲಿನ ರಾಜಕೀಯ ಧುರೀಣರ ನಿರಾಸಕ್ತಿ, ಅಲಸ ಧೋರಣೆ ಬೇಸರ ಹುಟ್ಟಿಸುತ್ತದೆ. ಕೇಂದ್ರದಲ್ಲಿರಲಿ, ಉತ್ತರ ಭಾರತದ ಇತರ ರಾಜ್ಯಗಳಲ್ಲಿ ನಮ್ಮ ಮುಂದಾಳುಗಳ ಬಗೆಗಾಗಲಿ, ನಮ್ಮ ನಾಡಿನ ಬಗೆಗಾಗಲಿ ಇರುವ ತಾತ್ಸಾರದ ಮನೋಭಾವ ನಿಜಕ್ಕೂ ವಿಷಾದನೀಯ. ನೆರೆ ರಾಜ್ಯ ತನಗೆ ನಿಗದಿತವಾದ ಅನುದಾನಕ್ಕಿಂತ ಹಲವು ಪಟ್ಟಿನಷ್ಟು ಸದ್ದಿಲ್ಲದೆ ಲಪಟಾಯಿಸುತ್ತಿರುವಾಗ, ನಮ್ಮವರು ಅಗತ್ಯಕ್ಕಿಂತ ಕಡಿಮೆಯಷ್ಟನ್ನಾದರೂ ಮಂಜೂರು ಮಾಡಿಸಿ ತರುವುದರಲ್ಲಿ ವಿಫಲರಾಗುತ್ತಿರುವುದಂತೂ ಲಜ್ಜಾಸ್ಪದ ಸಂಗತಿ. ರಾಜ್ಯ, ಭಾಷೆ, ಸಂಸ್ಕೃತಿಗಳ ಹಿತ ಕಾಪಾಡುವುದರಲ್ಲಿ ನಮ್ಮ ಸಂಸದರಲ್ಲಿ ಒಗ್ಗಟ್ಟಿಲ್ಲದಿರುವುದು, ಪಕ್ಷದ ನಿಷ್ಠೆಯೇ ಎಲ್ಲಕ್ಕಿಂತ ಪರಮವೆಂದು ತಿಳಿದಿರುವುದು, ರಾಷ್ಟ್ರೀಯ ನಾಯಕರೆದುರು ಅದಬ್ಬಿನಿಂದ ವರ್ತಿಸುತ್ತಾ ಅವರ ಮುಖೋಲ್ಲಾಸ ಮಾಡುವುದು ಪುರುಷಾರ್ಥವೆಂದು ಭಾವಿಸಿರುವುದು, ನಮ್ಮ ನಾಡು ನುಡಿಯ ಹಿತಕ್ಕೆ ಅನೇಕ ದಶಕಗಳಿಂದ ಎಂತಹ ವಂಚನೆಯನ್ನು ಎಸಗಿದೆ ಎನ್ನುವುದನ್ನು ಹಿಂದಿನ ದಿನಪತ್ರಿಕೆಗಳ ಪುಟಗಳನ್ನು ತಿರುವಿ ಹಾಕಿದರೆ ಮನವರಿಕೆಯಾದೀತು.

ಹೆಚ್ಚು ಕಡಿಮೆ ತಮಿಳಿನಷ್ಟೇ ನಮ್ಮ ಸಿರಿಗನ್ನಡವೂ ಪ್ರಾಚೀನ. ಸ್ವಾಭಾವಿಕವಾಗಿ ಶಾಸ್ತ್ರೀಯ ಸ್ಥಾನಮಾನದ ಮಕುಟ ನಮ್ಮ ತಾಯ್ನುಡಿಯ ಮುಡಿಯ ಮೇಲೆ ವಿರಾಜಿಸಬೇಕಾದದ್ದು ನ್ಯಾಯಯುತವೇ. ಈಚೆಗೆ ಅದರ ಸದ್ದನ್ನು ಅಡಗಿಸುವ ತಂತ್ರ ಸಹ ನಡೆದಿರುವುದು ದೌರ್ಭಾಗ್ಯ. ಇದರ ಬಗ್ಗೆ ಜನ ಬೆಂಬಲ ಅನಿವಾರ್ಯ.

ಮೊದಲೇ ಸೂಚಿಸಿದಂತೆ ಬೆಂಗಳೂರು, ಮೈಸೂರು ಮುಂತಾದ ನಗರಗಳಲ್ಲಿ ಅನ್ಯ ಭಾಷಿಕ ಹಣ ಹದ್ದುಗಳ ದೊಡ್ಡ ದೊಡ್ಡ ಕಾರ್ಖಾನೆಗಳಲ್ಲಾಗಲಿ, ವಿವಿಧ ಉದ್ಯಮ ಸಂಸ್ಥೆಗಳಲ್ಲಾಗಲಿ, ಮಾಹಿತಿ ತಂತ್ರಜ್ಞಾನದ ಅಮರಾವತಿ ಸದೃಶ ಬೃಹತ್ ಸಂಕೀರ್ಣಗಳಲ್ಲಿ ಆಗಲಿ ನಮ್ಮ ಜನರಿಗೆ ಲಭಿಸಿರುವ ಅಲ್ಪಾತಿಅಲ್ಪ ಉದ್ಯೋಗಾವಕಾಶಗಳು ಎಂಥವರನ್ನಾದರೂ ಆಕ್ರೋಶದಿಂದ ಕೆರಳಿಸುವಂಥವು. ಕನ್ನಡ ನಾಡಿನ ನೆಲ, ಜಲ, ಗಾಳಿ, ವಿದ್ಯುಚ್ಛಕ್ತಿ ಮೊದಲಾದ ಅತ್ಯಮೂಲ್ಯ ಸವಲತ್ತುಗಳನ್ನು ಕಬಳಿಸುತ್ತ, ಕನ್ನಡಿಗರ ಬದಲು ಪರ ಭಾಷಿಕರನ್ನು ತಂದು ಗಿಡಿಯುತ್ತಿರುವುದನ್ನು ನೋಡಿಯೂ ನೋಡದಂತಿರುವ ನಮ್ಮ ಆಡಳಿತ ವ್ಯವಸ್ಥೆಯ ಹಾಗೂ ಮಹಾ ಜನತೆಯ ಔದಾಸೀನ್ಯ, ನಿಷ್ಕ್ರಿಯ ಪ್ರವೃತ್ತಿಗಳಿಗೆ ಏನೆನ್ನಬೇಕೋ ಕಾಣೆ. ಈ ನಿಟ್ಟಿನಲ್ಲಿ ಕೆಲವು ಕನ್ನಡ ಪರ ಸಂಘಟನೆಗಳು ಸಾರ್ವಜನಿಕ ಆಸ್ತಿ ಪಾಸ್ತಿಗಳಿಗೆ ಹಾನಿ ಮಾಡದೆ ಈ ಅನ್ಯಾಯವನ್ನು ಖಂಡಿಸಿ ಪ್ರತಿಭಟಿಸುತ್ತಿರುವುದು ಅಭಿಮಾನದ ಸಂಗತಿ. ಇಂಥವರ ಪೀಳಿಗೆ ವರ್ಧಿಸಲಿ. ಸಂಬಂಧಪಟ್ಟವರ ಕಣ್ತೆರೆಸುವುದರಲ್ಲಿ ಇಂತಹ ಕನ್ನಡದ ಕಟ್ಟಾಳುಗಳ ಪ್ರಯತ್ನ ಪರಿಶ್ರಮಗಳು ಸಫಲವಾಗಲಿ.*

* ಶಿವಮೊಗ್ಗದಲ್ಲಿ ನಡೆದ ೭೩ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರ ಭಾಷಣ, ೨೦-೨೩ ಡಿಸೆಂಬರ್ ೨೦೦೬

# ಶಾಸ್ತ್ರೀಯ ಭಾಷಾ ದರ್ಜೆ



ಡಾ॥ ಶಾಂತರಸ ಹೆಂಬೇರಾಳು

ಎರಡು ಸಾವಿರಕ್ಕೂ ಮಿಕ್ಕು ದೀರ್ಘ ಇತಿಹಾಸವುಳ್ಳ ಕನ್ನಡ ಭಾಷೆಯನ್ನು ಶಾಸ್ತ್ರೀಯ ಭಾಷಾ ದರ್ಜೆಗೇರಿಸಬೇಕು. ಭಾರತ ಸಂವಿಧಾನವು ಒಪ್ಪಿಕೊಂಡಿರುವ ಎಲ್ಲ ರಾಷ್ಟ್ರೀಯ ಭಾಷೆಗಳನ್ನು ಶಾಸ್ತ್ರೀಯ ದರ್ಜೆಗೇರಿಸುವ ಮೂಲಕ ಭಾಷಾ ಸಮಾನತೆ ಎತ್ತಿ ಹಿಡಿಯಬೇಕು. ಅರ್ಥಾತ್ ಎಲ್ಲ ಭಾಷೆಗಳ ಬೆಳವಣಿಗೆಗೆ ಬೇಕಾಗುವ ಸವಲತ್ತುಗಳನ್ನು ಒದಗಿಸಬೇಕು. ಭಾಷೆಗಳಲ್ಲಿ ಅಶುದ್ಧ, ಅಶಾಸ್ತ್ರೀಯ ಎಂಬ ಪರಿವ್ಯಾಖ್ಯಾನವೇ ತಪ್ಪು. ಪ್ರತಿಯೊಂದು ಭಾಷೆ ಮತ್ತು ಸಂಸ್ಕೃತಿಗೆ ತನ್ನದೆ ಸ್ವಾಯತ್ತ ಅಸ್ತಿತ್ವ ಇರುತ್ತದೆ. ಹೀಗಿರುವಾಗಲೂ ಕೆಲವೊಂದು ಭಾಷೆಗಳಿಗೆ ಶಾಸ್ತ್ರೀಯವೆಂದು ಪಟ್ಟಕಟ್ಟುವ ಮೂಲಕ ವೈಭವೀಕರಿಸುವುದು ಕೂಡಾ ರಾಜಕೀಯ ಪ್ರೇರಿತ ಲಾಬಿಯೇ ಆಗಿರುತ್ತದೆ. ಕೇಂದ್ರ ಸರಕಾರವು ತಮಿಳು ಭಾಷೆಯನ್ನು "ಅಭಿಜಾತ ಸಾಹಿತ್ಯ" (Classical Language) ಎಂದು ಮಾನ್ಯ ಮಾಡಿತು. ಅದರ ಪರಿಣಾಮವಾಗಿ ಭಾರತದ ಹಲವು ವಿಶ್ವವಿದ್ಯಾಲಯಗಳಲ್ಲಿ ಅಧ್ಯಯನ ಪೀಠಗಳು ಆರಂಭವಾದವು. ಆದರೆ ತಮಿಳಿನಷ್ಟೇ ಶ್ರೀಮಂತವಾದ ಕನ್ನಡ ಭಾಷೆಗೆ ಆ ಸ್ಥಾನಮಾನ ಸಿಗಲಿಲ್ಲ. ಕೇಂದ್ರದಲ್ಲಿ ನಮ್ಮ ಪ್ರತಿನಿಧಿಗಳಾಗಿರುವ ಲೋಕಸಭೆಯ ಮತ್ತು ರಾಜ್ಯಸಭೆಯ ಸದಸ್ಯರು ಇದಕ್ಕಾಗಿ ಯಾವುದೇ ಹೋರಾಟವನ್ನು ಮಾಡಲಿಲ್ಲ. ಕೇಂದ್ರದ ಯೋಜನಾ ಸಚಿವರಾದ ಶ್ರೀ ಎಂ.ವಿ. ರಾಜಶೇಖರನ್ ಅವರ ಪ್ರಯತ್ನಕ್ಕೆ ನಮ್ಮ ಸಂಸದರು ಬೆಂಬಲ ಸೂಚಿಸಿ ಹೋರಾಟ ಮಾಡಿದ್ದರೆ ಕನ್ನಡಕ್ಕೆ ಆ ಸ್ಥಾನಮಾನ ಬರಬಹುದಿತ್ತು. ನಮ್ಮವರ ದಿವ್ಯ ನಿರ್ಲಕ್ಷದಿಂದಾಗಿ ಇಂದಿಗೆ ಇಡೀ ಉತ್ತರ ಭಾರತದಲ್ಲಿ ಒಂದೇ ಒಂದು ವಿಶ್ವವಿದ್ಯಾಲಯವು ಕೂಡಾ ಕನ್ನಡದ ಬಗ್ಗೆ ಸಂಶೋಧನಾ ಅಧ್ಯಯನ ನಡೆಸಲಾಗದ ಸ್ಥಿತಿಗೆ ಬಂದಿದೆ. ಬನಾರಸ್ ಹಿಂದೂ ವಿಶ್ವವಿದ್ಯಾಲಯದಲ್ಲಿ ಆರಂಭವಾಗಿದ್ದ ಕನ್ನಡ ಪೀಠವು ಕೂಡಾ ಇಂದು ಮುಚ್ಚಿಹೋಗಿದೆ. ಬಾಂಬೆ, ಮದ್ರಾಸ್, ಹೈದ್ರಾಬಾದ್ ಮುಂತಾದ ಕಡೆಗಳಲ್ಲಿರುವ ಕನ್ನಡ ಪೀಠಗಳು ಮುಚ್ಚುವ ಹಂತದಲ್ಲಿವೆ. ಆದ್ದರಿಂದ ಕನ್ನಡದ ಪ್ರಜ್ಞಾವಂತ ಜನತೆ ಜನಪ್ರತಿನಿಧಿಗಳನ್ನು ಎಚ್ಚರಗೊಳಿಸಬೇಕಿದೆ. ಕನ್ನಡ ಭಾಷೆಯನ್ನು "ಶಾಸ್ತ್ರೀಯ ಸಾಹಿತ್ಯ"ದ ದರ್ಜೆಗೇರಿಸುವ ಮೂಲಕ ದೊರೆಯಬೇಕಾದ ಎಲ್ಲ ಸೌಲಭ್ಯಗಳನ್ನು ಕೊಡಮಾಡುವಂತೆ ಒತ್ತಾಯ ತರಬೇಕು. ಗುರಿ ಮುಟ್ಟುವವರೆಗೂ ನಾವೆಲ್ಲ ಒಕ್ಕೊರಲಿನ ಹೋರಾಟ ಮಾಡಬೇಕು.*

* ಬೀದರ್‌ನಲ್ಲಿ ನಡೆದ ೭೧ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರ ಭಾಷಣ, ೨೭–೨೯ ಜನವರಿ ೨೦೦೭

# ಶಾಸ್ತ್ರೀಯ ಭಾಷೆ



ಪ್ರೊ. ಎಲ್.ಎಸ್. ಶೇಷಗಿರಿ ರಾವ್

ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಮನ್ನಣೆಯನ್ನು ನೀಡುವ ವಿಷಯ. ಹಲವರು ವಿದ್ವಾಂಸರು ಈ ಮನ್ನಣೆ ಲಭ್ಯವಾಗದಿದ್ದರೆ ನಷ್ಟವಿಲ್ಲ ಎಂದು ಹೇಳುವುದು ನನಗೆ ಆಶ್ಚರ್ಯವನ್ನುಂಟು ಮಾಡುತ್ತದೆ. ಇಂದು ಭಾರತ ಸರ್ಕಾರವು ಜಗತ್ತಿಗೆ ಹೇಳುತ್ತಿದೆ, "ಭಾರತದಲ್ಲಿ ಒಂದೂವರೆ ಸಾವಿರ ವರ್ಷಗಳಷ್ಟು ಇತಿಹಾಸವಿರುವ ಭಾಷೆಗಳು ಎರಡೇ ತಮಿಳು ಮತ್ತು ಸಂಸ್ಕೃತ". ಇದು ಕನ್ನಡಕ್ಕೆ ಅಪಚಾರವಲ್ಲವೆ? ಇದನ್ನೇಕೆ ಸಹಿಸಿಕೊಳ್ಳಬೇಕು? ಅಲ್ಲದೆ, ತಮಿಳು ಭಾಷೆಯ ಬೆಳವಣಿಗೆಗೆಂದೇ ಆಗಲೇ ಮೈಸೂರಿನಲ್ಲಿ ಕಟ್ಟಡ ಸಿದ್ಧವಾಗಿದೆ. ಇದರ ಬೆಳವಣಿಗೆಗಾಗಿ ಯೋಜನೆ ಸಿದ್ಧವಾಗಿದೆ. ಹಲವು ಕೇಂದ್ರ ವಿಶ್ವವಿದ್ಯಾನಿಲಯಗಳಲ್ಲಿ ತಮಿಳು ಪೀಠಗಳು ಸ್ಥಾಪನೆಯಾಗಲಿವೆ. ಕನ್ನಡಿಗರೂ ಕೇಂದ್ರ ಸರ್ಕಾರಕ್ಕೆ ತೆರಿಗೆಗಳನ್ನು ಕೊಡುವುದಿಲ್ಲವೆ? ಈ ವಿಷಯುವನ್ನು ಕುರಿತು ಸ್ನೇಹಿತರೊಬ್ಬರು ಪ್ರತ್ಯೇಕವಾಗಿ ಮಾತನಾಡಲಿರುವುದರಿಂದ ನಾನು ಇದನ್ನು ಬೆಳೆಸುವುದಿಲ್ಲ. ಒಂದು ಮಾತನ್ನು ನಿವೇದಿಸಬಯಸುತ್ತೇನೆ. ತಮಿಳುನಾಡಿನ ಭಾಷಾ ವಿದ್ವಾಂಸರಾದ ಡಾ. ಇರಾವತಿ ಮಹದೇವನ್ ಅವರ 'Early Tamil Epigraphy' ಎನ್ನುವ ಪುಸ್ತಕದಿಂದ ಈ ಮಾತುಗಳನ್ನು ಉದ್ಧರಿಸಬಯಸುತ್ತೇನೆ.

"ಲಭ್ಯವಾಗಿರುವ ಅತ್ಯಂತ ಹಳೆಯ ಕನ್ನಡ ಶಾಸನಗಳು ಮತ್ತು ಸಾಹಿತ್ಯಕ್ಕೆ ಮೊದಲಿನಿಂದಲೇ ಸುಮಾರು ಕ್ರಿಪೂ. ಎರಡನೆಯ ಶತಮಾನದಿಂದ ಕ್ರಿ.ಶ. ನಾಲ್ಕನೆಯ ಶತಮಾನದ ಅವಧಿಯಲ್ಲಿ ತಮಿಳು–ಬ್ರಾಹ್ಮಿ ಲಿಪಿಗಳ ಮೇಲೆ ಹಳಗನ್ನಡದ ಪ್ರಭಾವವನ್ನು ಈ ಅಧ್ಯಯನವು ಬೆಳಕಿಗೆ ತಂದಿದೆ". ಎಂದರೆ, ತಮಿಳುನಾಡಿನ ಈ ಸಂಶೋಧಕರು ಹೇಳುವಂತೆ ಕನ್ನಡ ಲಿಪಿಯು ಕ್ರಿಪೂ. ಎರಡನೆಯ ಶತಮಾನದ ಹೊತ್ತಿಗೆ ಸಾಕಷ್ಟು ಕಾಲ ಅಸ್ತಿತ್ವದಲ್ಲಿದ್ದಿರಬೇಕು.

ಒಂದೂವರೆ ವರ್ಷಕ್ಕಿಂತ ಹಿಂದೆ ಪ್ರಧಾನಿ ಡಾ. ಮನಮೋಹನ್‌ಸಿಂಗ್ ಅವರು ಬೆಂಗಳೂರಿಗೆ ಬಂದಾಗ ರಾಜಭವನದಲ್ಲಿ ನಡೆದ ಸಭೆಯಲ್ಲಿ ಡಾ. ಪಾಟೀಲ ಪುಟ್ಟಪ್ಪನವರು, ಡಾ. ದೇಜಗೌ, ಡಾ. ಎಂ. ಚಿದಾನಂದಮೂರ್ತಿ ಮತ್ತು ನಾನು ಭಾಷಣ ಮಾಡಿ ಕನ್ನಡಕ್ಕಾದ ಅನ್ಯಾಯವನ್ನು ವಿವರಿಸಿದೆವು. ಆದರೆ ಕೇಂದ್ರ ಸರ್ಕಾರವು ನೇಮಿಸಿದ ತಜ್ಞರ ಸಮಿತಿಯ ಸಭೆಯನ್ನು ಸಹ ಕರೆದಿಲ್ಲ. ಶಾಸ್ತ್ರೀಯ ಭಾಷೆಯ ಪ್ರಕರಣ ಕೇಂದ್ರ ಸರ್ಕಾರವು ಕನ್ನಡಿಗರ ವಿಷಯದಲ್ಲಿ ಉದ್ದೇಶಪೂರ್ವಕವಾಗಿ ಮಾಡಿದ ಅವಮಾನ.

* ಉಡುಪಿಯಲ್ಲಿ ನಡೆದ ೭೪ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರ ಭಾಷಣ, ೧೨–೧೫ ಡಿಸೆಂಬರ್ ೨೦೦೭.

# ಶಾಸ್ತ್ರೀಯ ಭಾಷೆಯಾಗಿ ಕನ್ನಡ–ಏನು? ಏಕೆ



ಡಾ|| ಎಂ. ಚಿದಾನಂದಮೂರ್ತಿ

ಒಚಿದು ವರ್ಷದ ಹಿಂದೆ ತಮಿಳು ಭಾಷೆಯನ್ನು ಕೇಂದ್ರ ಸರ್ಕಾರವು 'ಶಾಸ್ತ್ರೀಯ' (ಕ್ಲಾಸಿಕಲ್) ಭಾಷೆಯಾಗಿ ಘೋಷಿಸಿದ ಬಳಿಕ ಅಷ್ಟೇ ಪ್ರಾಚೀನವೂ ಅಷ್ಟೇ ಸಮೃದ್ಧವೂ ಆದ ಭಾಷೆ ಸಾಹಿತ್ಯಗಳನ್ನು ಪಡೆದಿರುವ ಕನ್ನಡವನ್ನು 'ಶಾಸ್ತ್ರೀಯ' ಭಾಷೆಯೆಂದು ಘೋಷಿಸಲು ಕೇಂದ್ರ ಸರ್ಕಾರಕ್ಕೆ ಒತ್ತಾಯಿಸಿ ಪತ್ರ ಬರೆಯಲು ನಿರ್ಧರಿಸಿ ಕರ್ನಾಟಕ ಸರ್ಕಾರವು ಆ ಬಗ್ಗೆ ವರದಿ ತಯಾರಿಸಲು ನಾನು ಸೇರಿದಂತೆ ನಾಲ್ವರು ಸದಸ್ಯರ ಸಮಿತಿಯನ್ನು ನೇಮಕ ಮಾಡಿತು. (ಪ್ರೊ. ಎಲ್.ಎಸ್. ಶೇಷಗಿರಿರಾವ್, ಡಾ. ಬಿ.ಬಿ. ರಾಜಪುರೋಹಿತ, ಡಾ. ಎನ್.ಎಸ್. ತಾರಾನಾಥ–ಇವರು ಉಳಿದ ಮೂವರು ಸದಸ್ಯರು). ಆ ಸಮಿತಿಯ ಸದಸ್ಯರು ಮೂರು ನಾಲ್ಕು ತಿಂಗಳು ಮಾಹಿತಿ ಸಂಗ್ರಹಿಸಿ, ಹಲವು ಬಾರಿ ಸಭೆ ಸೇರಿ ಅಂತಿಮವಾಗಿ ವರದಿಯನ್ನು ಸಿದ್ಧಪಡಿಸಿ ಆ ಮಾಹಿತಿಗೆ ಮೂಲವಾದ ಅನೇಕ ವಿದ್ವಾಂಸರ ಇಂಗ್ಲಿಷ್ ಬರಹಗಳ ಮೂವತ್ತೊಂದು ಅನುಬಂಧಗಳ ಬೆರಳಚ್ಚು ಪ್ರತಿಗಳ ದಾಖಲೆಗಳೊಂದಿಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಒಪ್ಪಿಸಿತು. ಆ ವರದಿಯು ಕರ್ನಾಟಕ ಸರ್ಕಾರದಿಂದ ೧೮.೫.೦೫ರಂದು, ಕೇಂದ್ರ ಸರ್ಕಾರಕ್ಕೆ ಹೋಗಿದೆ– ಆ ಇಂಗ್ಲಿಷ್ ವರದಿಯ ಸಾರಾಂಶ ಹೀಗಿದೆ. ('ಕ್ಲಾಸಿಕಲ್' ಪದಕ್ಕೆ 'ಶಾಸ್ತ್ರೀಯ' ಎಂಬುದು ಸರಿಯಾದ ಸಂವಾದಿ ಪದ ಹೌದೇ ಅಲ್ಲವೇ ಎಂಬುದರ ಚರ್ಚೆ ಈ ಲೇಖನಕ್ಕೆ ಹೊರಗಾದುದು).

ಕೇಂದ್ರ ಸರ್ಕಾರವು ಒಂದು ಭಾಷೆಯನ್ನು 'ಕ್ಲಾಸಿಕಲ್' ಎಂದು ಘೋಷಿಸಲು ನಾಲ್ಕು ಮಾನದಂಡಗಳನ್ನು ನಿಗದಿಪಡಿಸಿದೆ.

**ಮಾನದಂಡ** ೧: 'ಭಾಷೆಯ ದಾಖಲಿತ ಚರಿತ್ರೆ ಅಥವಾ ಪ್ರಾಚೀನ ದಾಖಲೆಗಳು ಸಾವಿರ ವರ್ಷಗಳಿಗೂ ಹಿಂದಿನವಾಗಿರಬೇಕು'

ಕನ್ನಡ ಭಾಷೆಯ ಅತ್ಯಂತ ಪ್ರಾಚೀನ ಲಿಖಿತ ದಾಖಲೆ, ಡಿಎಲ್. ನರಸಿಂಹಾಚಾರ್ ಗುರುತಿಸಿರುವಂತೆ ಕ್ರಿ.ಪೂ. ೨೫೨ರ ಅಶೋಕನ ಬ್ರಹ್ಮಗಿರಿ ಶಾಸನದ 'ಇಸಿಲ' ಎಂಬ ಕನ್ನಡ ಸ್ಥಳನಾಮ. 'ಕರ್ನಾಟಕ' ಹೆಸರು ಅದಕ್ಕಿಂತ ಹಿಂದಿನ ಸಂಸ್ಕೃತ ಮಹಾಭಾರತದಲ್ಲಿಯೇ ದಾಖಲಾಗಿದೆ. (ಇದರ ಕಾಲ ಅನಿರ್ದಿಷ್ಟ). ಕ್ರಿ.ಶ. ೧–೨ನೇ ಶತಮಾನಗಳಿಗೆ ಸೇರಿದೆ. ಆಕ್ಸಿರಿಂಖಸ್ ಪಪ್ಪೈರಿ



ಎಂದೇ ಹೆಸರಾದ ಗ್ರೀಕ್ ಪ್ರಹಸನ ನಾಟಕಗಳಲ್ಲಿ ಕನ್ನಡ ಭಾಷೆಯ ಸಂಭಾಷಣೆಗಳು ದಾಖಲಾಗಿವೆ. ಈ ಬಗ್ಗೆ ಎಂ. ಗೋವಿಂದ ಪೈ, ಸ್ಟಾನ್‌ಫರ್ಡ್ ಬಿ. ಸ್ಟೀವರ್, ತೀ.ನಂ. ಶ್ರೀಕಂಠಯ್ಯನವರು ದಾಖಲಿಸಿರುವಂತೆ ಕನ್ನಡ ಭಾಷೆಯ ಪ್ರಾಚೀನತೆ ಕ್ರಿಸ್ತಪೂರ್ವದಷ್ಟು ಹಿಂದಕ್ಕೆ ಹೋಗುತ್ತದೆಯೆಂಬುದು ವಿವಾದಾತೀತ.

ಕನ್ನಡದ ಮೊದಲನೆಯ ಪೂರ್ಣ ಪ್ರಮಾಣದ ದಾಖಲೆ ಸುಮಾರು ಕ್ರಿ.ಶ. ೪೫೦ ರ ಹನ್ಮಿಡಿ ಶಾಸನ (ಇದೇ ನಿಜವಾದ ರೂಪ. 'ಹಲ್ಮಿಡಿ' ಅಲ್ಲ). ಎಂ.ಎಚ್. ಕೃಷ್ಣರವರು ಆ ಶಾಸನವು ಕ್ರಿ.ಶ. ಐದನೆಯ ಶತಮಾನದ್ದು ಎಂದು ಹೇಳಿರುವುದನ್ನು ಒಟ್ಟಾರೆ ಎಲ್ಲ ಶ್ರೇಷ್ಠ ವಿದ್ವಾಂಸರು, ಭಾಷಾವಿಜ್ಞಾನಿಗಳು ಒಪ್ಪಿದ್ದಾರೆ. ಸುಮಾರು ಕ್ರಿ.ಶ. ೫೦೦ರ 'ಬಿಣಮಣಿ ಅಂತು ಭೋಗಿ' ಎಂದು ಬಾದಾಮಿ ಚಾಲುಕ್ಯರ (೬ನೇ.ಶ.) ಕಾಲದಲ್ಲಿ ಸಾಹಿತ್ಯದ ಅಥವಾ ಕಾವ್ಯಭಾಷೆಯಾಗಿ ವಿಕಾಸ ಹೊಂದಿತು.

ಕನ್ನಡವು ತಮಿಳಿನಷ್ಟೇ ಪ್ರಾಚೀನವಾದುದು ಎಂಬುದನ್ನು ಡಾ. ಪಿ.ಎಸ್. ಸುಬ್ರಹ್ಮಣ್ಯಂ ಸ್ಪಷ್ಟಪಡಿಸಿದ್ದಾರೆ. ಆ ಭಾಷಾವಿಜ್ಞಾನಿಯ ಪ್ರಕಾರ ಮೂಲ ದ್ರಾವಿಡದಿಂದ ಮೊದಲು ಮೂಲ ದಕ್ಷಿಣ ದ್ರಾವಿಡ ಭಾಷೆಯು ಕವಲೊಡೆದು ಆ ಮೂಲ ದಕ್ಷಿಣ ದ್ರಾವಿಡ ಭಾಷೆಯಿಂದ ಕನ್ನಡ ಮತ್ತು ತಮಿಳುಗಳು ಬೇರೆಯಾದುವು; ಅವು ಕ್ರಮೇಣ ಸ್ವತಂತ್ರ ಭಾಷೆಗಳಾದವು. ಅವರ ಕೃತಿ 'ದ್ರಾವಿಡಿಯನ್ ವರ್ಬ್ ಮಾರ್ಫಾಲಜಿ' (Dravidian Verb Morphology) ನೀಡಿರುವ ದ್ರಾವಿಡ ಭಾಷಾ ವಂಶವೃಕ್ಷವು ಸ್ಪಷ್ಟ ಚಿತ್ರವನ್ನು ನೀಡುತ್ತದೆ. ಪ್ರಾಚೀನತೆಯಲ್ಲಿ ಎರಡೂ ಸಮಾನ ದಾಖಲಿತ ಭಾಷೆಯಾಗಿ ತಮಿಳು ಕನ್ನಡಕ್ಕಿಂತ ಸ್ವಲ್ಪ ಹಿಂದಿನದಾಗಿರಬಹುದು ಅಷ್ಟೇ.

**ಮಾನದಂಡ ೨:** 'ಆ ಭಾಷಿಕ ಜನರು ಮೌಲಿಕವೆಂದು ಭಾವಿಸುವ ಪ್ರಾಚೀನ ಸಾಹಿತ್ಯ ಅಥವಾ ಗ್ರಂಥಗಳು ಆ ಭಾಷೆಯಲ್ಲಿರಬೇಕು'.

ಕನ್ನಡದ ಮೊತ್ತ ಮೊದಲ ಲಭ್ಯ ಕೃತಿ 'ಕವಿರಾಜಮಾರ್ಗ'ವು (ಕಾಲ ಸುಮಾರು ಕ್ರಿ.ಶ. ೮೫೦) ಅಲಂಕಾರ ಶಾಸ್ತ್ರದ ಕೃತಿಯಾಗಿದ್ದು ಅದರಲ್ಲಿ ಶ್ರೀವಿಜಯ, ಕವೀಶ್ವರ, ಲೋಕಪಾಲ ಇವರೇ ಮೊದಲಾದ ಗದ್ಯ ಪದ್ಯ ಕವಿಗಳನ್ನು ಹೆಸರಿಸಲಾಗಿದೆ. ಅನುಮಾನವೇ ಇಲ್ಲ ಕನ್ನಡ ಸಾಹಿತ್ಯವು ಒಂಬತ್ತನೇ ಶತಮಾನಕ್ಕಿಂತಲೂ ಹಿಂದಿನದಾಗಿದೆ. ಆರನೇ ಶತಮಾನದಲ್ಲಿದ್ದನೆಂದು ಗೋವಿಂದ ಪೈ ತರ್ಕಿಸಿರುವ 'ಚೂಡಾಮಣಿ' ಎಂಬ ಕನ್ನಡ ಕೃತಿಯ ಕರ್ತೃ ಶ್ರೀವರ್ಧದೇವ. ಇಡೀ ಭಾರತದಲ್ಲಿ ಸಾಹಿತ್ಯದ ಪ್ರಾಚೀನತೆ ದೃಷ್ಟಿಯಿಂದ ಕನ್ನಡವು ಮಾತ್ರ ಸಂಸ್ಕೃತ, ಪ್ರಾಕೃತಗಳಿಗಿಂತ ಈಚಿನದಾಗಿದ್ದು, ಉಳಿದ ಭಾರತೀಯ ಸಾಹಿತ್ಯಗಳಿಗಿಂತ ಹಿಂದಿನ ಹಳೆಯ ಸಾಹಿತ್ಯವನ್ನು ಹೊಂದಿದೆ. (ಬಹುಶಃ ತಮಿಳನ್ನು ಹೊರತುಪಡಿಸಿ), ಒಂಬತ್ತನೇ ಶತಮಾನದಿಂದ ಮುಂದೆ ಕನ್ನಡ ಸಾಹಿತ್ಯದ ಸುವರ್ಣ ಯುಗವೇ ಆರಂಭಗೊಂಡು ಪಂಪ, ರನ್ನ, ಪೊನ್ನ, ನಾಗವರ್ಮ, ದುರ್ಗಸಿಂಹ, ನಯಸೇನ ಇಂತಹ ಮಹಾ ಕವಿಗಳನ್ನು ಸೃಷ್ಟಿಸಿತು. ಪಂಪನು ತನ್ನ 'ಆದಿಪುರಾಣ'ವನ್ನು ಕ್ರಿ.ಶ.೯೪೧–೨ ರಲ್ಲಿ ರಚಿಸಿರುವುದಾಗಿ ಖಚಿತ ತೇದಿ ನೀಡಿದ್ದಾನೆ. ಕನ್ನಡದಲ್ಲಿ ಶಾಸ್ತ್ರ ಅಥವಾ ವಿಜ್ಞಾನ– ವಾಙ್ಮಯಕ್ಕೆ ಒಂಬತ್ತನೇ ಶತಮಾನದಿಂದ ಮುಂದೆ ದೊಡ್ಡ ಚರಿತ್ರೆಯೇ ಇದೆ. ಸುಮಾರು ಕ್ರಿ.ಶ. ೧೫೦೦ರಲ್ಲಿ ರಚಿತವಾದ ನಿಜಗುಣ ಶಿವಯೋಗಿಗಳ 'ವಿವೇಕ ಚಿಂತಾಮಣಿ'ಯು ೫೯೨ ವಿಷಯಗಳನ್ನು ತಿಳಿಸುತ್ತಿದ್ದು ಕನ್ನಡದ ಪ್ರಪ್ರಥಮ ವಿಶ್ವಕೋಶವೆನ್ನಿಸುತ್ತದೆ. ಪಂಪ, ರನ್ನ, ರಾಘವಾಂಕ, ಕುಮಾರವ್ಯಾಸ, ಚಾಮರಸ, ಲಕ್ಷ್ಮೀಶ ಇವರೇ ಮೊದಲಾದ ನೂರಾರು ಕವಿಗಳ ಕಾವ್ಯಗಳು ಜನರ ಮನಸ್ಸನ್ನು ಉದ್ದಕ್ಕೂ ಸೂರೆಗೊಂಡಿವೆ.

**ಮಾನದಂಡ ೩:** 'ಸಾಹಿತ್ಯ ಸಂಪ್ರದಾಯವು ಮೌಲಿಕ ಅಥವಾ ಸ್ವಂತದ್ದಾಗಿದ್ದು Original ಯಾವುದೇ ಇನ್ನೊಂದು ಭಾಷೆಯಿಂದ ಸ್ವೀಕರಿಸಿರುವಂತಹುದಾಗಿರಬಾರದು'

ಕನ್ನಡ ಸಾಹಿತ್ಯದ ಶ್ರೇಷ್ಠ ಪರಂಪರೆ ಹತ್ತನೇ ಶತಮಾನದ ಪಂಪನಿಂದ ಆರಂಭವಾಗಿದ್ದು ತನ್ನದೇ ವೈಶಿಷ್ಟ್ಯಗಳನ್ನು ಹೊಂದಿದೆ. ಹಿಂದೂ, ಜೈನ ಸಂಪ್ರದಾಯಗಳ ಕತೆಗಳನ್ನಿಟ್ಟುಕೊಂಡು ಎರಡೆರಡು ಮಹಾಕಾವ್ಯ ಬರೆಯುವುದು (ಉದಾ: ಪಂಪ, ಪೊನ್ನ, ರನ್ನ). ಸಾಂಪ್ರದಾಯಕ ಮತ್ತು ದೇಸೀ ಶೈಲಿಗಳ ಸಮನ್ವಯ (ಇದು ವೀರಶೈವ, ಬ್ರಾಹ್ಮಣ ಕವಿಗಳಿಗೂ ಅನ್ವಯವಾಗುತ್ತದೆ). ಕಾವ್ಯಗಳಲ್ಲಿ ವೃತ್ತ, ಕಂದ, ರಗಳೆ ಮುಂತಾದ ಸಂಸ್ಕೃತ, ಪ್ರಾಕೃತ ಮೂಲದ ಛಂದೋರೂಪಗಳಲ್ಲದೆ ತ್ರಿಪದಿ ಇತ್ಯಾದಿ ದೇಸಿ ಛಂದೋರೂಪಗಳ ಬಳಕೆ ಇವು ಗಮನಾರ್ಹ ಅಂಶಗಳು. ಪೌರಾಣಿಕ ಐತಿಹಾಸಿಕ ವ್ಯಕ್ತಿಗಳನ್ನು ಸಮೀಕರಿಸಿ ಕಾವ್ಯರಚನೆ ಆಗಿದೆ. (ಉದಾ: ಅರ್ಜುನ- ಅರಿಕೇಸರಿ). ಪಂಪ ಮಹಾಕವಿಯಂತೂ ತನ್ನ ಪಂಪ ಭಾರತದಲ್ಲಿ ವ್ಯಾಸ ಭಾರತದ ಕತೆಯ ನೆಪದಲ್ಲಿ ತನ್ನ ಕಾಲದ (೧೦ ಶ.ದ.) ಕರ್ನಾಟಕದ ಯುಗಧರ್ಮವನ್ನು (ethos) ನಿರೂಪಿಸಿದ್ದಾನೆ. ಅವನ ಕೃತಿಯ ಮೂಲಕ ಕರ್ನಾಟಕದ ಅಂದಿನ ಯುಗಧರ್ಮ ಅಭಿವ್ಯಕ್ತಗೊಂಡಿದೆ. ಅವನ ಕಾಲದ ಬದುಕಿನ ಮೌಲ್ಯಗಳು ಅವನ ನೆಪಮಾತ್ರದ ಭಾರತ ಕಥಾವಸ್ತುವಿನ ಮೂಲಕ ಸಾಕಾರಗೊಂಡಿದೆ.

ಹನ್ನೆರಡನೆಯ ಶತಮಾನದ ಉತ್ತರಾರ್ಧದ ಕವಿ ಹರಿಹರನು ನೂರಿಪ್ಪತ್ತು ಶಿವಶರಣರ ಕತೆಗಳನ್ನು ಸಮಕಾಲೀನ ಭಾಷೆಯಲ್ಲಿ ರಗಳೆ ಛಂದಸ್ಸಿನಲ್ಲಿ ನಿರೂಪಿಸಿದ್ದಾನೆ. ಅವನ ಕಥಾವಸ್ತುವೊಂದು ದಲಿತ ವರ್ಗದ ಅಸ್ಪೃಶ್ಯ ಮಾದಾರ ಚೆನ್ನಯ್ಯನಿಗೆ ಸಂಬಂಧಿಸಿದ್ದು. ಅವನ ಕಥಾಶೈಲಿ, ಛಂದೋಪ್ರಕಾರ ನಿರೂಪಣೆ ಸಂಪೂರ್ಣ ಸ್ವತಂತ್ರವಾದುದು.

ಅದೇ ಶತಮಾನದ ಮಧ್ಯ ಭಾಗದಲ್ಲಿ ನಡೆದ ವಚನ ಚಳವಳಿಯು ಇಡೀ ವಿಶ್ವ ಸಾಹಿತ್ಯಕ್ಕೆ ವಿನೂತನ ಎನ್ನಬಹುದಾದ ಸಾಹಿತ್ಯ ಪ್ರಕಾರವನ್ನು ಕನ್ನಡಕ್ಕೆ ತಂದುಕೊಟ್ಟಿದೆ. ಮೇಲ್ವರ್ಗದವರು, ದಲಿತರು, ಸ್ತ್ರೀಯರು, ದಲಿತ ಸ್ತ್ರೀಯರು, ಮಂತ್ರಿ ಭಂಡಾರಿಗಳಲ್ಲದೆ ದನ ಕಾಯುವವರು, ಅಂಬಿಗರು, ನೇಕಾರರು, ಚಪ್ಪಲಿ ಹೊಲೆಯುವವರು, ವೇಶ್ಯೆಯರು ಸಾಹಿತ್ಯ ಸೃಷ್ಟಿ ಮಾಡಿದರು. 'ವಚನ' ಎಂಬುದು ಗದ್ಯವೂ ಅಲ್ಲದ ಪದ್ಯವೂ ಅಲ್ಲದ ಒಂದು ವಿಶಿಷ್ಟ ಸಾಹಿತ್ಯ ಪ್ರಕಾರ. ಇದು ಯಾವುದೇ ರೀತಿಯಲ್ಲಿ ಇತರ ಭಾಷೆಗಳ ಸಾಹಿತ್ಯದಿಂದ ಪ್ರಭಾವಿತಗೊಳ್ಳದೆ ಜನಸಾಮಾನ್ಯರಿಂದ ಅವರ ಭಾಷೆಯಲ್ಲಿ ಅವರು ಹುಟ್ಟಿ ಬೆಳೆದ ಮಣ್ಣಿನಿಂದ ಮೂಡಿಬಂದುದಾಗಿದೆ. ಆ ಚಳವಳಿಯ ನೇತಾರ ಬಸವಣ್ಣನವರು ಭಾರತ ಕಂಡ ಅತ್ಯಂತ ಶ್ರೇಷ್ಠ ಸಮಾಜ ಸುಧಾರಕರಲ್ಲಿ ಒಬ್ಬರು.

ಆ ಚಳವಳಿಯ ಬಳಿಕ ಬಂದ ಹರಿದಾಸ ಸಾಹಿತ್ಯ ಚಳವಳಿಯು ಭಗವದ್ ಭಕ್ತಿಯನ್ನು ಹಾಡುಗಳ ಮೂಲಕ ಮನೆ ಮನೆಗೆ ಮುಟ್ಟಿಸಿತು- ದಾಕ್ಷಿಣಾತ್ಯ

**PAMPA (942 A.D.)**

Pampa was the greatest poet of the century. His has been a vene-rable name in Kannada literature even after the lapse of many centuries. His position of pre-eminence as a poet has never been questioned and his influence is still alive. A few biographical details are given to us by the poet himself. He was born in 902 A.D. His ancestors were

tāyiyaru 'mother' (honorific). This is clearly a loanword from Kannada. The word occurs in New Kannada but is not attested in Old Kannada. However, as this inscription from Nekanurpatti is assigned to ca. 4th century A.D. on palaeographic evidence, we have to regard *tāyiyaru* as an Old Kannada word which existed in the spoken language but was not attested in contemporary records.

ಸಂಗೀತ ಶೈಲಿಗೆ ಇನ್ನೊಂದು ಹೆಸರಾದ: 'ಕರ್ನಾಟಕ ಸಂಗೀತ'ಕ್ಕೆ ಅವರೇ ಮೂಲ. ಅದೇ ಚಳವಳಿಯ ಕೆಳವರ್ಗಕ್ಕೆ ಸೇರಿದ ಕನಕದಾಸರ 'ರಾಮಧಾನ್ಯ ಚರಿತೆ'ಯು ಬತ್ತ, ರಾಗಿಗಳ ಮಧ್ಯೆ ನಡೆದ ಸಂಘರ್ಷದ ಕತೆಯಾದರೂ ಅದು ಶ್ರೀಮಂತ ಬಡವರ ಮಧ್ಯದ ವರ್ಗ ಸಂಘರ್ಷದ ಸಾಂಕೇತಿಕ ಕಾವ್ಯವಾಗಿದ್ದು ಅಂತಿಮವಾಗಿ ಶೋಷಿತರ ಗೆಲುವೇ ವಾಸ್ತವವೆಂಬುದನ್ನು ಸಾಂಕೇತಿಕವಾಗಿ ನಿರೂಪಿಸುತ್ತದೆ. ವಸ್ತುವಿನ ದೃಷ್ಟಿಯಿಂದ ಇದು ಭಾರತೀಯ ಸಾಹಿತ್ಯಕ್ಕೆ ಕನ್ನಡವು ಕೊಟ್ಟಿರುವ ಕೊಡುಗೆಯೂ ಹೌದು.

**ಮಾನದಂಡ-೪:** 'ಕ್ಲಾಸಿಕಲ್ ಭಾಷೆಯು ಅದರ ಮುಂದಿನ ರೂಪದಿಂದ ಭಿನ್ನವಾಗಿರಬಹುದು ಅಥವಾ ಅದರ ಬೆಳವಣಿಗೆ ಸ್ಥಗಿತಗೊಂಡಿರಬಹುದು'.

ಕನ್ನಡ ಭಾಷೆಗೆ ಕನಿಷ್ಠ ಎರಡು ಸಾವಿರದ ಮುನ್ನೂರು ವರ್ಷಗಳ ನಿರಂತರ ಇತಿಹಾಸವಿದ್ದು, ಅದರ ಚರಿತ್ರೆಯಲ್ಲಿ ಪೂರ್ವದ ಹಳಗನ್ನಡ, ನಡುಗನ್ನಡ, ಆಧುನಿಕ ಕನ್ನಡ ಎಂಬ ಪ್ರಭೇದಗಳನ್ನು ಗುರುತಿಸಬಹುದಾದರೂ, ಅದರ ಬೆಳವಣಿಗೆ ನಿರಂತರವಾಗಿದೆ. ಪೂರ್ವದ ಹಳಗನ್ನಡಕ್ಕೂ ಹೊಸಗನ್ನಡಕ್ಕೂ ವ್ಯತ್ಯಾಸವಿದ್ದರೂ ಒಳಗೆ ಇರುವ ಸಾಮ್ಯ ದಟ್ಟವಾದುದು.

ಇಪ್ಪತ್ತನೇ ಶತಮಾನದಲ್ಲಿ ಸಮೃದ್ಧವಾಗಿ ವಿಕಾಸಗೊಂಡಿರುವ ಆಧುನಿಕ ಕನ್ನಡ ಸಾಹಿತ್ಯಕ್ಕೆ ಏಳು ಜ್ಞಾನಪೀಠ ಪ್ರಶಸ್ತಿಗಳು ಲಭ್ಯವಾಗಿವೆ.

**ಎರಡನೆಯ ವರದಿ:** ಮೇಲ್ಕಂಡ ವರದಿಯು ಕೇಂದ್ರ ಸರ್ಕಾರವನ್ನು ತಲಪಿದ ಮೇಲೆ, ಕೇಂದ್ರ ಸರ್ಕಾರವು ಸಂಸ್ಕೃತವನ್ನು ಶಾಸ್ತ್ರೀಯ ಭಾಷೆಯೆಂದು ಘೋಷಿಸಿ, ಅಂತಹ ಭಾಷೆಯೆಂದು ಘೋಷಿಸಬೇಕಾದರೆ ಮೊದಲಿನ ಒಂದು ಸಾವಿರ ವರ್ಷಗಳಷ್ಟು ಪ್ರಾಚೀನತೆಯ ಇತಿಹಾಸವನ್ನು ಒಂದೂವರೆ ಅಥವಾ ಎರಡು ಸಾವಿರ ವರ್ಷಗಳಿಗೆ ಏರಿಸುವ ತನ್ನ ಅಭಿಪ್ರಾಯವನ್ನು ಘೋಷಿಸಿತು. ಸಂಸ್ಕೃತದ ಜೊತೆಗೆ ಕನ್ನಡವನ್ನೂ ಶಾಸ್ತ್ರೀಯ ಭಾಷೆಯೆಂದು ಘೋಷಿಸದೆ ಕೇಂದ್ರ ಸರ್ಕಾರವು ತಪ್ಪು ಮಾಡಿದೆಯೆಂಬಲ್ಲಿ ಅನುಮಾನವಿಲ್ಲ. (ಸಂಸ್ಕೃತವನ್ನು ತಮಿಳಿಗಿಂತ ಮೊದಲೇ 'ಕ್ಲಾಸಿಕಲ್' ಭಾಷೆಯೆಂದು ಘೋಷಿಸಬೇಕಿತ್ತು; ತಮಿಳಿಗಿರುವ ರಾಜಕೀಯ ಬೆಂಬಲ ಅದಕ್ಕಿಲ್ಲ!) ಹೊಸ ಮಾನದಂಡದ ಪ್ರಕಾರವು ಕರ್ನಾಟಕ ಸರ್ಕಾರದ ಮೊದಲನೆಯ ಮನವಿಯು ಕನ್ನಡಕ್ಕೆ ಶಾಸ್ತ್ರೀಯ ಭಾಷಾಸ್ಥಾನವನ್ನು ನೀಡಲು ಸಾಕಾಗಿತ್ತು. ಆದರೂ ಸಮಿತಿಯು ಕರ್ನಾಟಕ ಸರ್ಕಾರಕ್ಕೆ ಎರಡನೆಯ ವರದಿ ನೀಡಿದ್ದು ಅದನ್ನು ೨೫.೧೧.೦೫ ರಂದು ಕೇಂದ್ರಕ್ಕೆ ಕಳುಹಿಸಲಾಗಿದೆ. ಏಳು ಅನುಬಂಧಗಳ ಈ ಎರಡನೆಯ ವರದಿ ಮೊದಲನೆಯ ವರದಿಗೆ ಉಪಷ್ಟಂಭಕ ಅಥವಾ ಪೋಷಕ). ಆ ಇಂಗ್ಲಿಷ್ ವರದಿಯ ಸಾರಾಂಶ ಇಂತಿದೆ-

ಡಾ. ಐರಾವತಂ ಮಹಾದೇವನ್ ಕ್ರಿ.ಪೂ. ೨-೧ನೇ ಶತಮಾನಗಳಿಗೆ ಸೇರಿದ ಶಾಸನಗಳಲ್ಲಿ ತಮಿಳು ಭಾಷೆಯು ಕನ್ನಡದಿಂದ ಹಲವು ಕನ್ನಡ ಪದಗಳನ್ನು ಸ್ವೀಕರಿಸಿರುವುದನ್ನು ತೋರಿಸಿದ್ದಾರೆ. ಕ್ರಿ.ಶ. ೧೧೫ರ ಟಾಲೆಮಿಯು ತನ್ನ ಪ್ರಾಚೀನ

ಭಾರತದ ಭೂಗೋಳದ ವರ್ಣನೆಯಲ್ಲಿ Modogoulla (ಈಗಿನ ಮುದ್ಗಲ್), Kalligeris (ಈಗಿನ ಕಲ್ಕೇರಿ) ಇತ್ಯಾದಿ ಕನ್ನಡ ಸ್ಥಳನಾಮಗಳನ್ನು ಹೆಸರಿಸಿದ್ದಾರೆ. ಕ್ರಿ.ಶ. ೧–೨ನೇ ಶತಮಾನದ ಪ್ರಾಕೃತ ಕವಿ ಹಾಲನ ಗಾಥಾಸಪ್ತಶತಿಯಲ್ಲಿ ತುಪ್ಪ, ಪೊಟ್ಟೆ, (ಹೊಟ್ಟೆ) ಮುಂತಾದ ಕನ್ನಡ ಪದಗಳಿವೆ. ಕ್ರಿ.ಶ. ಎರಡನೆಯ ಶತಮಾನದವಳೆಂದು ಹೇಳಲಾದ ತಮಿಳು ಕವಯಿತ್ರಿ ಅವ್ವೈಯಾರ್ ಕೃತಿಯಲ್ಲಿ 'ಕರುನಾಟಕ' (ಕನ್ನಡಿಗರು) ಪದವಿದೆ. (ಕೃತಿಯ ಕಾಲ ಬಹು ಸಂದೇಹಾಸ್ಪದ). ಮೂಲ ದ್ರಾವಿಡದ ಕಂಠ್ಯ ವ್ಯಂಜನ ಪದಾದಿಯ 'ಕ್– ಎಂಬುದು ತಮಿಳಿನ ಪದಗಳಲ್ಲಿ ಕೆಲವು ಪರಿಸರಗಳಲ್ಲಿ ತಾಲವ್ಯ ವ್ಯಂಜನ 'ಚ್–' ಆಗಿ ವ್ಯತ್ಯಾಸ ಹೊಂದಿದರೂ ಕನ್ನಡವು ಮಾತ್ರ ಎಲ್ಲ ಪರಿಸರಗಳಲ್ಲೂ ಮೂಲ 'ಕ್–' ವ್ಯಂಜನವನ್ನೇ ಉಳಿಸಿಕೊಂಡಿದೆಯೆಂಬುದು ಗಮನಾರ್ಹ. ದ್ರಾವಿಡ ಭಾಷೆಗಳ ಕೆಲವು ಮೂಲಲಕ್ಷಣಗಳನ್ನು ತಮಿಳು ಕಳೆದುಕೊಂಡಿದ್ದರೆ ಕನ್ನಡ ಉಳಿಸಿಕೊಂಡಿದೆ.

ಈ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರವು ಕೇಂದ್ರ ಸರ್ಕಾರಕ್ಕೆ ಎಲ್ಲ ದೃಷ್ಟಿಗಳಿಂದಲೂ ಅರ್ಹವಾಗಿರುವ ಕನ್ನಡವನ್ನು ಆದಷ್ಟು ಬೇಗ ಶಾಸ್ತ್ರೀಯ ಭಾಷೆಯನ್ನಾಗಿ ಘೋಷಿಸಲು ಮನವಿ ಮಾಡಿಕೊಂಡಿದೆ.



**ಏನು ಪ್ರಯೋಜನ:** ಕೇಂದ್ರ ಸರ್ಕಾರವೇ ಅಧಿಕೃತವಾಗಿ ಘೋಷಿಸಿರುವಂತೆ (೧) ಶಾಸ್ತ್ರೀಯ ಭಾಷೆಯ ಇಬ್ಬರು ವಿದ್ವಾಂಸರಿಗೆ ಪ್ರತಿ ವರ್ಷ ಅಂತರರಾಷ್ಟ್ರೀಯ ಪ್ರಶಸ್ತಿಯನ್ನು ನೀಡುತ್ತದೆ. (ಆ ವಿದ್ವಾಂಸ ಭಾರತೀಯನೇ ಆಗಬೇಕಿಲ್ಲ); (೨) ಭಾರತದ ಉನ್ನತ ಅಧ್ಯಯನ ಕೇಂದ್ರವೊಂದರಲ್ಲಿ ಆ ಭಾಷೆಯ ಹೆಸರಲ್ಲಿ ಒಂದು ಪ್ರತಿಷ್ಠಿತ ಕೇಂದ್ರವನ್ನು (**Center For Excellence**) ಆರಂಭಿಸುತ್ತದೆ; (೩) ಕೇಂದ್ರೀಯ ವಿಶ್ವವಿದ್ಯಾಲಯಗಳಲ್ಲಿ ಆ ಭಾಷೆಗಾಗಿ ಕೆಲವು ಪೀಠಗಳನ್ನು ತೆರೆಯಲು ವಿಶ್ವವಿದ್ಯಾಲಯ ಧನ ಸಹಾಯವನ್ನು ಕೇಳಿಕೊಳ್ಳುತ್ತದೆ. (ಈಗಾಗಲೇ ಮೈಸೂರಿನ ಭಾರತೀಯ ಭಾಷಾ ಸಂಸ್ಥಾನದಲ್ಲಿ **(CIIL)** ತಮಿಳಿಗಾಗಿ ಪ್ರತಿಷ್ಠಿತ ಕೇಂದ್ರ ಸ್ಥಾಪನೆಗೆ ಮಂಜೂರಾತಿ ದೊರಕಿ ಆ ಪ್ರಕ್ರಿಯೆ ಆರಂಭವಾಗಿದೆ)

**ಒತ್ತಾಯ:** ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನವು ಅಗತ್ಯವೇ ಅಲ್ಲವೇ ಎಂಬ ಚರ್ಚೆ ಈಗ ತೀರ ಅಪ್ರಸ್ತುತ. ಕೇಂದ್ರ ಸರ್ಕಾರ ರಚಿಸಿರುವ ತಜ್ಞರ ಸಮಿತಿಯ ಮುಂದೆ ಕನ್ನಡ ಪರವಾದ ವರದಿ ಕಾಯುತ್ತಿದೆ. ಕರ್ನಾಟಕದಲ್ಲಿ ಹಾಕುವ ಯಾವುದೇ ಹೊರ ಒತ್ತಡ ಕೇಂದ್ರ ಸರ್ಕಾರವನ್ನು ಮುಟ್ಟುವುದು ಅಸಂಭವ. ಒಳ ಒತ್ತಡ ಹಾಕಿದರೆ ಅದನ್ನು ಪ್ರಧಾನಿಗಳ ಮೇಲೆ ಅಥವಾ ಕೇಂದ್ರ ಸಂಸ್ಕೃತಿ ಇಲಾಖೆಯ ಸಚಿವರ ಮೇಲೆ ಹಾಕಬೇಕು. ಆ ಪ್ರಭಾವವು ಕನ್ನಡ ಪರವಾದ ಕೆಲಸವನ್ನೇನೂ ಮಾಡುವುದಿಲ್ಲ. ಆ ಸಚಿವರು ಕೇಂದ್ರ ಸರ್ಕಾರ ರಚಿಸಿರುವ ತಜ್ಞರ ಸಮಿತಿಯ ಸಭೆಯು ಬೇಗ ಸೇರುವಂತೆ ಕ್ರಮ ಕೈಗೊಳ್ಳಲು ಮಾತ್ರ ಆ ಒತ್ತಡ ಸಹಾಯಕವಾಗುತ್ತದೆ. ಆ ಸಮಿತಿಯ ಸದಸ್ಯರು ಹಿರಿಯ ಶ್ರೇಷ್ಠ ಸಾಹಿತಿಗಳು ಭಾಷಾವಿಜ್ಞಾನಿಗಳಾಗಿದ್ದಾರೆ (ಅವರಲ್ಲಿ ಒಂದಿಬ್ಬರು ನನಗೆ ಗೊತ್ತು)– ಅವರು ಕರ್ನಾಟಕದಲ್ಲಿ ಹಾಕುವ ಯಾವುದೇ ಒತ್ತಡಕ್ಕೂ ಮಣಿದು ನಿರ್ಧಾರ ತೆಗೆದುಕೊಳ್ಳುವವರಲ್ಲ. ನಮ್ಮ ಸರ್ಕಾರ ಅಥವಾ ಸಂಸದರು ಆ ತಜ್ಞರ ಸಭೆಯನ್ನು ಬೇಗ ಕರೆಯುವಂತೆ ಕೇಂದ್ರ ಸರ್ಕಾರ ಕ್ರಮ ಕೈಗೊಳ್ಳಲು ಒತ್ತಾಯಿಸುವುದೊಂದೇ ನೀವು ಈ ಘಟ್ಟದಲ್ಲಿ ಮಾಡಬಹುದಾದ ಕಾರ್ಯ. (ಎಂ.ವಿ. ರಾಜಶೇಖರನ್ ಆ ಕೆಲಸ ಮಾಡಿದ್ದಾರೆ, ಮಾಡುತ್ತಿದ್ದಾರೆ).

ಈ ಲೇಖನವು ಕರ್ನಾಟಕ ಸರ್ಕಾರದಿಂದ ಹೋಗಿರುವ ಮನವಿಯ ಸಾರಾಂಶವನ್ನು ಅಂತೆಯೇ ಶಾಸ್ತ್ರೀಯ ಭಾಷೆಯ ಸ್ಥಾನ ದೊರಕುವುದರಿಂದ ಒಂದು ಭಾಷೆಗೆ ಏನು ಲಾಭವೆಂಬುದನ್ನು ಸಾರ್ವಜನಿಕರಿಗೆ ತಿಳಿಸುವ ಸ್ಪಷ್ಟ ಉದ್ದೇಶವುಳ್ಳದಾಗಿದೆ.*

* ಸೌಜನ್ಯ: ಪ್ರಜಾವಾಣಿ, ೧೫.೧.೨೦೦೬.

## ಗಡಿನಾಡು ಅಭಿವೃದ್ಧಿ ಅಗತ್ಯ

ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನ ದೊರೆತಿರುವುದು ಸಂತೋಷ ಉಂಟು ಮಾಡಿದೆ. ಹೋರಾಟಕ್ಕೆ ಸಂದ ಜಯವಾಗಿದೆ. ಇದಕ್ಕಷ್ಟೇ ಸಂತೃಪ್ತವಾಗದೇ ನಾಡಿನ ಅಭಿವೃದ್ಧಿಗೆ ಶ್ರಮಿಸಬೇಕಿದೆ. ಗಡಿನಾಡಿನ ಅಭಿವೃದ್ಧಿಗೆ ಪಣ ತೊಡಬೇಕಿದೆ.

– ಡಾ. ಚಂದ್ರಶೇಖರ ಕಂಬಾರ
ನಾಟಕಕಾರ, ವಿಧಾನಪರಿಷತ್‌ ಸದಸ್ಯ

# ಕನ್ನಡಕ್ಕೆ ೨೫೦೦ ವರ್ಷ: ಇನ್ನೂ ಏಕೆ ಮೀನ-ಮೇಷ?



ಪ್ರೊ. ಎ.ವಿ. ನರಸಿಂಹಮೂರ್ತಿ

ಈ ನಾಡಿನ ಜನಗಳಿಗೆ ಅತ್ಯಂತ ಪ್ರಿಯವಾದ ಎರಡು ಪದಗಳೆಂದರೆ ಕನ್ನಡ ಮತ್ತು ಕರ್ನಾಟಕ. ನಮ್ಮ ಜನಗಳಿಗೆ ಇವೆರಡೂ ಎರಡು ಕಣ್ಣುಗಳಿದ್ದಂತೆ ಎಂದರೆ ಅತಿಶಯೋಕ್ತಿಯಲ್ಲ. ಕನ್ನಡ ಭಾಷಾವಾಚಿಯಾಗಿಯೂ, ಕರ್ನಾಟಕ ಸ್ಥಳವಾಗಿಯೂ ಮೇಲುನೋಟಕ್ಕೆ ಕಂಡು ಬಂದರೂ ಇವೆರಡೂ ಒಂದೇ ಆತ್ಮಕ್ಕೆ ಸಂಬಂಧಿಸಿದುದಾಗಿದೆ. ಇವೆರಡರಲ್ಲೂ ಕಾಣಬರುವುದು ಅದ್ವೈತ. ಈ ಎರಡು ಪದಗಳನ್ನು ಕುರಿತು ನೂರು ವರ್ಷಕ್ಕೂ ಹಿಂದಿನಿಂದ ವಿದ್ವಾಂಸರಲ್ಲಿ ಚರ್ಚೆ ನಡೆಯುತ್ತಲೇ ಇದೆ. ರಾಬರ್ಟ್‌ಕಾಲ್ಡ್‌ವೆಲ್‌ನಿಂದ ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರಿಗಳವರೆಗೆ ಕರ್ನಾಟಕ ಎಂಬ ಪದದ ಬಗೆಗೆ ಪುಂಖಾನುಪುಂಖವಾಗಿ ವಿಪುಲವಾದ ಸಿದ್ಧಾಂತಗಳು ಪ್ರತಿಪಾದಿಸಲ್ಪಟ್ಟಿವೆ. ಇತಿಹಾಸದ ಗುಹೆಯೊಳಕ್ಕೆ ಪ್ರವೇಶ ಮಾಡಿ ಒಳ ಹೊಕ್ಕಂತೆ ಹೊಸ ಹೊಸ ಸುಳಿವುಗಳು ಸಿಕ್ಕುತ್ತಲೇ ಹೋಗುತ್ತವೆ. ಹೊಸ ಮಿಂಚು ಕಂಡಂತೆ ಆಗುತ್ತದೆ. ಅದೇ ಕನ್ನಡ-ಕರ್ನಾಟಕವೆಂಬ ಪದಗಳ ಸ್ವಾರಸ್ಯ.

ಆದರೆ ಈ ಪದ ಕರ್ನಾಟಕವನ್ನು ಅರ್ಥ ಮಾಡಿಕೊಳ್ಳುವುದು ಹಾಗೂ ಅದರ ಪ್ರಾಚೀನತೆಯನ್ನು ತಿಳಿಯುವುದು ಅಷ್ಟೇನೂ ಸುಲಭವಾದ ಕೆಲಸವಲ್ಲ. ಅದಕ್ಕಾಗಿ ಸಂಸ್ಕೃತ, ಕನ್ನಡ, ತಮಿಳು ಇತ್ಯಾದಿ ಸಾಹಿತ್ಯ ಗ್ರಂಥಗಳನ್ನು ಜಾಲಾಡಬೇಕಾಗುತ್ತದೆ; ಏಕೆಂದರೆ ಪ್ರಾಚೀನಕ್ಕೆ ಪಯಣ ಬೆಳೆಸಿದಷ್ಟೂ ಅಸ್ಪಷ್ಟತೆ ಆವರಿಸುತ್ತದೆ. ಈ ನೆಲದ ಹೆಸರು ಕರ್ನಾಟಕವೇ ಅಥವಾ ಕರ್ಣಾಟಕವೇ ಎನ್ನುವ ಬಗೆಗೂ ಸಾಕಷ್ಟು ವಾದ ವಿವಾದಗಳು ನಡೆದವು. ಕೊನೆಗೆ ಸರ್ಕಾರವು ಕರ್ನಾಟಕ ಎನ್ನುವ ರೂಪವನ್ನೇ ಉಳಿಸಿಕೊಂಡಿತು. ಆದರೂ ಕೆಲವರು ಇಂದಿಗೂ ಕರ್ಣಾಟಕ ಎನ್ನುವ ಪದವನ್ನೂ ಬಳಸುತ್ತಾರೆ.

ಫಣಮಣಿ ಅನ್ತು ಭೋಗಿ ಫಣದುಳ್ಳಣಿವಿಲ್ಲನದೋನ್
ರಣಮುಖದುಳ್ಳೆಕಾಲನರಿಯಕ್ಕುಮನಿನ್ನ ಗುಣನ್
ಪ್ರಣಯಿಜನಕ್ಕೆ ಕಾಮನಸಿತೋತ್ಪಲ ವರ್ಣ್ಣನವನ್
ಗುಣಮಧುರಾನ್ಕ ದಿವ್ಯಪುರುಷನ್ಪುರುಷ ಪ್ರವರನ್

### ಮಹಾಭಾರತದ ಹಿನ್ನೆಲೆ

ಮಹಾಭಾರತದ ಕಾಲಕ್ಕಾಗಲೇ ಕರ್ನಾಟಕ ಸಾಕಷ್ಟು ಪ್ರಸಿದ್ಧಿಯನ್ನು ಪಡೆದಿದ್ದಿತು. ಕರ್ಣಾಟ, ಕರ್ಣಾಟಕ ಎನ್ನುವ ಪದ ಮಹಾಭಾರತದ ಸಭಾ ಪರ್ವ ಮತ್ತು ಭೀಷ್ಮ ಪರ್ವಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ. ಸಭಾ ಪರ್ವದಲ್ಲಿ **'ಕರ್ಣಾಟಾಃ ಕಾಂಸಕುಟ್ಟಾಶ್ಚ ಪದ್ಮಜಾಲಾಃ ಸತೀನರಾಃ ದಾಕ್ಷಿಣಾತ್ಯಾಃ ಪುಲಿನ್ದಾಶ್ಚ ಕವೇರಾಸ್ತಜ್ಞಣಾಃ ಖಪಾಃ'** ಎಂದು ಹೇಳಿದೆ. ಭೀಷ್ಮ ಪರ್ವದಲ್ಲಿ **'ಕರ್ಣಾಟಕಾ ಮಹಿಷಕಾ ವಿಕಲ್ಪಾ ಮೂಷಕಾಸ್ತಥಾ'** ಎಂದು ಉಲ್ಲೇಖಿಸಲ್ಪಟ್ಟಿದೆ.

ಸ್ವಸ್ತಿಶ್ರೀಮತ್ ಪ್ರಿ[ಪೃ]ಥಿವೀವಲ್ಲಭ ಮಂಗ[ಲೀ]ಸ[ಶ]ನಾ
ಕಲ್ಮನೆಗೆ ಇತ್ತೊದು ಲಂಜಿಗೇಸರಂ ದೇವರ್ಕೆ ಪೂನಿಱುವ
ಮಾಲ[ಲಾ] ಕಾರ್ಗ್ಗೆ ಅರ್ದ್ಧವಿಸದಿ ಇತ್ತೊದಾನಲಿವ್ವೊನ್
ಪಞ್ಚ ಮಹಾಪಾತಕನಕುಂ[ಕ್ಕುಂ] ಏೞನೆಯಾ ನರಕದಾ
ಪುೞು ಅಕು [ಕ್ಕು] ಮ್ (॥ *)

ರಾಮಾಯಣದಲ್ಲಿ ಕಂಡುಬರುವ ಅನೇಕ ಸ್ಥಳಗಳು ಕರ್ನಾಟಕದಲ್ಲಿದ್ದು, ರಾಮಾಯಣ ಕಾಲದಲ್ಲಿ ಕರ್ನಾಟಕವು ಈ ಕಾಲದ ಜನರೊಡನೆ ಹಾಸುಹೊಕ್ಕಾಗಿದ್ದಿತು ಎಂದು ಗೊತ್ತಾಗುತ್ತದೆ. ಬಹುಶಃ ಇವೇ ಕರ್ನಾಟಕ ಎನ್ನುವ ಪದದ ಹಾಗೂ ಕಲ್ಪನೆಯ ಪ್ರಾಚೀನತೆಯ ಉಲ್ಲೇಖಗಳು ಎಂದು ಭಾವಿಸಬಹುದು.

ಪುರಾಣಗಳಲ್ಲಂತೂ ಕರ್ನಾಟಕದ ಉಲ್ಲೇಖಗಳು ವಿಫುಲವಾಗಿ ಕಾಣಿಸಿಕೊಳ್ಳುತ್ತವೆ. ಭಾಗವತ ಪುರಾಣ, ವಿಷ್ಣುಧರ್ಮೋತ್ತರ ಪುರಾಣ, ಮಾರ್ಕಂಡೇಯ ಪುರಾಣ, ಸ್ಕಾಂದ ಮಹಾಪುರಾಣ, ಪದ್ಮ ಪುರಾಣ ಮುಂತಾದ ಪುರಾಣ ಗ್ರಂಥಗಳಿಂದ ಆಗಿನ ಕಾಲದ ಜನಗಳಿಗೆ ಕರ್ನಾಟಕದ ಪರಿಚಯ ನಿಕಟವಾಗಿದ್ದಿತೆಂದು ಗೊತ್ತಾಗುತ್ತದೆ. ಸ್ಕಾಂದ ಪುರಾಣವು ಸ್ವಲ್ಪ ಇತ್ತೀಚಿನ ಕಾಲದ್ದಾದರೂ, ಅದರಲ್ಲಿ ಸುಮಾರು ಮೂವತ್ತು ಕಡೆಗಳಲ್ಲಿ ಕರ್ನಾಟಕದ ಉಲ್ಲೇಖ ಕಂಡು ಬರುತ್ತದೆ.

ಆನಂತರ ಕಾಲದ ಸಂಸ್ಕೃತ, ಪ್ರಾಕೃತ, ಕನ್ನಡ ಮತ್ತು ತಮಿಳು ಗ್ರಂಥಗಳಲ್ಲಿ ಕರ್ನಾಟಕದ ಹೆಸರು ಪದೇಪದೇ ಕಾಣಿಸಿಕೊಳ್ಳುತ್ತದೆ. ಶೂದ್ರಕ ಕವಿಯ ಮೃಚ್ಛಕಟಿಕ, ಭರ್ತೃ ಹರಿಯ ಸುಭಾಷಿತ, ಬಿಲ್ಹಣನ ವಿಕ್ರಮಾಂಕ ದೇವಚರಿತ, ಕಲ್ಹಣನ ರಾಜತರಂಗಿಣಿ, ವರಾಹಮಿಹಿರನ ಬೃಹತ್ಸಂಹಿತಾ ಮುಂತಾದ ಗ್ರಂಥಗಳಿಂದ ಕರ್ನಾಟಕ ರಾಜ್ಯವು ಹೆಚ್ಚಿನ ಪ್ರಸಿದ್ಧಿಯನ್ನು ಪಡೆದಿದ್ದುದು ಗೊತ್ತಾಗುತ್ತದೆ. ಸ್ವಲ್ಪ ಇತ್ತೀಚಿನದ್ದಾದರೂ ಜ್ಞಾನ ದೇವನ ಮರಾಠಿ ಕೃತಿ ಜ್ಞಾನೇಶ್ವರಿಯಲ್ಲಿ ಪಂಡರಾಪುರದ ವಿಠಲನನ್ನೂ ಕನ್ನಡ ಕರ್ನಾಟಕದೊಡನೆ ಸಮೀಕರಿಸಿರುವುದು ಆಸಕ್ತಿಕರ ಸಂಗತಿ (ಕಾನಡಾ ಹೋ ವಿಠಲು ಕರ್ನಾಟಕು).

**ಅರ್ಥ ಮತ್ತು ರೂಪ**

ಕರ್ನಾಟಕ ಎನ್ನುವ ಪದ ಸಂಸ್ಕೃತದ್ದೇ ಅಥವಾ ಕನ್ನಡದ್ದೇ ಎನ್ನುವ ವಿಷಯದಲ್ಲಿಯೂ ಚರ್ಚೆ ನಡೆದಿದೆ. ಬಹು ಜನ ವಿದ್ವಾಂಸರು ಕರ್ನಾಟಕ ಎನ್ನುವುದು ಸಂಸ್ಕೃತ ರೂಪವೆಂದೂ, ಕನ್ನಡ ಎನ್ನುವುದು ಅದರ ದೇಶೀ ರೂಪವೆಂದೂ ವಾದಿಸಿದ್ದಾರೆ.

ಸ್ಕಾಂದ ಪುರಾಣದಲ್ಲಿ ಇದಕ್ಕೊಂದು ಕಥೆ ಇದೆ. ದೇವಿಯು ರಾಕ್ಷಸನೊಬ್ಬನನ್ನು ಸಂಹರಿಸುವ ಸಲುವಾಗಿ ಆತನನ್ನು ನುಂಗಿಬಿಟ್ಟಳಂತೆ. ಆ ರಾಕ್ಷಸ ದೇವಿಯ ಕಿವಿಗಳಿಂದ ತಪ್ಪಿಸಿಕೊಂಡು ಹೊರಬಂದನು. ಕರ್ಣದಿಂದ ಅವನು ಈಚೆಗೆ ಬಂದಿದ್ದರಿಂದ ಇವನಿಗೆ ಕರ್ಣಾಟ ಎಂಬ ಹೆಸರಾಯಿತು. ಅವನು ದೇವಿಯ ಕ್ಷಮಾಪಣೆ ಕೇಳಿ ಆಕೆಯ ವರವನ್ನು ಪಡೆದು, ಒಳ್ಳೆಯವನಾದನು. ದೇವಿಯು ಅವನಿಗೆ ರಾಜ್ಯ ಸ್ಥಾಪನೆ ಮಾಡಲು ಹೇಳಿದಳು. ಅವನೇ ಕರ್ನಾಟಕ ದೇಶದ ಮೂಲ ಪುರುಷನಾದನು.

ಕರ್ಣ ಎಂದರೆ ಕಿವಿ ಎನ್ನುವ ಅರ್ಥವನ್ನು ಆಧರಿಸಿ ಇನ್ನೂ ಅನೇಕ ನಿಷ್ಪತ್ತಿಗಳನ್ನು ಮಾಡಲಾಗಿದೆ. ಈ ದೇಶದಲ್ಲಿ ಆಳುತ್ತಿದ್ದ ರಾಜರ ಕೀರ್ತಿ ಎಲ್ಲರ ಕಿವಿಗೂ ಬೀಳುತ್ತಿದ್ದಿತು. ಆದುದರಿಂದ ಈ ರಾಜ್ಯ ಕರ್ನಾಟಕ (ಕರ್ಣೇ+ಅಟತೀತಿ) ಎಂದು ಖ್ಯಾತವಾಯಿತು. ಮತ್ತೆ ಕೆಲವರು ಈ ಪದವನ್ನು ಕರಣ+ನಟ ಎಂದು ವಿಭಾಗಿಸಿ

ಇವರೆಡೂ ಎರಡು ಪಂಗಡದ ಜನಗಳ ಸಮ್ಮಿಶ್ರ ಎಂದು ಭಾವಿಸಿದ್ದಾರೆ. ಅಂದರೆ ಕರ್ನಾಟಕ ಎನ್ನುವುದು ಜಾತಿ ಅಥವಾ ಪಂಗಡ ಸೂಚಕ ಪದ ಎಂದು ತಿಳಿಯುತ್ತಾರೆ. ಮತ್ತೆ ಕೆಲವು ವಿದ್ವಾಂಸರು ಈ ಪದವನ್ನು 'ಕರ್+ನಾಡು' ಎಂದು ವಿಭಾಗಿಸಿ ಕರು ಎಂದರೆ ಕಪ್ಪು ಎನ್ನುವ ಅರ್ಥದ ಆಧಾರದ ಮೇಲೆ ಕಪ್ಪು ಮಣ್ಣಿನ ಪ್ರದೇಶವಿದಾದುದರಿಂದ ಇದಕ್ಕೆ ಕರ್ನಾಟಕ ಎಂದು ಹೆಸರಾಯಿತು ಎಂದು ಹೇಳಿದ್ದಾರೆ.

ಕರುನಾಡು ಎನ್ನುವ ಪದಕ್ಕೆ ಇನ್ನೊಂದು ರೀತಿಯ ಅರ್ಥವನ್ನೂ ಕೆಲವರು ಕೊಟ್ಟಿದ್ದಾರೆ. ಕರ್ನಾಟಕವು ಸಮುದ್ರ ಮಟ್ಟಕ್ಕಿಂತ ಎತ್ತರವಾದ ಪ್ರದೇಶವಾದುದರಿಂದ ಅದನ್ನು ಕರ್ನಾಡು ಎಂದು ಕರೆದರು. ತಮಿಳು ನಾಡಿನ ಸಮುದ್ರ ಮಟ್ಟದ ಜನರು ಎತ್ತರದಲ್ಲಿದ್ದ ಈ ಜನಗಳನ್ನು ಮೇಲ್ನಾಡು ಅಥವಾ ಕರುನಾಡು ಎಂದು ಕರೆಯಲು ಆರಂಭಿಸಿದರು. ಅದೇ ಹೆಸರು ಉಳಿದು ಬಂದಿತು. ಆದರೆ ಕರು ಎನ್ನುವ ಪದಕ್ಕೆ ವಿಶಾಲವಾದ, ಮಹತ್ತರವಾದ ಎನ್ನುವ ಅರ್ಥವಿರುವುದರಿಂದ ಅಕ್ಕಪಕ್ಕದ ರಾಜ್ಯದ ಜನಗಳು ಈ ನಾಡಿನ ಮಹತ್ತಿಗೆ ಹಾಗೂ ಬೃಹತ್ತಿಗೆ ಮಾರು ಹೋಗಿ, ಇದನ್ನು ಕರು ನಾಡು ಎಂದು ಕರೆದರು.

**ಕನ್ನಾಡು:** ಕನ್ನಾಡು ಎಂಬ ಪದವನ್ನು ಕಮ್ಮಿತು+ನಾಡ ಎಂದು ಕೆಲವರು ವಿಭಾಗಿಸಿದ್ದಾರೆ. ಕಮ್ಮಿತು ಎನ್ನುವ ಪದಕ್ಕೆ ಸುವಾಸನೆ ಅಥವಾ ಪರಿಮಳ ಎನ್ನುವ ಅರ್ಥವಿರುವುದರಿಂದ ಈ ನಾಡಿನಲ್ಲಿ ಗಂಧದ ಮರಗಳು ವಿಶೇಷವಾಗಿ ಬೆಳೆಯುತ್ತಿದ್ದುದರಿಂದ, ಇದು ಸುವಾಸನೆಯ ನಾಡೆಂದು ಖ್ಯಾತಿ ಪಡೆಯಿತು ಎಂದು ಕೆಲವರು ವಾದಿಸುತ್ತಾರೆ. ಈ ನಾಡಿಗೂ ಪ್ರಖ್ಯಾತ ಸಿಂಧೂ ಸಂಸ್ಕೃತಿಗೂ ಸಂಬಂಧವನ್ನು ಕಲ್ಪಿಸಲು ಕೆಲವು ವಿದ್ವಾಂಸರು ಪ್ರಯತ್ನಪಟ್ಟಿದ್ದಾರೆ.



ಮೊಹೆಂಜೊದಾರೊವಿನಲ್ಲಿ ಕಂಡುಬಂದಿರುವ ಒಂದು ಮುದ್ರೆಯಲ್ಲಿ 'ಕಣ್‌ನಿರ್' ಎಂಬ ಪದದ ಸಂಕೇತವಿದೆಯೆಂದೂ, ಇದು ಕರ್ನಾಟಕದ ಜನಗಳನ್ನು ಗುರುತಿಸುವ ಸಾಧನವೆಂದೂ ಭಾವಿಸಲಾಗಿದೆ. ಕಣ್ಣನ್ ಎಂಬ ಪದ ಶಿವನನ್ನು ಸೂಚಿಸುತ್ತದೆ. ಆದುದರಿಂದ ಕನ್ನಡಿಗ ಎಂದರೆ ಅಂಗಾಲಲ್ಲಿ ಕಣ್ಣನ್ನು ಹೊಂದಿರುವವನು ಎನ್ನುವ ಅರ್ಥವಿದೆ. ಆದುದರಿಂದ ಶಿವಭಕ್ತರು ಹೆಚ್ಚಾಗಿದ್ದ ನಾಡನ್ನು ಕನ್+ಅಡಿಗ ಎಂದು ಕರೆದಿರಬೇಕು ಎಂದು ಕೆಲವರು ವಾದಿಸಿದ್ದಾರೆ. ಶ್ರೀಶೈಲದ ಸಮೀಪದಲ್ಲಿ ಕಣ್ಣವಿಷಂಯ ಎಂಬ ಪ್ರಾಂತವಿದ್ದಿತು. ಅಲ್ಲಿ ವಾಸವಾಗಿದ್ದ ಜನಗಳೇ ಕರ್ಣ ಜನಗಳು. ಅದೇ ಕರ್ಣನಾಡು ಅಥವಾ ಕನ್ನಾಡು ಎಂದು ಕೆಲವರು ಭಾವಿಸುತ್ತಾರೆ.

**ಸಮಾನ ಪದಗಳು:** ಕರ್ನಾಟಕ ಮತ್ತು ಕನ್ನಡ ಸಮಾನವಾದ ಪದಗಳು ಎಂಬುದನ್ನು ಅನೇಕರು ಒಪ್ಪಿಕೊಂಡಿರುವುದು ಗಮನಾರ್ಹ ಸಂಗತಿ. ಸಿಂಧೂ ಸಂಸ್ಕೃತಿಯ ಜನಗಳು ದ್ರಾವಿಡರೆಂದು ಅನೇಕ ವಿದ್ವಾಂಸರು ಭಾವಿಸಿದ್ದಾರೆ. ಈ ದ್ರಾವಿಡ ಗುಂಪಿನ

ಜನಾಂಗದಲ್ಲಿ ತಮಿಳರ ಜೊತೆಗೆ ಇದ್ದಿರಬಹುದಾದ ಸಾಧ್ಯತೆಗಳು ಹೆಚ್ಚಾಗಿ ಕಾಣಬರುತ್ತದೆ. ಆದುದರಿಂದ ಕನ್ನಡದ ಪ್ರಾಚೀನತೆಯನ್ನು ಸಿಂಧೂ ಸಂಸ್ಕೃತಿಯ ಕಾಲಕ್ಕೆ, ಅಂದರೆ ಈಗ ಐದು ಸಾವಿರ ವರ್ಷಗಳ ಹಿಂದಕ್ಕೆ ಕೊಂಡೊಯ್ಯಬಹುದು.

ಶಾತವಾಹನ ದೊರೆ ಹಾಲನೆಂಬುವನು ಕ್ರಿಸ್ತಪೂರ್ವ ಒಂದನೆಯ ಶತಮಾನಕ್ಕೆ ಸೇರಬಹುದಾದ ಗಾಥಾ ಸಪ್ತಶತಿ ಎನ್ನುವ ಪ್ರಾಕೃತ ಗ್ರಂಥವನ್ನು ರಚಿಸಿದನು. ಈ ಗ್ರಂಥದಲ್ಲಿ ಹೊಟ್ಟೆ, ಹತ್ತಿ, ಅತ್ತೆ, ತುಪ್ಪ ಎಂಬ ಕನ್ನಡ ಪದಗಳಿರುವುದು ಗಮನಾರ್ಹ.

ಆದುದಂಂದ ಕ್ರಿಸ್ತಪೂರ್ವದ ಶತಮಾನಗಳಲ್ಲಿ ಕನ್ನಡ ಭಾಷೆ ಪ್ರಚಲಿತವಾಗಿತ್ತು. ಇತ್ತೀಚೆಗೆ ಕ್ರಿಸ್ತಪೂರ್ವಕ್ಕೆ ಸೇರುವ ಕೆಲವು ತಮಿಳು ಬ್ರಾಹ್ಮೀ ಶಾಸನಗಳು ದೊರಕಿವೆ. ಈ ಶಾಸನಗಳಲ್ಲಿ ತಾಯಿ, ಹೊಸಿಲು ಮುಂತಾದ ಕ್ನನಡ ಪದಗಳು ಕಾಣಸಿಗುತ್ತವೆ. ಆದುದರಿಂದ ಕನ್ನಡ ಭಾಷೆ ಕ್ರಿಸ್ತ ಪೂರ್ವದ ಹಿಂದಿನ ಶತಮಾನಗಳಿಗೆ ಸೇರುವ ಸಾಧ್ಯತೆ ಹೆಚ್ಚಾಗಿದೆ.

ಕ್ರಿಸ್ತಪೂರ್ವ ಮೂರನೆಯ ಶತಮಾನಕ್ಕೆ ಸೇರುವ ಅಶೋಕನ ಬ್ರಹ್ಮಗಿರಿ ಶಾಸನದಲ್ಲಿ 'ಇಸಿಲ' ಎಂಬ ಪದ ಕಾಣಬರುತ್ತವೆ. 'ಇಸಿಲ' ಎನ್ನುವ ಪದ ಅತ್ಯಂತ ಪ್ರಾಚೀನ ಕನ್ನಡ ಪದವೆಂದು ಖ್ಯಾತ ಕನ್ನಡ ವಿದ್ವಾಂಸ ಡಿ.ಎಲ್. ನರಸಿಂಹಾಚಾರ್ ತೋರಿಸಿಕೊಟ್ಟಿದ್ದಾರೆ.

'ಇಸಿಲ' ಎಂಬುದು ಕೋಟೆಯನ್ನು ಹೊಂದಿದ್ದ ಊರು ಎಂದು ಅರ್ಥೈಸಲಾಗಿದೆ. ಅಂದರೆ ಕ್ರಿಸ್ತಪೂರ್ವ ಮೂರನೆಯ ಶತಮಾನದ ಹೊತ್ತಿಗೆ ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿಯಲ್ಲಿ ಕೋಟೆಯನ್ನು ಕಟ್ಟಿಕೊಂಡು ಆಳುತ್ತಿದ್ದ ಕನ್ನಡ ನಾಯಕ ಅಥವಾ ದೊರೆಯಿದ್ದನೆಂಬುದು ಕರ್ನಾಟಕದ ಹಾಗೂ ಕನ್ನಡದ ಪ್ರಾಚೀನತೆಯನ್ನು ಮೌರ್ಯರ ಕಾಲಕ್ಕೆ ಕೊಂಡೊಯ್ಯುತ್ತದೆ. ಇದರ ಆರಂಭ ಕೊನೆಯ ಪಕ್ಷ ಒಂದೆರಡು ಶತಮಾನಗಳ ಹಿಂದೆಯೇ ಆಗಿರಬೇಕು ಎಂದು ಸುಲಭವಾಗಿ ತೀರ್ಮಾನಿಸಬಹುದು.

**ಗ್ರೀಕ್ ನಂಟು:** ಈಜಿಪ್ಟಿನ ಆಕ್ಸಿರಿಂಕಸ್ ಎನ್ನುವ ಸ್ಥಳದಲ್ಲಿ ಆಕ್ಸಿರಿಂಕಸ್ ಪೆಪಿರಿ ಎನ್ನುವ ವಲ್ಕ ಲೇಖವು ಕಂಡು ಬಂದಿತು. ಇದೊಂದು ಗ್ರೀಕ್ ಪ್ರಹಸನ. ಗ್ರೀಕ್ ಭಾಷೆಯಲ್ಲಿದೆ. ಇದರಲ್ಲಿ ದಕ್ಷಿಣ ಕನ್ನಡ (ತುಳು ನಾಡಿಗೆ) ಸೇರಿದವರ ಪಾತ್ರಗಳಿವೆ. ಈ ನಾಟಕ ನಡೆದಿದ್ದೇ ತುಳುನಾಡಿನಲ್ಲಿ ಎಂದೂ ಕೆಲವರು ಭಾವಿಸಿದ್ದಾರೆ.

ಅದು ಹೇಗಾದರೂ ಇರಲಿ ಚಾರಿಟಿಯನ್ ಎನ್ನುವ ಗ್ರೀಕ್ ತರುಣಿಯೊಬ್ಬಳು, ಉಡುಪಿಯ ಸಮೀಪದ ಮಲ್ಪೆಯಲ್ಲಿ ಒಬ್ಬ ನಾಯಕನ ವಶಕ್ಕೆ ಸಿಕ್ಕಿಬೀಳುತ್ತಾಳೆ. ಗ್ರೀಸಿನಿಂದ ಕೆಲವರು ಮಲ್ಪೆಗೆ ಬಂದು ನಾಯಕನಿಗೆ ಚೆನ್ನಾಗಿ ಮದ್ಯ ಕುಡಿಸಿ, ಅವನು ಅಮಲಿನಲ್ಲಿದ್ದಾಗ ಗ್ರೀಕ್ ತರುಣಿಯನ್ನು ಬಿಡಿಸಿಕೊಂಡು ಹೋಗುತ್ತಾರೆ. ಇದೇ ಈ ನಾಟಕದ ಸಾರಾಂಶ.

ಆ ಸಮಯದಲ್ಲಿ ಮಲ್ಪೆಯ ನಾಯಕ ಮತ್ತು ಇತರರು ಕನ್ನಡ ಪದಗಳನ್ನು ಬಳಸುತ್ತಾರೆ. ಅವು ಯಾವುವೆಂದರೆ ತೆರಿಗೆ, ಹಬ್ಬ, ಹುಯ್ಲಿ, ಗರಬಿತ್ತು, ಪುಳಿಕಸರು, ಬಸೆ ತೋರು, ಒರಗಿಸು, ಎತ್ತಿರಿ ಇತ್ಯಾದಿ. ಒಟ್ಟು ೧೦೬ ಕನ್ನಡ ಪದಗಳು ಈ ಗ್ರೀಕ್ ಪ್ರಹಸನದಲ್ಲಿ ಕಂಡುಬಂದಿವೆ. ಆದುದರಿಂದ ಕ್ರಿಸ್ತಶಕ ಎರಡನೆಯ ಶತಮಾನದ ಹೊತ್ತಿಗೆ ಕನ್ನಡ ಇಷ್ಟೊಂದು ಅಭಿವೃದ್ಧಿಯಾಗಿತ್ತೆಂದರೆ ಇದರ ಉಗಮವನ್ನು ಕ್ರಿಸ್ತ ಪೂರ್ವಕ್ಕೆ ಕೊಂಡೊಯ್ಯಲು ಯಾವ ಅಡ್ಡಿಯೂ ಇರಲಾರದು.

**ಕರ್ನಾಟಕದ ಟಂಕಸಾಲೆ:** ಮೌರ್ಯರ ಕಾಲಕ್ಕೆ ಅಂದರೆ ಕ್ರಿಸ್ತಪೂರ್ವ ಮೂರನೆಯ ಶತಮಾನಕ್ಕೆ ಸೇರುವ ಪಂಚ್ ಚಿಹ್ನೆಯ ನಾಣ್ಯಗಳು ಕರ್ನಾಟಕದಲ್ಲಿ ಹೇರಳವಾಗಿ ದೊರಕಿವೆ. ಇವುಗಳ ತಾಂತ್ರಿಕತೆಯನ್ನು ಗಮನಿಸಿದಾಗ ಈ ಪಂಚ್ ಚಿಹ್ನೆಯ ನಾಣ್ಯಗಳು ಕರ್ನಾಟಕದಲ್ಲೇ ಟಂಕಿತವಾದವು ಎಂಬುದು ಖಚಿತವಾಗುತ್ತದೆ. ಈ ನಾಣ್ಯಗಳನ್ನು ಯಾರಿಗಾಗಿ ಟಂಕಿಸಿದರು ಎನ್ನುವ ಪ್ರಶ್ನೆ ಉದ್ಭವವಾಗುತ್ತದೆ. ಇದು ಈ ಭಾಗದ ಕನ್ನಡದ ಅಥವಾ ಕರ್ನಾಟಕದ ಜನಗಳಿಗೆ ಎನ್ನುವುದು ಸುಸ್ಪಷ್ಟ. ಅಂದರೆ ನಾಣ್ಯಗಳನ್ನು ಉಪಯೋಗಿಸಿ ವ್ಯಾಪಾರ ವ್ಯವಹಾರಗಳನ್ನು ಮಾಡುವಷ್ಟರ ಮಟ್ಟಿಗೆ ಕನ್ನಡ ಜನ ಸುಸಂಸ್ಕೃತರಾಗಿದ್ದರು ಎಂಬುದು ಈ ನಾಣ್ಯಗಳಿಂದ ತಿಳಿಯುತ್ತದೆ. ಇದು ಕರ್ನಾಟಕ-ಕನ್ನಡದ ಪ್ರಾಚೀನತೆಯನ್ನು ಕ್ರಿಸ್ತಪೂರ್ವ ಮುನ್ನೂರಕ್ಕಿಂತ ಹಿಂದಕ್ಕೆ ಕೊಂಡೊಯ್ಯುತ್ತದೆ ಎಂಬುದು ಗಮನಾರ್ಹ ಸಂಗತಿ.

ಇತ್ತೀಚಿಗೆ ಬನವಾಸಿಯಲ್ಲಿ **ಶ್ರೀ ಮಾನರಾಗಿ** ಎಂಬ ಪ್ರಾಚೀನ ಬರಹವುಳ್ಳ ತಾಮ್ರದ ನಾಣ್ಯ ಪತ್ತೆಯಾಯಿತು. ಈ ದೊರೆ ಯಾರೆಂಬುದು ಗೊತ್ತಿಲ್ಲ. ಅದು ಮುಖ್ಯವಲ್ಲ, ಇದು ದ್ವಿಮುಖ ಮುದ್ರಾ ವಿಧಾನದಿಂದ ಟಂಕಿಸಲಾದ ನಾಣ್ಯ. ಈ ನಾಣ್ಯದ ಮೇಲಿರುವ ಬರಹದ ಲಿಪಿ ಲಕ್ಷಣಗಳ ಆಧಾರದ ಮೇಲೆ ಇದು ಕ್ರಿ.ಶ. ಐದನೆಯ ಶತಮಾನದ ನಾಣ್ಯವೆಂದು ತಿಳಿಯುತ್ತದೆ. ಇದು ನಾಣ್ಯ ಟಂಕನದಲ್ಲಿ ಮೂರನೆಯ ಹಂತದ ತಾಂತ್ರಿಕತೆ. ಇದರ ಹಿಂದೆ ಇನ್ನೆರಡು ರೀತಿಯ ನಾಣ್ಯಗಳು ಇದ್ದುದು ಖಚಿತ.

ಆದುದರಿಂದ ಈ ನಾಣ್ಯದ ಹಿಂದೆ ಕೊನೆಯ ಪಕ್ಷ ಆರು ಏಳು ಶತಮಾನಗಳ ವಿಕಾಸ ಇರುವುದು ಇದೂ ಕೂಡ ಕರ್ನಾಟಕ ಪ್ರದೇಶದ ಪ್ರಾಚೀನತೆಯ ಹೆಗ್ಗುರುತಾಗಿ ಕಾಣಬರುತ್ತದೆ. ಇಲ್ಲಿ ಇನ್ನೂ ಒಂದು ಸಂಗತಿಯನ್ನು ಪ್ರಸ್ತಾಪಿಸಬಹುದು. ಕರ್ನಾಟಕದ ಹಳ್ಳೂರು, ಟಿ. ನರಸೀಪುರ ಮುಂತಾದ ಕಡೆಗಳಲ್ಲಿ ನಡೆದ ಉತ್ಖನನಗಳಲ್ಲಿ ಹೆಣಗಳ ತಲೆಊರೆಗಳು, ರಾಗಿಯ ಕಾಳುಗಳು ದೊರಕಿವೆ. ಇವು ಈಜಿಪ್ಟಿನಲ್ಲಿಯೂ ಬಳಕೆಯಲ್ಲಿದ್ದವು. ಆದುದರಿಂದ ಈ ನಾಡಿಗೂ ಇಜಿಪ್ಟಿಗೂ ಕ್ರಿಸ್ತಪೂರ್ವದ ಒಂದನೆಯ ಸಹಸ್ರಮಾನದಲ್ಲಿ ಸಾಂಸ್ಕೃತಿಕ ಸಂಬಂಧಗಳಿದ್ದುದು ದೃಢಪಡುತ್ತದೆ. ಈ ಕಾಲಕ್ಕಾಗಲೇ ಕರ್ನಾಟಕವು ಸಾಂಸ್ಕೃತಿಕ ಸ್ತರದಲ್ಲಿ ಮುಂದುವರಿದಿತ್ತು ಎಂಬುದು ಗೊತ್ತಾಗುತ್ತದೆ. ಈ ಎಲ್ಲ ವಿಷಯಗಳನ್ನೂ ಗಮನಿಸಿದರೆ ಕರ್ನಾಟಕಕ್ಕೆ ಎರಡೂವರೆ ಸಾವಿರ ವರ್ಷಗಳ ಇತಿಹಾಸವಿರುವುದು ತಿಳಿದು ಬರುತ್ತದೆ. ಅಂದರೆ ಸುವರ್ಣ ಕರ್ನಾಟಕ ಎನ್ನುವುದು ಆಧುನಿಕ ಕಾಲದ ಕೇವಲ ಐವತ್ತು ವರ್ಷಗಳಿಗೆ (೧೯೫೬-೨೦೦೬) ಮಾತ್ರ ಸೀಮಿತವಾಗಿದೆ ಎನ್ನುವುದನ್ನು ಮರೆಯಬಾರದು. ಸಮಗ್ರವಾಗಿ ಗಮನಿಸಿದರೆ ಈಗ ಕರ್ನಾಟಕಕ್ಕೆ ಕನ್ನಡಕ್ಕೆ ಎರಡೂವರೆ ಸಾವಿರ ವರ್ಷಗಳ ಪ್ರಾಯವೆಂದು ಖಚಿತಗೊಳ್ಳುತ್ತದೆ. ಇದು ಕನ್ನಡಿಗರೆಲ್ಲರಿಗೂ ಹೆಮ್ಮೆಯ ವಿಷಯವೇ ಸರಿ.*

* ಸೌಜನ್ಯ: ಮೈಸೂರು ಮಿತ್ರ ೧.೧೧.೨೦೦೬.

## ಅವಿಸ್ಮರಣೀಯ ದಿನ

ಬಹುದಿನದ ಕನ್ನಡಿಗರ ಬೇಡಿಕೆ ಈಡೇರಿದ್ದು ಇದು ಸಂತಸದ ಮತ್ತು ಅವಿಸ್ಮರಣೀಯ ದಿನ.
ಇದಕ್ಕಾಗಿ ಹೋರಾಟ ನಡೆಸಿದ ಎಲ್ಲರಿಗೂ ಅಭಿನಂದನೆಗಳು.
ಶಾಸ್ತ್ರೀಯ ಸ್ಥಾನಮಾನದ ಅನುಕೂಲಗಳ ಕುರಿತು ಅಧ್ಯಯನ ನಡೆಸಿ ಜನತೆ ಮತ್ತು
ಸರ್ಕಾರದ ಮುಂದಿಡುವ ಕೆಲಸವನ್ನು ಪರಿಷತ್ತು ಮಾಡಲಿದೆ.

– ಡಾ. ಆರ್.ಕೆ. ನಲ್ಲೂರು ಪ್ರಸಾದ್
ಅಧ್ಯಕ್ಷ, ಕನ್ನಡ ಸಾಹಿತ್ಯ ಪರಿಷತ್ತು

# ಶಾಸ್ತ್ರೀಯ ಭಾಷೆ ಸ್ಥಾನ

## ನಾಡುನುಡಿ ಅಭಿವೃದ್ಧಿಗೆ ಕನ್ನಡತನದ ಅರಿವು ಮುಖ್ಯ

ತಮಿಳಿಗೆ 'ಶಾಸ್ತ್ರೀಯ ಭಾಷೆ' ಸ್ಥಾನ ನೀಡುವ ಕೇಂದ್ರ ಸರಕಾರದ ಘೋಷಣೆ ಕರ್ನಾಟಕದಲ್ಲಿ ಕನ್ನಡದ ಭಾಷಾಭಿಮಾನ ಮತ್ತೊಮ್ಮೆ ಉಕ್ಕುವಂತೆ ಮಾಡಿದೆ. ಕನ್ನಡಕ್ಕೆ 'ಶಾಸ್ತ್ರೀಯ ಭಾಷೆ' ಸ್ಥಾನ ನೀಡುವ ವಿಚಾರ ಸದ್ಯಕ್ಕೆ ಸರಕಾರದ ಮುಂದಿಲ್ಲ ಎಂಬ ಕೇಂದ್ರದ ಇತ್ತೀಚಿನ ಹೇಳಿಕೆಯೂ ರಾಜ್ಯದ ಜನತೆಯನ್ನು ಕೆರಳಿಸಿದೆ. ತಮಿಳಿನಷ್ಟೇ ಪ್ರಾಚೀನವಾದ ಕನ್ನಡಕ್ಕೆ ಆ ಸ್ಥಾನ ನೀಡದಿರುವುದು ಸಹಜವಾಗಿ ಕನ್ನಡಿಗರಿಗೆ ಅಸಮಾಧಾನ ತಂದಿದೆ. ಈ ಕಾರಣಕ್ಕಾಗಿಯೇ ಮುಖ್ಯಮಂತ್ರಿ ಧರ್ಮಸಿಂಗ್ ನೇತೃತ್ವದಲ್ಲಿ ಸಾಹಿತಿಗಳ, ಬುದ್ಧಿಜೀವಿಗಳ ಹಾಗೂ ಕನ್ನಡಪರ ಹೋರಾಟಗಾರರ ನಿಯೋಗವೊಂದು ಪ್ರಧಾನಿಯನ್ನು ಭೇಟಿ ಮಾಡಿ ಒತ್ತಡ ತರಲಿದೆ. ಯಾವುದಾದರೂ ಭಾಷೆಗೆ ಸೂಕ್ತವೆನಿಸಿದರೆ ಶಾಸ್ತ್ರೀಯ ಸ್ಥಾನ ಕೊಡಲು ಬಹುಶಃ ಯಾರೂ ಅಡ್ಡಿಪಡಿಸಲಾರರು. ಆದರೆ ಯಾವುದಾದರೂ ಒಂದು ಭಾಷೆಗೆ ಅಂತಹ ಸ್ಥಾನ ನೀಡಿ ವಿಶೇಷ ಸವಲತ್ತುಗಳನ್ನು ಒದಗಿಸುವಂತಾದರೆ ಅದು ಭಾಷಾ ಸಾಮರಸ್ಯಕ್ಕೆ ಧಕ್ಕೆ ಉಂಟುಮಾಡುತ್ತದೆ. ವಿಭಿನ್ನ ಭಾಷೆ-ಸಂಸ್ಕೃತಿಗಳಿರುವ ಭಾರತದಂತಹ ದೇಶದಲ್ಲಿ ಎಲ್ಲಕ್ಕೂ ಎಲ್ಲರಿಗೂ ಸಮಾನ ಅವಕಾಶ ಕಲ್ಪಿಸಬೇಕಾದುದು ಸರಕಾರದ ಕರ್ತವ್ಯ. ಹಿಂದುಳಿದಿರುವ ಅನೇಕ ಭಾಷೆ ಹಾಗೂ ಸಂಸ್ಕೃತಿಗಳ ಅಭಿವೃದ್ಧಿಗೆ ವಿಶೇಷ ಗಮನಹರಿಸಬೇಕಾದ ಸಂದರ್ಭದಲ್ಲಿ ಸರಕಾರ ರಾಜಕೀಯ ಒತ್ತಡಗಳಿಗೆ ಮಣಿದು ಭಾಷೆಯಂತಹ ಭಾವನಾತ್ಮಕ ವಿಷಯಗಳ ಬಗೆಗೆ ಆತುರದ ನಿರ್ಧಾರ ಕೈಗೊಂಡಿರುವುದು ಸರಿಯಲ್ಲ. ಯುಪಿಎ ಸರಕಾರ ಎಲ್ಲಿಯವರೆಗೆ ತಮಿಳುನಾಡಿನ ರಾಜಕಾರಣಿಗಳ ತಾಳಕ್ಕೆ ಹೆಜ್ಜೆ ಹಾಕುತ್ತದೆ ಎಂಬುದೇ ಈಗಿನ ಪ್ರಶ್ನೆ.

ಪ್ರಸ್ತುತ ಶಾಸ್ತ್ರೀಯ ಭಾಷೆ ಎಂದು ಪರಿಗಣಿಸುವುದು ಹೇಗೆ? ಹಾಗೂ ಅದರಿಂದೇನು ಪ್ರಯೋಜನವೆಂಬ ಸಹಜ ಪ್ರಶ್ನೆಗಳು ಮೂಡಿವೆ. ಯಾವುದೇ ಭಾಷೆಯನ್ನು ಶಾಸ್ತ್ರೀಯ ಭಾಷೆ ಎಂದು ಘೋಷಿಸಬೇಕಾದರೆ ಅದರ ಪ್ರಾಚೀನತೆ. ಅದರಲ್ಲಿ ರೂಪುಗೊಂಡ ಉನ್ನತ ಮಟ್ಟದ ಸಾಹಿತ್ಯ ಹಾಗೂ ವಿಶ್ವ ಸಾಹಿತ್ಯದಲ್ಲಿ ಅದರ ಸ್ಥಾನಮಾನ ಹೀಗೆ ಹಲವಾರು ಅಂಶಗಳನ್ನು ಗಮನಿಸಬೇಕಾಗುತ್ತದೆ. ತಮಿಳಿನಲ್ಲಿ ಈ ಲಕ್ಷಣಗಳನ್ನು ಇವೆ ಎಂಬುದು ಸರಕಾರದ ನಿರ್ಧಾರ ಸ್ವಾಗತಿಸುವವರ ವಾದ. ಕನ್ನಡ ಭಾಷೆಯಲ್ಲಿ ಕೂಡ ಈ ಅಂಶಗಳೆಲ್ಲ ಇವೆ ಎಂಬುದು ಸಾಹಿತ್ಯ ಇತಿಹಾಸಕಾರರ ಒಕ್ಕೊರಲಿನ ಅಭಿಮತ. ದ್ರಾವಿಡ ಭಾಷೆ ವರ್ಗಕ್ಕೆ ಸೇರಿದ ಕನ್ನಡಕ್ಕೆ ಅತ್ಯಂತ ಭವ್ಯ

# ವಿಜಯ ಕರ್ನಾಟಕ

ಇತಿಹಾಸವಿದೆ ಎಂಬುದು ನಿರ್ವಿವಾದ. ಇಷ್ಟಾದರೂ ಯುಪಿಎ ಸರಕಾರ ಅಧಿಕಾರಕ್ಕೆ ಬಂದಕೂಡಲೇ ತಮಿಳಿಗೆ ಶಾಸ್ತ್ರೀಯ ಭಾಷೆ ಸ್ಥಾನ ನೀಡಿದೆ. ಒಂದು ಭಾಷೆಗೆ ಅಭಿಜಾತ (ಶಾಸ್ತ್ರೀಯ, ಕ್ಲಾಸಿಕಲ್) ಭಾಷೆಯ ಸ್ಥಾನ ಸಿಕ್ಕಿದರೆ ಆ ಭಾಷೆಯ ಸಂಸ್ಕೃತಿ ಅಧ್ಯಯನಕ್ಕೆ ಸಾಕಷ್ಟು ಪ್ರೋತ್ಸಾಹ ದೊರಕುತ್ತದೆ. ಆಡಳಿತದ ಬೆಂಬಲ ಲಭಿಸಿದರೆ ಆ ಭಾಷೆಗೆ ಸಂಶೋಧನೆ, ಅಧ್ಯಯನ ಕ್ಷೇತ್ರದಲ್ಲಿ ರಾಷ್ಟ್ರ, ಅಂತಾರಾಷ್ಟ್ರೀಯ ಮಟ್ಟದಲ್ಲಿ ಸದವಕಾಶಗಳು ದೊರೆಯಬಹುದು. ಇದರಿಂದಾಗಿಯೇ ಕೇಂದ್ರದ ನಿರ್ಧಾರ ಅಸಮಾಧಾನಕ್ಕೆ ಕಾರಣವಾಗಿರುವುದು. ವಾಸ್ತವವಾಗಿ, ಯುಪಿಎ ಸರಕಾರ ಅಧಿಕಾರ ವಹಿಸಿಕೊಂಡ ಮೇಲೆ ಅಧಿಕೃತ ರಾಜ್ಯ ಭಾಷೆಗಳಿಗೆ ರಾಷ್ಟ್ರ ಭಾಷೆಯ ಸ್ಥಾನಮಾನ ಕಲ್ಪಿಸಿತು. ಆದರೆ ತಮಿಳಿಗೆ ಪ್ರತ್ಯೇಕವಾಗಿ 'ಶಾಸ್ತ್ರೀಯ ಭಾಷೆ' ಸ್ಥಾನ ನೀಡಿದ್ದು ಸರಕಾರದ ತಾರತಮ್ಯದ ನೀತಿಯತ್ತ ಬೆರಳು ಮಾಡಿ ತೋರಿಸುವಂತಾಗಿದೆ. ಇಷ್ಟು ವರ್ಷಗಳಾದರೂ ಸ್ಪಷ್ಟ ಭಾಷಾ ನೀತಿಯನ್ನೇ ರೂಪಿಸದ ಸರಕಾರ ಪ್ರಸ್ತುತದಲ್ಲಿ ಅವಸರದ ರಾಜಕೀಯ ನಿರ್ಣಯ ಕೈಗೊಂಡಿದೆ ಎಂದರೆ ತಪ್ಪಾಗದು.

ಈಗ ತಮಿಳಿಗೆ ನೀಡಿರುವ ಶಾಸ್ತ್ರೀಯ ಭಾಷಾ ಪಟ್ಟ ಅದರ ಅಧ್ಯಯನಕ್ಕೇ ಸೀಮಿತವಾಗಬಾರದು. ಅದರಷ್ಟೇ ಹಳೆಯದಾದ ದೇಶದ ಉಳಿದ ಭಾಷೆಗಳಿಗೂ, ಅಂತಹ ಅವಕಾಶ ದೊರೆಯುವಂತಾಗಬೇಕು. ಈ ಎಲ್ಲ ಸತ್ವಗಳನ್ನು ಹೊಂದಿರುವ ಕನ್ನಡಕ್ಕೂ ಶಾಸ್ತ್ರೀಯ ಪಟ್ಟ ದೊರಕುವ ಹಾಗೆ ಒತ್ತಾಯ ಮಾಡಬೇಕಾಗಿದೆ. ಇದು ರಾಜಕಾರಣಿಗಳಿಂದಲೇ ಸಾಧ್ಯವಿಲ್ಲ. ಅವರ ಮೇಲೆ ಒತ್ತಡ ತರುವ ಕೆಲಸ ಕನ್ನಡದ ಪ್ರಜ್ಞಾವಂತ ಜನರಿಂದ ಆಗಬೇಕಾಗಿದೆ. ಕನ್ನಡಪರ ಹೋರಾಟಗಾರರು, ಸಾಹಿತಿಗಳು ಹೋರಾಟದ ನೇತೃತ್ವ ವಹಿಸಬೇಕು. 'ಶಾಸ್ತ್ರೀಯ ಭಾಷೆ'ಯ ಸ್ಥಾನ ದೊರಕಿಸಿಬಿಟ್ಟರೆ ಕನ್ನಡದ ಉದ್ಧಾರವಾಗಿ ಬಿಡುವುದಿಲ್ಲವೆಂಬ ವಾದದಲ್ಲಿಯೂ ಹುರುಳಿದೆ. ಕನ್ನಡ ಭಾಷೆ, ಸಂಸ್ಕೃತಿ ಬಗೆಗೆ ಕನ್ನಡಿಗರಲ್ಲಿ ಅಭಿಮಾನ ಹೆಚ್ಚಾಗಬೇಕು. ಕನ್ನಡತನದ ಅರಿವು ಇಲ್ಲದಿದ್ದರೆ ಯಾವ ಸ್ಥಾನ ದೊರೆತರೂ ಅಷ್ಟೆಯೇ. ಸರಕಾರಗಳ ನಿರ್ಲಕ್ಷ್ಯವೂ ಭಾಷಾಭಿಮಾನ ಬೆಳೆಯಲು ಅಡ್ಡಿಯಾಗಿದೆ. ಆಡಳಿತದ ಎಲ್ಲ ಹಂತದಲ್ಲಿಯೂ ಕನ್ನಡ ಭಾಷೆ ಬಳಕೆಗೆ ಸರಕಾರ ಬದ್ಧವಾಗಿದ್ದರೂ ಅನುಷ್ಠಾನದಲ್ಲಿ ಸೋತಿದೆ. ಅಧಿಕಾರಿಗಳ ನಿರ್ಲಕ್ಷ್ಯಕ್ಕೆ ಆಗಾಗ್ಗೆ ಸರಕಾರ ಎಚ್ಚರಿಕೆ ನೀಡುತ್ತದಾದರೂ ಇದೇ ಕಾರಣಕ್ಕೆ ಯಾರನ್ನೂ ಶಿಕ್ಷಿಸಿದ ವರದಿಗಳಿಲ್ಲ. ಸರಕಾರದಲ್ಲಿ ಕನ್ನಡತನದ ಕೆಚ್ಚು ಮೂಡಬೇಕಾಗಿದೆ.*

* ಸೌಜನ್ಯ: ವಿಜಯ ಕರ್ನಾಟಕ, ಸಂಪಾದಕೀಯ ೧೩.೯.೨೦೦೪.



ಡಾ. ಆರ್ಥಿಯಸ್ ಸುಂದರಂ

# ಕನ್ನಡ ಪ್ರಾಚೀನ ಭಾಷೆ ಅಲ್ಲವೇ?

ಇತ್ತೀಚೆಗೆ ಕೇಂದ್ರ ಸರ್ಕಾರ ತಮಿಳನ್ನು ಅಭಿಜಾತ ಭಾಷೆ (ಕ್ಲ್ಯಾಸಿಕಲ್ ಲ್ಯಾಂಗ್ವೇಜ್) ಎಂದು ಘೋಷಿಸಿದೆ. ಯಾವುದೇ ಭಾಷೆಯನ್ನು ಪ್ರಾಚೀನ ಭಾಷೆ ಅಥವಾ ಅಭಿಜಾತ ಭಾಷೆ ಎಂದು ಘೋಷಿಸಬೇಕಾದರೆ ಅದಕ್ಕೆ ಕೆಲವು ಲಕ್ಷಣಗಳಿರಬೇಕೆಂದೂ ತಿಳಿಸಿದೆ. ಅಂಥ ಭಾಷೆಯಲ್ಲಿ ಸಾವಿರ ವರ್ಷಗಳಿಗಿಂತ ಪ್ರಾಚೀನವಾದ ಸಾಹಿತ್ಯ ಇರಬೇಕು. ಆ ಭಾಷೆಯ ಮೇಲೆ, ಸಾಹಿತ್ಯದ ಮೇಲೆ ಅನ್ಯ ಭಾಷಾ ಪ್ರಭಾವ ಇರಬಾರದು. ಇನ್ನಾರಾದರೂ ಈ ರೀತಿ ತಮ್ಮ ಭಾಷೆಯನ್ನು ಕರೆಯಿಸಿಕೊಳ್ಳಬೇಕಾದರೆ ಅರ್ಜಿ ಹಾಕಬಹುದು.

ಭಾಷಾ ಸಾಹಿತ್ಯಗಳ ಕ್ಷೇತ್ರದಲ್ಲಿ ದುಡಿಯುವ ಗಂಭೀರ ಚಿಂತಕರಿಗೆ ಈ ನಿರ್ಧಾರ ಖಂಡಿತ ಹಾಸ್ಯಾಸ್ಪದವಾಗಿ ಕಾಣುತ್ತದೆ. ಭಾಷಾವಿಜ್ಞಾನದ ಪ್ರಾಥಮಿಕವಾದ ಅರಿವಿರುವ ಯಾರೇ ಆಗಲಿ ಇಂಥದೊಂದು ನಿರ್ಧಾರವನ್ನು ಒಪ್ಪುವುದಿಲ್ಲ. ಒಂದು ಭಾಷೆಯಲ್ಲಿ ಅಭಿಜಾತ ಸಾಹಿತ್ಯವಿರಬಹುದು. ಶ್ರೇಷ್ಠ ಮಟ್ಟದ ದೇಶೀ ಸಾಹಿತ್ಯ ಇರಬಹುದು. ಅದು ಪ್ರಾಚೀನವೂ ಆಗಿರಬಹುದು. ಆದರೆ, ಯಾರೂ ಒಂದು ಭಾಷೆಯನ್ನು ಅಭಿಜಾತ ಭಾಷೆ ಎಂದು ಕರೆಯುವುದಿಲ್ಲ. ಭಾಷಾವಿಜ್ಞಾನಿಯ ದೃಷ್ಟಿಯಲ್ಲಿ ಎಲ್ಲಾ ಭಾಷೆಗಳೂ ಸಮಾನ. ಲಿಖಿತ ಸಾಹಿತ್ಯವಿಲ್ಲದ ಮಾತ್ರಕ್ಕೆ ಯಾವುದೇ ಭಾಷೆಯನ್ನೂ ಕೀಳೆಂದು ಭಾವಿಸುವಂತಿಲ್ಲ. ಅಲ್ಲದೆ, ದ್ರಾವಿಡ ಭಾಷೆಗಳಲ್ಲಿ ಲಿಖಿತ ಭಾಷೆಗಳಲ್ಲದೆ ಇನ್ನೂ ಇಪ್ಪತ್ತು ಭಾಷೆಗಳಿವೆ. ಇವುಗಳಲ್ಲಿ ಯಾವುದು ಪ್ರಾಚೀನ ಎಂಬುದನ್ನು ಇದುವರೆಗೆ ಯಾರೂ ನಿರ್ಧಾರ ಮಾಡಿಲ್ಲ.

ಭಾರತ ದೇಶದಲ್ಲಿ ಪ್ರಾಚೀನ ಸಾಹಿತ್ಯ ಸಮೃದ್ಧವಾಗಿ ಬೆಳೆದಿರುವ ಭಾಷೆಗಳಲ್ಲಿ ಸಂಸ್ಕೃತ ಮತ್ತು ಪ್ರಾಕೃತವನ್ನು ಬಿಟ್ಟರೆ ದ್ರಾವಿಡ ಭಾಷೆಗಳಾದ ತಮಿಳು, ಕನ್ನಡ, ತೆಲುಗು ಮತ್ತು ಮಲಯಾಳಂಗಳನ್ನು ಹೇಳಬಹುದು. ನಿಜವಾಗಿಯೂ ಸಮೃದ್ಧ ಸಾಹಿತ್ಯವಿರುವ ಭಾರತೀಯ ಭಾಷೆಗಳಿಗೆ ಮಾನ್ಯತೆ ಕೊಡಬೇಕೆಂಬ ಉದ್ದೇಶ ಇದ್ದಲ್ಲಿ ಕೇಂದ್ರ ಸರ್ಕಾರ ಈ ನಾಲ್ಕೂ ದ್ರಾವಿಡ ಭಾಷೆಗಳನ್ನು ಕ್ಲಾಸಿಕಲ್ ಭಾಷೆಗಳೆಂದು ಘೋಷಿಸಬೇಕಾಗಿತ್ತು. ತಮಿಳನ್ನು ಮಾತ್ರ ಈ ರೀತಿ ಕರೆದಿರುವುದರಿಂದ ಇತರ ಭಾಷೆಗಳನ್ನು ಅವಮಾನಿಸಿದಂತಾಗಿದೆ.

ಒಂದು ಭಾಷೆಯನ್ನು ಅಭಿಜಾತ ಭಾಷೆಯೆಂದು ಕರೆಯಬೇಕಾದರೆ ಸರಿಯಾಗಿ ಸಾವಿರ ವರ್ಷದ ಸಾಹಿತ್ಯವಿರಬೇಕೆಂದು, ಅನ್ಯ ಭಾಷಾ ಪ್ರಭಾವವಿರಬಾರದೆಂದು ನಿಯಮ ವಿಧಿಸುವುದು ಹಾಸ್ಯಾಸ್ಪದ. ಯಾವುದೇ

ಭಾಷೆ ಆಧುನಿಕ ಅಗತ್ಯಗಳಿಗೆ ತಕ್ಕಂತೆ ಬೇರೆ ಭಾಷೆಗಳಿಂದ ಪದಗಳನ್ನು ಸ್ವೀಕರಿಸಬೇಕು. ಭಾವಾಭಿವ್ಯಕ್ತಿಯ ಸ್ಪಷ್ಟತೆ ಹೆಚ್ಚು ಹೆಚ್ಚು ಪದಗಳನ್ನು ಅಪೇಕ್ಷಿಸುತ್ತದೆ. ಮಡಿವಂತಿಕೆಯಿಂದ ಭಾಷೆ ಬೆಳೆಯುವುದಿಲ್ಲ.

ಪ್ರಾಚೀನತೆಯನ್ನೇ ಹಿರಿಮೆ ಎಂದು ತಿಳಿದುಕೊಳ್ಳುವುದಕ್ಕಿಂತ ಒಂದು ಭಾಷೆಯನ್ನು ವರ್ತಮಾನದ ಮತ್ತು ಭವಿಷ್ಯತ್ತಿನ ದೃಷ್ಟಿಯಿಂದ ಬೆಳೆಸುವುದು ಹೇಗೆ ಎಂಬುದನ್ನು ಯೋಚಿಸಬೇಕು. ಬೇರೆ ಬೇರೆ ಭಾಷೆಗಳಲ್ಲಿರುವ ವಿಜ್ಞಾನ ಗ್ರಂಥಗಳನ್ನು, ಇತರ ಪಾರಿಭಾಷಿಕ ಶಬ್ದಗಳನ್ನು ನಮ್ಮ ಭಾಷೆಗೆ ತಂದುಕೊಳ್ಳಬೇಕು. ನಮ್ಮಲ್ಲಿ ಸೃಜನಶೀಲವಾಗಿ ಮತ್ತು ಸೈದ್ಧಾಂತಿಕವಾಗಿ ರೂಪುಗೊಂಡ ರಚನೆಗಳಿದ್ದರೆ ಅವನ್ನು ಬೇರೆ ಭಾಷೆಗೆ ಭಾಷಾಂತರಿಸಬೇಕು. ಈ ನಿಟ್ಟಿನಲ್ಲಿ ಯೋಚನೆ ಮಾಡುವುದು ಬಿಟ್ಟು ಅವೈಜ್ಞಾನಿಕ ನೆಲೆಯಲ್ಲಿ ಒಂದೆರಡು ಭಾಷೆಗಳಿಗೆ ಮಾನ್ಯತೆ ಕೊಟ್ಟು ಅವುಗಳನ್ನು ಅಭಿಜಾತ ಭಾಷೆಗಳೆಂದು ಘೋಷಿಸುವುದು ಸರಿಯಾದ ವಿಧಾನವಲ್ಲ.

ತಮಿಳಿನ ಬಗ್ಗೆ ನಮ್ಮಲ್ಲಿ ಅನೇಕ ತಪ್ಪು ಕಲ್ಪನೆಗಳನ್ನು ಮೂಡಿಸಲಾಗಿದೆ. ಬೇರೆ ದ್ರಾವಿಡ ಭಾಷೆಗಳಿಗಿಂತ ತಮಿಳಿನಲ್ಲಿ ಮೊದಲೇ ಸಾಹಿತ್ಯ ಉದ್ಭವವಾಯಿತೆಂಬುದೇನೋ ನಿಜ. ಆದರೆ ಅದನ್ನು ಕ್ರಿಸ್ತಪೂರ್ವಕ್ಕೆ ಕೊಂಡೊಯ್ಯಲು ಯಾವ ಆಧಾರವೂ ಇಲ್ಲ. ತಮಿಳು ಸಾಹಿತಿಗಳು ಕೊಡುವ ಆಧಾರಗಳು ಐತಿಹಾಸಿಕ ಅಥವಾ ವೈಜ್ಞಾನಿಕ ಹಿನ್ನೆಲೆಯಿಂದ ಸಮರ್ಥಿಸಲು ಯೋಗ್ಯವಾಗಿಲ್ಲ. ಐತಿಹ್ಯಗಳ ಆಧಾರದಿಂದಲೇ ಸಾಹಿತ್ಯದ ಇತಿಹಾಸವನ್ನು ಸ್ಥಾಪಿಸಲು ಸಾಧ್ಯವಿಲ್ಲ.

ತಮಿಳಿನ ಮೊದಲ ವ್ಯಾಕರಣವನ್ನು ಅಗಸ್ತ್ಯ ಬರೆದನೆಂಬುದು ಐತಿಹ್ಯ. ಈ ಅಗಸ್ತ್ಯ ಸಂಸ್ಕೃತ ಪುರಾಣಗಳ ಪ್ರಕಾರ ಉತ್ತರ ಭಾರತದಿಂದ ದಕ್ಷಿಣಕ್ಕೆ ಬಂದ ಮಹರ್ಷಿ. ಆತನ ಅಗತ್ತಿಯಮ್ (ಅಗಸ್ತ್ಯಮ್), ತೊಲ್‌ಕಾಪ್ಪಿಯನಾರ್ ಬರೆದ ತೊಲ್‌ಕಾಪ್ಪಿಯಮ್ ಹೆಸರುಗಳೇ ಸಂಸ್ಕೃತದಿಂದ ಬಂದಂಥವು. ತೊಲ್‌ಕಾಪ್ಪಿಯನಾರಿನ ವ್ಯಾಕರಣ ಐಂದ್ರ ವ್ಯಾಕರಣ ಸಂಪ್ರದಾಯದಿಂದ ರೂಪುಗೊಂಡದ್ದು. ತಿರುಕ್ಕುರಳ್ ಧರ್ಮ. ಅರ್ಥ, ಕಾಮಗಳೆಂಬ ಪುರುಷಾರ್ಥಗಳ ಆಧಾರದಿಂದಲೇ ರೂಪುಗೊಂಡದ್ದು ಮಾತ್ರವಲ್ಲದೆ ಅದರ ಮೇಲೆ ಸಂಸ್ಕೃತ ನೀತಿ ಕಾವ್ಯಗಳ ಪ್ರಭಾವವೂ ಸ್ಪಷ್ಟ. ತಮಿಳಿನ ಪಂಚ ಮಹಾಕಾವ್ಯಗಳೆಲ್ಲಾ (ಸಿಲಪ್ಪದಿಕಾರಂ, ಮಣಿಮೇಖಲೈ ಇತ್ಯಾದಿ) ಸಂಸ್ಕೃತದಿಂದ ಪ್ರಭಾವಗೊಂಡಂಥವೇ.

ತಮಿಳರು ಪದೇ ಪದೇ ಪ್ರಾಚೀನತೆಯ ಕುರುಹಾಗಿ ಹೆಸರಿಸುವ 'ಸಂಗಂ' ಎಂಬ ಹೆಸರು 'ಸಂಘ' ಎಂಬ ಸಂಸ್ಕೃತ ಶಬ್ದದ ತದ್ಭವ. ತಮಿಳುನಾಡಿನಲ್ಲಿ ಜೈನ ಸಂಘಗಳು ಕ್ರಿ.ಶ. ನಾಲ್ಕನೆಯ ಶತಮಾನದ ಅನಂತರ ಸ್ಥಾಪಿತವಾಗಿವೆ. ತಮಿಳಿನ ಸಂಘ ಸಾಹಿತ್ಯ ಅದಕ್ಕಿಂತ ಹಿಂದೆಯೇ ರೂಪುಗೊಂಡದ್ದಕ್ಕೆ ಯಾವುದೇ ಐತಿಹಾಸಿಕ ಆಧಾರವಿಲ್ಲ. ತಮಿಳಿನ ಸಾಹಿತ್ಯ ಇತಿಹಾಸದಲ್ಲಿ ನಿರಂತರ ಬೆಳವಣಿಗೆಯನ್ನು ಕಾಣಲಾಗುವುದಿಲ್ಲ. ಒಂದು ಸಾಹಿತ್ಯ ಯುಗ ಮುಗಿದ ಮೇಲೆ ಒಂದೆರಡು ಶತಮಾನಗಳ ಕಾಲ ಕತ್ತಲು ಕವಿದಿರುತ್ತದೆ. ಆಗ

Telugu respectively, are associated with its origin. The earliest work extant is a treatise on poetics called *Kavirājamārga* by Nṛpatunga or Amōghavarsha, the Rāṣṭrakūṭa king who ruled from 815 to 877. This king was a great scholar both in Kannada and Sanskrit and a great patron of literary merit. He has written in Sanskrit a

ತಮಿಳು ಸಾಹಿತ್ಯದ ಸ್ಥಿತಿಗತಿಗಳನ್ನು ತಿಳಿಯುವ ಸಾಧ್ಯತೆಗಳಿಲ್ಲ. ಇವೆಲ್ಲದರ ನಡುವೆ ತಮಿಳಿನಲ್ಲಿ ಅಮೂಲ್ಯವಾದ ಮತ್ತು ಶ್ರೇಷ್ಠವಾದ ಸಾಹಿತ್ಯ ಮೂಡಿಬಂದಿದೆ ಎಂದು ಹೇಳಲು ಇತಿಹಾಸ ಅಡ್ಡಿಯಾಗುವುದಿಲ್ಲ.

ತಮಿಳಿಗೆ ಹೋಲಿಸಿದಾಗ ಕನ್ನಡವೂ ಅಷ್ಟೇ ಪ್ರಾಚೀನವಾದ, ಸಮೃದ್ಧವಾದ, ನಿರಂತರವಾದ ಮತ್ತು ಶ್ರೇಷ್ಠವಾದ ಸಾಹಿತ್ಯವನ್ನೂ ಸೃಷ್ಟಿಸಿದೆ ಎಂಬುದನ್ನು ಮನಗಾಣಬೇಕು. ಕನ್ನಡದಲ್ಲಿ ಲಭ್ಯವಾದ ಮೊದಲ ಲಕ್ಷಣ ಗ್ರಂಥ ಕವಿರಾಜ ಮಾರ್ಗ ಒಂಬತ್ತನೆಯ ಶತಮಾನದ್ದು. ಅದರಲ್ಲಿರುವ ಗದ್ಯಕವಿಗಳ ಮತ್ತು ಪದ್ಯ ಕವಿಗಳ ಪಟ್ಟಿ, ಚತ್ತಾಣ, ಬೆದಂಡೆಯಂಥ ಕಾವ್ಯ ಪ್ರಕಾರಗಳ ಉಲ್ಲೇಖ ಮುಂತಾದವು ಅದಕ್ಕಿಂತ ಕೆಲವು ಶತಮಾನಗಳ ಹಿಂದೆಯೇ ಕನ್ನಡ ಸಾಹಿತ್ಯ ಉಗಮವಾಗಿರುವುದನ್ನು ಸೂಚಿಸುತ್ತವೆ. ಭಾಷೆಯ ಅಸ್ತಿತ್ವವನ್ನು ದೃಷ್ಟಿಯಲ್ಲಿಟ್ಟುಕೊಂಡಾಗ ತಮಿಳಿನಂತೆಯೇ ಕನ್ನಡದಲ್ಲೂ ಕ್ರಿಸ್ತಶಕಾರಂಭದಿಂದಲೂ ಮೌಖಿಕ ಪರಂಪರೆಯ ಸಾಹಿತ್ಯವಿದ್ದುದನ್ನು ಒಪ್ಪಲೇಬೇಕು. ಇನ್ನೊಂದು ಮುಖ್ಯವಾದ ಸಂಗತಿ ಎಂದರೆ ಕನ್ನಡದಲ್ಲಿ ಕವಿರಾಜಮಾರ್ಗ ಕಾಲದಿಂದ ಈಗಿನವರೆಗೆ ಸಾಹಿತ್ಯದ ಬೆಳವಣಿಗೆ ಅವಿಚ್ಛಿನ್ನವಾಗಿ ಹರಿದು ಬಂದಿದೆ. ಒಂದು ಸಾವಿರ ವರ್ಷಗಳಿಗಿಂತ ಹೆಚ್ಚಾಗಿ ಸಮೃದ್ಧವಾದ ಸಾಹಿತ್ಯ ವಿಕಾಸ ಹೊಂದಿದ ದಾಖಲೆಗಳು ಪ್ರಪಂಚದಲ್ಲೇ ವಿರಳ. ಆದರೆ ಒಂದೇ ಒಂದು ಲೋಪ. ಕನ್ನಡಿಗರಿಗೆ ತಮ್ಮ ಭಾಷಾ ಸಾಹಿತ್ಯಗಳ ಬಗೆಗೆ ನಿರಭಿಮಾನ, ನಿರಾಸಕ್ತಿ ಪ್ರಬಲವಾಗಿವೆ. ಕನ್ನಡದ ಶ್ರೇಷ್ಠ ಸಾಹಿತ್ಯವನ್ನು ಕುರಿತಂತೆ ಇತರರಿಗೆ ತಿಳಿಯಪಡಿಸುವುದರಲ್ಲಿ ಈ ನಿರಾಸಕ್ತಿ ಇನ್ನೂ ಹೆಚ್ಚಾಗಿದೆ. ಇದರಿಂದ ರಾಷ್ಟ್ರಮಟ್ಟದಲ್ಲಿ ಕನ್ನಡಕ್ಕೆ ಮಾನ್ಯತೆ ಸಿಗುವುದಾದರೂ ಹೇಗೆ?

ತಮಿಳು ಭಾಷೆ ಒಂದನ್ನೇ ಅಭಿಜಾತ ಭಾಷೆಯೆಂದು ಘೋಷಿಸುತ್ತಿರುವಾಗ ದೆಹಲಿಯಲ್ಲಿರುವ ನಮ್ಮ ಪ್ರತಿನಿಧಿಗಳು ಬಾಯಿಬಿಚ್ಚದೆ ಇರುವುದು ಅವರ ನಿರಭಿಮಾನದ ಸಂಕೇತ. ಇನ್ನು ಮೇಲಾದರೂ ನಮ್ಮವರು ಕನ್ನಡ ಭಾಷಾ ಸಾಹಿತ್ಯಗಳಿಗೆ ಗೌರವಾನ್ವಿತ ಸ್ಥಾನ ಗಳಿಸಿಕೊಡುವ ನಿಟ್ಟಿನಲ್ಲಿ ಶ್ರಮಿಸುವಂತಾಗಲಿ. ನಮ್ಮ ಸಾಹಿತಿಗಳು ಕನ್ನಡದ ಹಿರಿಮೆಯ ಬಗೆಗಿನ ಸತ್ಯಾಂಶಗಳನ್ನಾದರೂ ಪ್ರಕಟಗೊಳಿಸಲಿ.*

* ಸೌಜನ್ಯ: ಪ್ರಜಾವಾಣಿ, ೨೪.೯.೨೦೦೪.

## ಆಡಳಿತ ಭಾಷೆಯಾಗಲಿ

ಅತ್ಯಂತ ಪ್ರಾಚೀನ ಮತ್ತು ಸೃಜನಶೀಲ ಭಾಷೆಗೆ ಸಂದ ಗೌರವದಿಂದ ಹೆಚ್ಚಿನ ಸಂತಸವಾಗಿದೆ.
ಇನ್ನು ಮುಂದಾದರೂ ಕನ್ನಡವನ್ನು ಸಂಪೂರ್ಣ ಆಡಳಿತ, ಶೈಕ್ಷಣಿಕ ಹಾಗೂ ನ್ಯಾಯಾಂಗದ ಭಾಷೆಯನ್ನಾಗಿ ಅನುಷ್ಠಾನಗೊಳಿಸಲು ಸರ್ಕಾರ ಪಣ ತೊಡಬೇಕು.
ಕನ್ನಡ ರಾಜ್ಯೋತ್ಸವದ ಸಂದರ್ಭದಲ್ಲಿ ಈ ಗೌರವ ದೊರೆತಿರುವುದರಿಂದ ಸಂತಸ ಇಮ್ಮಡಿಯಾಗಿದ್ದು, ಅತ್ಯಂತ ಅರ್ಥಪೂರ್ಣವಾಗಿ ರಾಜ್ಯೋತ್ಸವ ಆಚರಿಸಬಹುದು. ಪ್ರಾಚೀನ ಕಾಲದಿಂದ ಕನ್ನಡದ ಸಾಹಿತ್ಯ, ಸಂಸ್ಕೃತಿ ಬೆಳವಣಿಗೆಗೆ ಕಾರಣರಾದ ಎಲ್ಲರಿಗೂ ಅಭಿನಂದನೆಗಳು.

– ಪ್ರೊ. ಕೆ.ಎಸ್. ನಿಸಾರ್ ಅಹಮದ್

# ಶಾಸ್ತ್ರೀಯ ಸ್ಥಾನಮಾನ ಕನ್ನಡದ ಅರ್ಹ ಹಕ್ಕೊತ್ತಾಯ



ಡಾ. ಪ್ರಧಾನ ಗುರುದತ್ತ

ಕೇಂದ್ರ ಸರ್ಕಾರ ೨೦೦೪ರಲ್ಲಿ ಭಾರತೀಯ ಭಾಷೆಗಳಲ್ಲಿ ಒಂದಾದ ತಮಿಳಿಗೆ 'ಶಾಸ್ತ್ರೀಯ ಭಾಷೆ' (Classical Language) ಎಂಬುದಾಗಿ ವಿಶೇಷ ಸ್ಥಾನಮಾನ ನೀಡುವ ಘೋಷಣೆ ಮಾಡುವ ಮೂಲಕ ಸಮಸ್ಯೆಯೊಂದನ್ನು ಹುಟ್ಟು ಹಾಕಿದೆ. ತಮಿಳಿನಷ್ಟೇ ಅಥವಾ ಅದಕ್ಕಿಂತ ಪ್ರಾಚೀನವಾಗಿರುವ ಕನ್ನಡ, ತೆಲುಗು ಮೊದಲಾದ ಭಾಷೆಗಳು ಇದೇ ಬಗೆಯ ಸ್ಥಾನಮಾನವನ್ನು ಪಡೆಯಲು ತಮ್ಮ ಹಕ್ಕೊತ್ತಾಯ ಮಂಡಿಸಲು ಇದು ಕಾರಣವಾಗಿದೆ. ತಮಿಳಿಗೆ ಈ ಸ್ಥಾನವನ್ನು ನೀಡಲು ಅದಕ್ಕಿರುವ ಅರ್ಹತೆಗಿಂತ, ಕೇಂದ್ರ ಸರ್ಕಾರಕ್ಕೆ ಅದರ ಪ್ರತಿನಿಧಿಗಳು ನೀಡಿರುವ ರಾಜಕೀಯ ಬೆಂಬಲವೇ ಕಾರಣ. ತನ್ನ ಚುನಾವಣಾ ಪ್ರಣಾಳಿಕೆಯಲ್ಲಿ ಡಿ.ಎಂ.ಕೆ. ಪಕ್ಷ ಈ ಅಂಶವನ್ನು ಒತ್ತಿ ಹೇಳಿತ್ತು ಹಾಗೂ ಈ ಒತ್ತಾಯಕ್ಕೆ ಕೇಂದ್ರ ಸರ್ಕಾರ ಮಣಿಯಿತು. ಈ ಸ್ಥಾನಮಾನ ನೀಡುವಾಗ ಯಾವುದೇ ಮಾನದಂಡಗಳನ್ನೂ ರೂಪಿಸಿರಲಿಲ್ಲ ಎಂಬುದು ಗಮನಾರ್ಹ ಸಂಗತಿ. ಇತರ ಭಾಷೆಗಳಿಂದಲೂ ಹಕ್ಕೊತ್ತಾಯ ಬರಲು ಪ್ರಾರಂಭವಾದ ಬಳಿಕ ಕೇಂದ್ರ ಸಾಹಿತ್ಯ ಅಕಾಡೆಮಿಯೊಂದಿಗೆ ಸಮಾಲೋಚನೆ ನಡೆಸಿ, ಕೆಲವು ಮಾನದಂಡಗಳನ್ನು ರೂಪಿಸಲಾಯಿತು. ಮೊದಲು ಮಾನ್ಯತೆ ನೀಡಿ, ಅನಂತರ ಮಾನದಂಡಗಳನ್ನು ರೂಪಿಸಿರುವ ಹಾಗೂ ಮಾನದಂಡಗಳನ್ನು ಬದಲಾಯಿಸುತ್ತ ಹೋಗಿರುವ ಕೇಂದ್ರ ಸರ್ಕಾರದ ಕ್ರಮ ಆಕ್ಷೇಪಣೀಯವಷ್ಟೇ ಅಲ್ಲದೆ, ಇತರ ಭಾಷೆಗಳನ್ನು ಇಂಥ ಮಾನ್ಯತೆಯಿಂದ ಹೊರಗಿಡುವ ಹುನ್ನಾರವೇ ಇದರಲ್ಲಿ ಅಡಗಿದೆ ಎಂಬುದು ಸ್ಪಷ್ಟ.

ಮೊದಲಿಗೆ 'ಕ್ಲಾಸಿಕ್' ಎಂಬುದನ್ನು ಜಗದ್ವಿಖ್ಯಾತ ಕೋಶಗಳು ಹೇಗೆ ವಿವರಿಸಿವೆ ಎಂಬುದನ್ನು ನೋಡಬಹುದು. 'The Concise Oxford Dictionary of Current English' ಯಲ್ಲಿ (ಪು. ೧೮೪೬) ಹೀಗೆಂದು ಹೇಳಲಾಗಿದೆ:

He mentions several Kannaḍa authors that preceded him: Vimala, Uḍaya, Nāgārjuna, Jayabandhu and Durvinita as the best writers of Kannaḍa prose; and Śrīvijaya, Kavīśvara, Paṇḍita, Chandra and Lōkapāla as the best writers of Kannaḍa poetry. Durvinita, mentioned as a Kannaḍa prose writer, was evidently the Ganga king of that name.

Standard or first class, esp. in literature; - of ancient Latin or Greek standard authors or art - (of language) having form used by ancient standard authors;

ಇದನ್ನೇ ಆಧರಿಸಿರುವ ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್–ಕನ್ನಡ ನಿಘಂಟಿನಲ್ಲಿ 'ಕ್ಲಾಸಿಕಲ್' ಎಂಬುದನ್ನು ಹೀಗೆ ವಿವರಿಸಲಾಗಿದೆ. (ಪು. ೯೧೫ ಬಿ) – ಮಾದರಿಯಾದ, ಆದರ್ಶಪ್ರಾಯವಾದ, ಮೊದಲ ಶ್ರೇಣಿಯ, ಪಂಕ್ತಿಯ; – ಪ್ರಥಮ ವರ್ಗದ, ಉತ್ಕೃಷ್ಟ , ಶ್ರೇಷ್ಠ, ಮೇಲ್ತರದ, – ಪ್ರಾಚೀನ ಗ್ರೀಕ್ ಯಾ ಲ್ಯಾಟಿನ್ನಿನ ಶ್ರೇಷ್ಠ ಯಾ ಆದರ್ಶ ಲೇಖಕರ; – ಪ್ರಾಚೀನ ಗ್ರೀಕ್ ಯಾ ಲ್ಯಾಟಿನ್ನಿನ ಶ್ರೇಷ್ಠ ಸಾಹಿತ್ಯ ಯಾ ಕಲೆಗಳನ್ನು ಆಧರಿಸಿದ, ಮೂಲವಾಗಿಟ್ಟುಕೊಂಡ –(ಸಂಗೀತದ ವಿಷಯದಲ್ಲಿ) ಶಾಸ್ತ್ರೀಯ, ಹಿಂದಿನಿಂದ ಸಾಂಪ್ರದಾಯಿಕವಾಗಿ ಬಂದಿರುವ ಯಾ ಗಂಭೀರವಾದ.

ಆಪ್ಟೆಯವರ The Student's Sanskrit- English Dictionary ಯಲ್ಲಿ (ಪು. ೫೯) ಈ ಶಬ್ದಕ್ಕೆ ಹೀಗೆಂದು ಅರ್ಥೈಸಲಾಗಿದೆ:– ಸಂಸ್ಕೃತ, ಶ್ರೇಷ್ಠ, ಪ್ರಥಮ ವರ್ಗೀಯ.

ಈ ವಿವರಣೆಗಳಲ್ಲಿ 'ಪ್ರಾಚೀನ ಗ್ರೀಕ್ ಯಾ ಲ್ಯಾಟನ್ನಿನ ಶ್ರೇಷ್ಠ ಸಾಹಿತ್ಯ ಯಾ ಕಲೆಗಳನ್ನು ಆಧರಿಸಿದ, ಮೂಲವಾಗಿ ಇಟ್ಟುಕೊಂಡ' ಎಂಬ ವಿವರಣೆ ಭಾರತೀಯ ಭಾಷಾ ಸಾಹಿತ್ಯಗಳ ದೃಷ್ಟಿಯಿಂದ ಅಪ್ರಕೃತ ಅಥವಾ ಅಸಂಗತ. ಹೀಗಾಗಿ ಭಾರತೀಯ ಭಾಷೆ–ಸಾಹಿತ್ಯಗಳ ಸಂದರ್ಭದಲ್ಲಿ 'ಗ್ರೀಕ್ ಯಾ ಲ್ಯಾಟಿನ್' ಎಂಬುದಕ್ಕೆ ಬದಲಾಗಿ, 'ಸಂಸ್ಕೃತ ಯಾ ಪ್ರಾಕೃತ ಯಾ ಅಪಭ್ರಂಶ' ಎಂದು ಇರಿಸಿಕೊಳ್ಳಬೇಕಾಗುತ್ತದೆ. ಸಂಸ್ಕೃತದ ಮಾದರಿ ಅನುಸರಿಸಿದ ರಾಮಾಯಣ, ಮಹಾಭಾರತಗಳಂಥ ಆದರ್ಶಪ್ರಾಯವಾದ ಮೊದಲ ಶ್ರೇಣಿಯ ಕೃತಿಗಳನ್ನು ಅನುಸರಿಸಿ ತಮ್ಮ ತಮ್ಮ ಭಾಷಾ ಸಾಹಿತ್ಯಗಳನ್ನು ಸಮೃದ್ಧಗೊಳಿಸಿಕೊಂಡಿರುವ ಅನೇಕ ಭಾಷೆಗಳು ನಮ್ಮಲ್ಲಿವೆ. ಕನ್ನಡ ಈ ವಿಷಯದಲ್ಲಿಯೂ ಅಗ್ರಸ್ಥಾನವನ್ನು ಅಲಂಕರಿಸುತ್ತದೆ. ಅಷ್ಟೇ ಅಲ್ಲ, ಸಂಸ್ಕೃತದಿಂದ ಭಿನ್ನವಾದ ಪರಂಪರೆಯಲ್ಲಿ ಶ್ರೇಷ್ಠವಾದ ಸಾಹಿತ್ಯವನ್ನು ಸೃಷ್ಟಿಸಿಕೊಂಡಿರುವ ಹಿರಿಮೆಯೂ ಕನ್ನಡದ್ದಾಗಿದೆ.

ತಮಿಳರು ಇದಕ್ಕೆ ಒಂದು ಇತಿಹಾಸವನ್ನೇ ಸೃಷ್ಟಿಸಿಕೊಂಡು ಬಿಟ್ಟಿದ್ದಾರೆ. ಅದರ ಮುಖ್ಯಾಂಶಗಳು ಇಂತಿವೆ: (೧) ೧೮೮೭ರಲ್ಲಿ ಪಿರುತಿಮಲ್ ಕಲೈನಾರ್ ಎಂಬ ವಿದ್ವಾಂಸ ತಮಿಳಿಗೆ ಇಂಥ ವಿಶಿಷ್ಟ ಮಾನ್ಯತೆ ದೊರೆಯಬೇಕೆಂಬ ಅಹವಾಲನ್ನು ಮಂಡಿಸಿದನಂತೆ. ಮುಂದೆಯೂ ಮತ್ತೆ ಮತ್ತೆ ಈ ಅಹವಾಲನ್ನು ಪುನರಾವರ್ತನೆ ಮಾಡುತ್ತ ಬರಲಾಗಿದೆಯಂತೆ. (೨) ಬರ್ಕ್ಲಿ ಸಂಸ್ಥಾನದ ಕ್ಯಾಲಿಫೋರ್ನಿಯಾ

ವಿಶ್ವವಿದ್ಯಾನಿಲಯದ ದಕ್ಷಿಣ ಏಷ್ಯಾ ಅಧ್ಯಯನ ವಿಭಾಗದಲ್ಲಿ ತಮಿಳು ಪ್ರಾಧ್ಯಾಪಕನಾಗಿ ಕಾರ್ಯನಿರ್ವಹಿಸುತ್ತಿದ್ದ ಜಾರ್ಜ್ ಎಲ್. ಹಾರ್ಟ್ ಎಂಬಾತ ೨೦೦೦ರಲ್ಲಿ ಒಂದು ವೆಬ್ ಅನ್ನು ಸೃಷ್ಟಿಸಿದ. ಅದರಲ್ಲಿ ಭಾಷೆ, 'ಕ್ಲಾಸಿಕಲ್' ಎಂಬ ಮಾನ್ಯತೆಗೆ ಅರ್ಹವಾಗಬೇಕಾದರೆ, ಈ ಕೆಳಗೆ ಕಾಣಿಸಿರುವ ಷರತ್ತುಗಳನ್ನು ಪೂರೈಸಬೇಕೆಂದು ಹೇಳಲಾಯಿತು.

ಅ) ಅದು ಪ್ರಾಚೀನವಾದುದಾಗಿರಬೇಕು. ಆ) ಅದು ಬಹುಮಟ್ಟಿಗೆ ತನ್ನದೇ ಆದ ನೆಲೆಯಿಂದ ಮೂಡಿ ಬಂದಿರುವ ಸ್ವತಂತ್ರ ಸಂಪ್ರದಾಯ ಹೊಂದಿರಬೇಕು. ಇ) ಅದು ಬೇರಾವುದೇ ಸಂಪ್ರದಾಯದ ಮೊಳಕೆಯಾಗಿರಬಾರದು ಅಥವಾ ಅದರಿಂದ ನಿಷ್ಪನ್ನವಾಗಿರುವಂಥದಾಗಿರಬಾರದು. ಈ) ಅದರಲ್ಲಿ ವಿಶಾಲ ಮತ್ತು ಅತ್ಯಂತ ಸಮೃದ್ಧ ಪ್ರಾಚೀನ ಸಾಹಿತ್ಯ ಸಂಪತ್ತಿರಬೇಕು.

ತಮಿಳಿಗೆ ಸಂಬಂಧಿಸಿದಂತೆ ಹೀಗೆಂದು ವಾದಿಸಲಾಯಿತು.

೧) ಇದು ಅತ್ಯಂತ ಪ್ರಾಚೀನವಾದುದು ೨) ಬಹುಮಟ್ಟಿಗೆ ಸಂಸ್ಕೃತದ ಅಥವಾ ಇತರ ಭಾಷೆಗಳ ಯಾವುದೇ ಪ್ರಭಾವದಿಂದ ಸಂಪೂರ್ಣವಾಗಿ ಮುಕ್ತವಾಗಿರುವ ಸ್ವತಂತ್ರ ಸಂಪ್ರದಾಯವನ್ನು ಮೂಡಿಸಿಕೊಂಡಿದೆ. ೩) ಅದರ ಪ್ರಾಚೀನ ಸಾಹಿತ್ಯ ವರ್ಣಿಸಲಾಗದಷ್ಟು ವಿಶಾಲವೂ, ಸಮೃದ್ಧವೂ ಆತದೆ.

ಈ ವಾದಗಳನ್ನು ಇಲ್ಲಿಯೆ ಸಂಕ್ಷಿಪ್ತವಾಗಿ ಪರೀಕ್ಷಿಸಬಹುದು. ಮೊದಲನೆಯ ಸಂಘಕಾಲ, ಎರಡನೆಯ ಸಂಘಕಾಲ ಮತ್ತು ಮೂರನೆಯ ಸಂಘಕಾಲ ಎಂಬುದಾಗಿ ವಿಂಗಡಿಸಲಾಗಿರುವ ಪ್ರಾಚೀನ ತಮಿಳು ಸಾಹಿತ್ಯದಲ್ಲಿ ಮೊದಲನೆಯ ಸಂಘಕಾಲದ ಯಾವ ಗ್ರಂಥವೂ ಲಭ್ಯವಿಲ್ಲ. ಎರಡನೆಯ ಸಂಘಕಾಲಕ್ಕೆ ಸಂಬಂಧಿಸಿದಂತೆ 'ಮುಂದಿನ ಲೇಖಕರಿಂದ ಅಲ್ಲಲ್ಲಿ ಅನುವಾದವಾಗಿರುವ ಬಿಡಿ ಪದ್ಯಗಳನ್ನುಳಿದರೆ 'ತೊಲ್ ಕಾಪ್ಪಿಯ'ವೊಂದೇ ಈಗ ಲಭ್ಯವಾಗಿರುವ ಕೃತಿ. (ಸಾಹಿತ್ಯ ಭಾರತೀ: ಎನ್. ಅನಂತರಂಗಾಚಾರ್; ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ೧೯೭೦, ಪು. ೨೯೩) ಅವರು ಹೆಸರಿಸಿರುವ ಪಂಚ ಮಹಾಕಾವ್ಯಗಳಲ್ಲಿ 'ಕುಂಡಲ ಕೇಶಿ' ಮತ್ತು 'ವಳಯಾಪತಿ' ಉಪಲಬ್ಧವಿಲ್ಲ. 'ತೊಲ್ ಕಾಪ್ಪಿಯ'ದಲ್ಲಿನ ಕಾಪ್ಪಿಯ (ಕಾವ್ಯ-ಸಂಸ್ಕೃತ) ಲಭ್ಯವಿಲ್ಲದಿರುವ 'ಕುಂಡಲ ಕೇಶಿ' ಮತ್ತು 'ವಳಯಾಪತಿ' ಹಾಗೂ ಲಭ್ಯವಿರುವ 'ಶಿಲಪ್ಪದಿಕಾರಂ' 'ಮಣಿಮೇಕಲೈ' ಮತ್ತು 'ಜೀವಕ ಚಿಂತಾಮಣಿ' ಕಾವ್ಯಗಳ ಶೀರ್ಷಿಕೆಗಳೆಲ್ಲವೂ ಸಂಸ್ಕೃತದ ಪ್ರಭಾವವನ್ನೇ ಸೂಚಿಸುತ್ತವೆ. ತಮಿಳಿನ ಅತ್ಯಂತ ಪ್ರಾಚೀನ ಉಪಲಬ್ಧ ಶಾಸನವಾದ ತಿರುನಾಡರ್ ಕುನ್ರಂ ಶಾಸನ ಕ್ರಿ.ಶ. ಸುಮಾರು ೨೦೦ರ ಕಾಲಕ್ಕೆ ಸೇರಿದ್ದು. ಅದರಲ್ಲಿನ ಮಾತುಗಳೂ- 'ಐಂಪತ್ತನ ಚನನ್ನೋರ ಚಂತಿರನಂತಿ ಆ ಸಿರಿಯರ್ ನಿಚಿಸಿ ಕೈ'-ಸಂಸ್ಕೃತದ ಪ್ರಭಾವವನ್ನೇ ಸಾರಿ ಹೇಳುತ್ತವೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಕನ್ನಡದ 'ಕವಿರಾಜ ಮಾರ್ಗ' ಅಲಂಕಾರ ಗ್ರಂಥದಲ್ಲಿ ಉಲ್ಲೇಖಗೊಂಡಿರುವ ಪದ್ಯ ಕವಿಗಳ ಮತ್ತು ಗದ್ಯ ಕವಿಗಳ ಪಟ್ಟಿ (ಶ್ರೀವಿಜಯ, ಕವೀಶ್ವರ, ಪಂಡಿತ, ಚಂದ್ರ, ಲೋಕಪಾಲ ಮೊದಲಾದವರು ಪದ್ಯ ಕವಿಗಳು; ವಿಮಲೋದಯ, ನಾಗಾರ್ಜುನ, ಜಯಬಂಧು, ದುರ್ವಿನೀತ ಮೊದಲಾದವರು ಗದ್ಯ ಕವಿಗಳು) ಹಾಗೂ ಉಪಲಬ್ಧ ದಿನಾಂಕಿತ ಅತ್ಯಂತ ಪ್ರಾಚೀನ ಶಿಲಾಶಾಸನವಾದ ಹಲ್ಮಿಡಿ ಶಾಸನ (ಕ್ರಿ.ಶ. ೪೫೦) - ಇವೆಲ್ಲ ಕನ್ನಡವೂ ಬಹುಮಟ್ಟಿಗೆ ತಮಿಳಿನಷ್ಟೇ ಪ್ರಾಚೀನ ಭಾಷೆ ಎಂಬುದಕ್ಕೆ ಸಾಕ್ಷಿ. 'ಕವಿರಾಜಮಾರ್ಗ'ದಲ್ಲಿಯೇ 'ಪಳಗನ್ನಡ'ವೆಂಬ ಮಾತು ಬಂದಿರುವುದು, 'ಶಿಲಪ್ಪತಿಕಾರಂ'ನಲ್ಲಿ 'ಕರುನಾಡಿಗರ' ಉಲ್ಲೇಖ ಕಂಡುಬರುವುದೂ ಹೆಚ್ಚಿನ ಆಧಾರಗಳನ್ನು ಒದಗಿಸುತ್ತವೆ. ಪಂಪನಿಂದ ಮುಂದಕ್ಕೆ ಬಂದಿರುವ ಹಳಗನ್ನಡ ಸಾಹಿತ್ಯ ಕನ್ನಡ ಸಾಹಿತ್ಯದ ಸಮೃದ್ಧಿಯ ಸಂಕೇತವಾಗಿದ್ದರೆ, ೧೨ನೆಯ ಶತಮಾನದ ಮತ್ತು

ಅದರ ಮುಂದಿನ ಅವಧಿಯ 'ವಚನ ಸಾಹಿತ್ಯ' ಕನ್ನಡದ ನೆಲದಲ್ಲಿ ಸ್ವತಂತ್ರವಾಗಿಯೇ ಅರಳಿ ನಿಂತ ಹಾಗೂ ಇಪ್ಪತ್ತನೆಯ ಶತಮಾನವನ್ನು ದಾಟಿ ಬೆಳೆಯುತ್ತಲೇ ಬಂದಿರುವ ವಿಶಿಷ್ಟ ಸಾಹಿತ್ಯ ಪ್ರಕಾರ. ಭಾರತೀಯ ಸಾಹಿತ್ಯಕ್ಕೆ ಮಾತ್ರವಲ್ಲ, ಜಾಗತಿಕ ಸಾಹಿತ್ಯಕ್ಕೆ ಇದು ಕನ್ನಡದ ವಿನೂತನ ಕೊಡುಗೆ. ಅಂಥದೇ ಇನ್ನೊಂದು ವಿಶಿಷ್ಟಕಾಣಿಕೆ 'ದಾಸ ಸಾಹಿತ್ಯ'. ಇದೂ ಆಧುನಿಕ ಕಾಲದವರೆಗೂ ಮುಂದುವರಿದುಕೊಂಡು ಬಂದಿದೆ. ಸಂಸ್ಕೃತಿಯ ವೈಶಿಷ್ಟ್ಯಗಳನ್ನು ಕಾಯ್ದುಕೊಂಡು ಬಂದ ಹಿರಿಮೆ ಅದರದಾಗಿದೆ. ಅಂತೆಯೇ ಗಜಶಾಸ್ತ್ರ, ಹಯಶಾಸ್ತ್ರ, ವಿಷವೈದ್ಯಾದಿ ತಾಂತ್ರಿಕ ಗ್ರಂಥಗಳೂ ದೊರೆಯುತ್ತವೆ. ಆಧುನಿಕ ಭಾರತೀಯ ಸಾಹಿತ್ಯದಲ್ಲಿ ಕನ್ನಡದ ಹಿರಿಮೆ ಜಗಜ್ಜಾಹೀರಾಗಿದೆ. ಅದು ಗಳಿಸಿರುವ ಜ್ಞಾನಪೀಠ ಪ್ರಶಸ್ತಿಗಳ ಸಂಖ್ಯೆಯೇ (ಏಳು) ಅದರ ಹಿರಿಮೆಗೆ ಸಾಕ್ಷಿಯಾಗಿದೆ.

ಇಷ್ಟರ ಮಟ್ಟಿನ ಸಮೃದ್ಧಿಯ ಹಿರಿಮೆ ಹಲವು ಭಾಷೆಗಳಿಗೆ ಇಲ್ಲವೆಂಬುದು ಗಮನಾರ್ಹ ಸಂಗತಿಯೇ ಆಗಿದೆ.*

* ಸೌಜನ್ಯ: ದಿ ಟೈಮ್ಸ್ ಆಫ್ ಇಂಡಿಯಾ (ಕನ್ನಡ), ೨೮.೧.೨೦೦೭.

## ಕನ್ನಡ ಬಳಸಿ, ಉಳಿಸಬೇಕು

ಕನ್ನಡಕ್ಕಿದ್ದ ಅಭಿಜಾತ ಭಾಷೆಯ ಸ್ಥಾನಮಾನವನ್ನು ಇದೀಗ ಸರ್ಕಾರವೂ ಮಾನ್ಯ ಮಾಡಿದೆ. ಅದು ಸಂತೋಷದ ವಿಷಯ. ಭಾಷೆಯೊಂದಕ್ಕೆ ಅಭಿಜಾತ ಭಾಷೆಯ ಸ್ಥಾನಮಾನ ದೊರೆಯುವಷ್ಟೇ ಮುಖ್ಯವಾದದ್ದು ಅದನ್ನು ಬಳಸಿ, ಉಳಿಸುವುದು. ಕನ್ನಡದ ಮಕ್ಕಳು ಇಂಗ್ಲಿಷ್‌ನತ್ತ ಆಕರ್ಷಿತರಾಗುತ್ತಿರುವ ಈ ಹೊತ್ತಿನಲ್ಲಿ ಕನ್ನಡವನ್ನು ಉಳಿಸುವುದಕ್ಕೆ ಸಾಮಾನ್ಯ ಶಾಲೆಯ ಪರಿಕಲ್ಪನೆಯನ್ನು ಜಾರಿಗೆ ತರಬೇಕಾದದ್ದು ಅತ್ಯಗತ್ಯ.

ಡಾ। ಯು.ಆರ್. ಅನಂತಮೂರ್ತಿ

# ಕನ್ನಡಕ್ಕೆ ಶಾಸ್ತ್ರೀಯಭಾಷೆಯ ಸ್ಥಾನ



ನಾ. ಗೀತಾಚಾರ್ಯ

ಶಾಸ್ತ್ರೀಯಭಾಷೆ (Classical Language) ಎನ್ನುವುದು ವಾಸ್ತವವಾಗಿ ಭಾಷಾವಿಜ್ಞಾನ ಕ್ಷೇತ್ರದಲ್ಲಿ ಅಧ್ಯಯನದ ಅನುಕೂಲಕ್ಕಾಗಿ ಬಳಕೆಯಲ್ಲಿರುವ ಪಾರಿಭಾಷಿಕ ಪದ. ಇದಕ್ಕೆ ಹಲವು ಪರ್ಯಾಯಪದಗಳಿವೆ. ಪ್ರಾಚೀನ ಭಾಷೆ, ಅಭಿಜಾತಭಾಷೆ, ಬಳಕೆಯಲ್ಲಿಲ್ಲದ ಮೃತಭಾಷೆ, (Dead Language) ಇತ್ಯಾದಿ. ಶಾಸ್ತ್ರೀಯಭಾಷೆ ಎಂದರೆ ಭಾಷಾವಿಜ್ಞಾನಗಳ ಅಭಿಪ್ರಾಯದಂತೆ, ಸಾವಿರಾರು ವರ್ಷಗಳ ಹಿಂದೆ ಬಳಕೆಯಲ್ಲಿದ್ದ ಭಾಷೆಯೊಂದು ಜನಬಳಕೆಯಲ್ಲಿದ್ದ ಕಾಲದಲ್ಲಿ ಸಂಪದ್ಭರಿತವಾಗಿ ಬೆಳೆದಿದ್ದು ಸಾಹಿತ್ಯ, ಸಂಸ್ಕೃತಿ, ಧರ್ಮ, ಶಿಕ್ಷಣ, ರಾಜಕಾರಣ ಇತ್ಯಾದಿ ಕ್ಷೇತ್ರಗಳಲ್ಲಿ ಮುಂದುವರಿದಿದ್ದು, ಸುಸಂಸ್ಕೃತ ನಾಗರೀಕ ಸಮಾಜವಾಗಿದ್ದು, ಈ ಕ್ಷೇತ್ರಗಳಲ್ಲಿ ಅನೇಕ ಮೌಲಿಕ ಗ್ರಂಥಗಳನ್ನು ರಚಿಸಿ ಅಭ್ಯಸಿಸುತ್ತಿದ್ದ ಸಂಪದ್ಭರಿತ ಭಾಷೆಯಾಗಿದ್ದರೂ ಪ್ರಸ್ತುತ ಕಾಲದಲ್ಲಿ ಅಂದರೆ ಆಧುನಿಕ ಕಾಲದಲ್ಲಿ ಬಳಕೆ ತಪ್ಪಿರುವ ಭಾಷೆಯಾಗಿರುವ ಯಾವುದೇ ಒಂದು ಜನಾಂಗ ಅಥವಾ ಸಮಾಜ ಅಥವಾ ವ್ಯವಸ್ಥೆ ತನ್ನ ನಿತ್ಯವ್ಯವಹಾರಗಳಿಗೆ ಆ ಭಾಷೆಯನ್ನು ಅವಲಂಬಿಸದಿರುವ, ಮಾತುಕತೆಯಲ್ಲಿ ಸಹಜವಾಗಿ ಬಳಸದಿರುವ ಭಾಷೆ ಎಂದು ಸ್ಥೂಲವಾಗಿ ಹೇಳಬಹುದು, ಇಂದು ಬಳಕೆಯಲ್ಲಿಲ್ಲದ, ಪರಸ್ಪರ ಸಂವಹನ ಸಾಧ್ಯತೆಯನ್ನು ಹೊಂದಿಲ್ಲದ ಪ್ರಾಚೀನ ಭಾಷೆಗಳೆಂದರೆ ಸಂಸ್ಕೃತ, ಗ್ರೀಕ್, ಲ್ಯಾಟೀನ್, ಅರೇಬಿಕ್, ಹೀಬ್ರೂ, ಪರ್ಶಿಯನ್ ಇತ್ಯಾದಿ. ಇಂದು ಇಂಥವು ಯಾವುದೇ ನಿರ್ದಿಷ್ಟ ಸಮಾಜದ ಜನರಲ್ಲಿ ವ್ಯವಹಾರದಲ್ಲಿಲ್ಲದಿದ್ದರೂ ಇವುಗಳಲ್ಲಿ ರಚನೆಯಾಗಿರುವ ಮೌಲಿಕ ಗ್ರಂಥಗಳು, ಇವು ಹಿಂದಿನಿಂದಲೂ ಬಳಕೆಯಲ್ಲಿದ್ದ ಸಮಾಜಗಳಲ್ಲಿ ಉಳಿದುಬಂದಿವೆ. ಆ ಪ್ರದೇಶಗಳಲ್ಲಿರುವ ಇಂದಿನ ಭಾಷೆಗಳಿಗೆ ಅವುಗಳ ಪ್ರಾಚೀನ ಭಾಷೆಗಳೇ ಮಾತೃಸ್ಥಾನದಲ್ಲಿರುತ್ತವೆ. ಪ್ರಾಚೀನ ಗ್ರಂಥಗಳ ಅಧ್ಯಯನ, ಅಭ್ಯಾಸ, ಪುನಾಸೃಷ್ಟಿ, ಅನುವಾದ, ಪ್ರಭಾವ ಇತ್ಯಾದಿಗಳಿಂದಲೇ ಆ ಪ್ರದೇಶಗಳ ಇಂದಿನ ಭಾಷೆಗಳ ಸಂಸ್ಕೃತಿ ಸಂಪದ್ಭರಿತವಾಗಿರುತ್ತದೆ. ಹೀಗೆ ಇಂದು ನಶಿಸಿಹೋಗಿರುವ ಆದರೆ ಹಿಂದೆ ಸಂಪುಷ್ಟವಾಗಿದ್ದು ಸಾಹಿತ್ಯ ದಾಖಲೆಯಿರುವ ಪ್ರಾಚೀನ ಭಾಷೆಗಳ ಉಳಿವಿಗೆ, ಸಂಶೋಧನೆಗೆ ವಿಶೇಷ ಅನುಕೂಲ ಕಲ್ಪಿಸುವುದಕ್ಕಾಗಿ ಅಂಥವುಗಳನ್ನು ಶಾಸ್ತ್ರೀಯ ಭಾಷೆಗಳು ಎಂದು ಕರೆಯಲಾಗುತ್ತದೆ.

**ಭಾರತದಲ್ಲಿ ಶಾಸ್ತ್ರೀಯಭಾಷೆ**

ಸಂಸ್ಕೃತ ಭಾರತದ ಶಾಸ್ತ್ರೀಯಭಾಷೆ ಎನಿಸಿದೆ. ಪ್ರಾಚೀನ ಭಾರತದ ಸಂಸ್ಕೃತದ ರಾಮಾಯಣ, ಮಹಾಭಾರತ, ಭಾಗವತ, ವೇದ, ಉಪನಿಷತ್ತುಗಳು ಭಾರತೀಯ ಭಾಷೆಗಳಲ್ಲೆಲ್ಲ ಹರಡಿವೆ. ಭಾರತೀಯ ಭಾಷೆಗಳೆಲ್ಲವೂ ಭಾರತದ ಶಾಸ್ತ್ರೀಯ ಭಾಷೆಯಾದ ಈ ಪ್ರಾಚೀನ ಸಂಸ್ಕೃತದಿಂದಲೇ ಸಂಪುಷ್ಟವಾಗಿ ಬೆಳೆದುಬಂದಿವೆ. ಉತ್ತರ ಭಾರತದ ಭಾಷೆಗಳೆಲ್ಲ ಈ ಸಂಸ್ಕೃತದಿಂದಲೇ ಸೃಷ್ಟಿಯಾಗಿವೆ. ಮೊದಲಿಗೆ ಸಂಸ್ಕೃತದಿಂದ ಪ್ರಾಕೃತ, ಪಾಲಿ, ವೈದರ್ಭಿ, ಗೌಡಿ ಮುಂತಾದ ಪ್ರಾದೇಶಿಕ ಭಾಷೆಗಳಾಗಿ ತದನಂತರ ಅವುಗಳಿಂದ ಇಂದಿನ ಭಾಷೆಗಳಾಗಿವೆ. ಲಿಪಿ, ಧ್ವನಿ, ಪದ ಸಂಪತ್ತು ಹಾಗೂ ವಾಕ್ಯರೂಪಗಳಿಗೆಲ್ಲ ಭಾರತೀಯ ಭಾಷೆಗಳಿಗೆ ಸಂಸ್ಕೃತವೇ ತಾಯಿ ಭಾಷೆಯಾಗಿದೆ. ಮರಾಠಿಯನ್ನು ಮೊದಲುಗೊಂಡು ಬಂಗಾಳಿ, ಒರಿಯ, ಕಾಶ್ಮೀರಿ ಮುಂತಾದ ಉತ್ತರ ಭಾರತದ ಭಾಷೆಗಳೆಲ್ಲ ಸಂಸ್ಕೃತದಿಂದ ಕವಲೊಡೆದ ಭಾಷೆಗಳೇ. ಈ ಭಾಷೆಗಳು ಅಸ್ತಿತ್ವಕ್ಕೆ ಬರುವ ವೇಳೆಗಾಗಲೇ ಸಂಸ್ಕೃತ ಜನಬಳಕೆಯಿಂದ ದೂರವಾಗಿತ್ತು.

ಆದರೆ ದಕ್ಷಿಣ ಭಾರತದ ಭಾಷೆಗಳಾದ ಕನ್ನಡ, ತಮಿಳು, ತೆಲುಗು, ಮಲೆಯಾಳಂ, ತುಳು, ಕೊಡವ, ಮುಂತಾದವುಗಳಿಗೆ 'ದ್ರಾವಿಡ' ಎಂಬ ಅಜ್ಞಾತಭಾಷೆ ಮೂಲವಾಗಿದೆ. ಸುಮಾರು ೪೦೦೦ ವರ್ಷಗಳ ಹಿಂದೆ ಈ ದ್ರಾವಿಡಭಾಷೆಯು ಜನಬಳಕೆಯಲ್ಲಿತ್ತೆಂದೂ ಆ ಮೂಲಜನಾಂಗ ಭಾರತದಾದ್ಯಂತ ಇದ್ದರೂ ಮುಖ್ಯವಾಗಿ ಭಾರತದ ದಕ್ಷಿಣದಲ್ಲಿ ನೆಲೆನಿಂತು ಇಂದಿನ ಭಾಷೆಗಳಾಗಿವೆಯೆಂದೂ ಆ ಮೂಲದ್ರಾವಿಡ ಭಾಷೆಯು ಲಿಪಿಯನ್ನು ರೂಢಿಸಿಕೊಂಡಿರಲಿಲ್ಲವೆಂದೂ ಆದ್ದರಿಂದ ಮೂಲ ದ್ರಾವಿಡಭಾಷೆಯಲ್ಲಿ ಸಂಸ್ಕೃತದಂತೆ ಸಾಹಿತ್ಯ ನಿರ್ಮಾಣವಾಗಿರಲಿಲ್ಲವೆಂದೂ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಕೆಲವರು ಲಿಪಿಯೂ ಇದ್ದು ಸಿಂಧೂಕಣಿವೆಯ ಲಿಪಿಗಳು ದ್ರಾವಿಡವೇ ಆಗಿರಬಹುದೆಂದೂ ಊಹಿಸುತ್ತಾರೆ. ಕನ್ನಡ, ತಮಿಳು, ತೆಲುಗು, ತುಳು, ಕೊಡವ, ಮಲೆಯಾಳಂ, ಬ್ರಾಹುಈ, ಗೊಂಡಿ, ಕುಇ, ಕೊಲಾಮಿ ಮುಂತಾದ ಭಾಷೆಗಳು ಸುಮಾರು ೩,೦೦೦ ವರ್ಷಗಳ ಹಿಂದೆಯೇ ಈ ಮೂಲ ದ್ರಾವಿಡದಿಂದ ಕವಲೊಡೆದು ಪ್ರತ್ಯೇಕ ಭಾಷೆಗಳಾಗಿ ಅಸ್ತಿತ್ವ ಪಡೆದು ಸ್ವತಂತ್ರ ಜನಾಂಗಗಳಾದವು. ಇವುಗಳಲ್ಲಿ ಕನ್ನಡ, ತಮಿಳುಗಳು (ಮತ್ತು ಸಂಸ್ಕೃತ) ೨,೫೦೦ ವರ್ಷಗಳ ಹಿಂದೆಯೇ ಭಾರತದಲ್ಲಿ ಬಳಕೆಗೆ ಬಂದ ಬ್ರಾಹ್ಮೀಲಿಪಿಯ ಮೂಲಕ ಸ್ವತಂತ್ರ ಲಿಪಿಗಳನ್ನು ರೂಢಿಸಿಕೊಂಡವು. ಈ ಮೂರು ಭಾಷೆಗಳೇ ಭಾರತದಲ್ಲಿ ಸ್ವತಂತ್ರ ಲಿಪಿಗಳನ್ನು ರೂಢಿಸಿಕೊಂಡ ಪ್ರಾಚೀನ ಭಾಷೆಗಳು. ಸಂಸ್ಕೃತಕ್ಕೆ ಅದಕ್ಕೂ ಮೊದಲೇ ಒಂದು ಲಿಪಿಯಿದ್ದು, ಅದೂ ಬಳಕೆ ತಪ್ಪಿ ಈ ಬ್ರಾಹ್ಮಿಯಿಂದ ಹೊಸಲಿಪಿ ರೂಢಿಗೆ ಬಂದು, ಅದರಲ್ಲಿ ಹಿಂದಿನ ಲಿಪಿಯಲ್ಲಿದ್ದ ಮತ್ತು ಕಂಠಸ್ಥವಾಗಿದ್ದ ಸಂಸ್ಕೃತ ಸಾಹಿತ್ಯವನ್ನೆಲ್ಲ ದಾಖಲಿಸುತ್ತ ಬರಲಾಯಿತು. ಕನ್ನಡ ತಮಿಳುಗಳು ತಮ್ಮದೇ ಧ್ವನಿ, ಲಿಪಿ, ವ್ಯಾಕರಣ, ಪದಸಂಪತ್ತನ್ನು ಹೊಂದಿದ್ದರೂ ಸಾಂಸ್ಕೃತಿಕವಾಗಿ ಮತ್ತು ಸಾಹಿತ್ಯಕವಾಗಿ ಸಂಸ್ಕೃತದಿಂದ ಪ್ರಭಾವಿತವಾಗಿದ್ದವು. ಸಂಸ್ಕೃತದ ಧರ್ಮ, ಸಾಹಿತ್ಯವನ್ನೆಲ್ಲ ತಮ್ಮ ತಮ್ಮ ಭಾಷೆ–ಲಿಪಿಗಳಲ್ಲಿ ಪುನಾಸೃಷ್ಟಿ ಮಾಡಿಕೊಂಡು ಸಂಪದ್ಭರಿತವಾಗಿ ಬೆಳೆದವಾದರೂ ಸಂಸ್ಕೃತದ ಪಡಿನೆರಳಾಗಲಿಲ್ಲ. ಸ್ವತಂತ್ರವಾಗಿ ಬೆಳೆದು ತಮ್ಮದೇ ಸ್ವಂತಿಕೆಯನ್ನು ಪಡೆದವು. ತೆಲುಗು, ಮಲೆಯಾಳಂ ಭಾಷೆಗಳೂ ಇಷ್ಟೇ ಪ್ರಾಚೀನ ಕಾಲದಿಂದ ಇದ್ದರೂ ಇವುಗಳ ಸಾಹಿತ್ಯಕ್ಕೆ ಇಷ್ಟೊಂದು ಪ್ರಾಚೀನತೆಯಿಲ್ಲ. ಕಾರಣ ಇವುಗಳು ಲಿಪಿಯನ್ನು ರೂಢಿಸಿಕೊಂಡದ್ದು ಸುಮಾರು ೧೦೦೦ ವರ್ಷಗಳಿಂದೀಚೆಗೆ. ತೆಲುಗು ಕನ್ನಡ ಲಿಪಿಯಿಂದಲೂ ಮಲೆಯಾಳಂ ತಮಿಳು ಲಿಪಿಯಿಂದಲೂ ಸ್ವತಂತ್ರ ಲಿಪಿಗಳನ್ನು ರೂಢಿಸಿಕೊಂಡವು. ಉಳಿದ ತುಳು, ಕೊಡವ ಮುಂತಾದ ದ್ರಾವಿಡಭಾಷೆಗಳು ಇಂದು ಭಾರತದಲ್ಲಿ ಬಳಕೆಯಲ್ಲಿದ್ದರೂ ಯಾವುವೂ ಸ್ವತಂತ್ರ ಲಿಪಿಯನ್ನು ರೂಢಿಸಿಕೊಂಡಿಲ್ಲ.

ಕನ್ನಡ ತಮಿಳುಗಳು ಲಿಪಿ ಮತ್ತು ಸಾಹಿತ್ಯ ದಾಖಲೆಗಳ ಮೂಲಕ ೨,೦೦೦ ವರ್ಷಗಳಿಗೂ ಹೆಚ್ಚಿನ ಪ್ರಾಚೀನತೆ ಹೊಂದಿದ್ದರೂ ಇಂದಿಗೂ ಬಳಕೆಯಲ್ಲಿವೆ, ಜೀವಂತವಾಗಿವೆ. ಹೀಗಾಗಿ ಭಾಷಾವಿಜ್ಞಾನದ ದೃಷ್ಟಿಯಲ್ಲಿ ಭಾರತದಲ್ಲಿ ಶಾಸ್ತ್ರೀಯ ಭಾಷೆ ಎನಿಸುವುದು ಬಳಕೆಯಲ್ಲಿಲ್ಲದ ಸಂಸ್ಕೃತ ಮಾತ್ರ.

**ಶಾಸ್ತ್ರೀಯಭಾಷೆಯ ಅಧ್ಯಯನಕ್ಕೆ ಆದ್ಯತೆ:**

ಲಿಪಿ ಇರುವ ಭಾಷೆಗಳಿಗೆ ಮಾತ್ರ ಇತಿಹಾಸ ಸೃಷ್ಟಿಯಾಗುತ್ತದೆ. ಏಕೆಂದರೆ ಆ ಲಿಪಿಗಳಲ್ಲಿ ಆ ಭಾಷೆಯ ಗ್ರಂಥಗಳು, ಶಾಸನಗಳು, ದಾಖಲೆಗಳು ನಿರ್ಮಾಣವಾಗುತ್ತವೆ. ಅವು ಉಳಿದುಬರುತ್ತವೆ. ಹಾಗೆ ಉಳಿದುಬಂದಿರುವ ಅಂತಹ ದಾಖಲೆಗಳನ್ನು ಇಂದು ವಿಶ್ಲೇಷಿಸಿ ಆಯಾ ಭಾಷೆ-ಜನಾಂಗಗಳ ಇತಿಹಾಸವನ್ನು ರಚಿಸುತ್ತೇವೆ. ಹೀಗೆ ರಚಿಸುವ ಇತಿಹಾಸಗಳ ದಾಖಲೆಗಳ ಪ್ರಾಚೀನತೆಯ ಮೇಲೆ ಅವುಗಳ ಸ್ಥಿತಿ-ಗತಿಗಳನ್ನು ಅಧ್ಯಯನ ಮಾಡಲಾಗುತ್ತದೆ. ಸಂಸ್ಕೃತಕ್ಕೆ ಲಿಖಿತ ದಾಖಲೆಗಳು ಮಾತ್ರ ಇದೆ. ಆ ಭಾಷೆ ಧ್ವನಿರೂಪದಲ್ಲಿ, ಆಡುಮಾತಾಗಿ ಇಂದು ಬಳಕೆಯಲ್ಲಿಲ್ಲ. ಆದರೆ ಕನ್ನಡ ತಮಿಳುಗಳು ಲಿಖಿತ ದಾಖಲೆಗಳ ಜೊತೆಗೆ ಇಂದಿಗೂ ಜನಮನದಲ್ಲಿ ಜೀವಂತವಾಗಿ ಉಳಿದು ಬಂದಿವೆ. ಇಂದಿನ ಈ ಭಾಷಾರೂಪಗಳಿಗೂ ದಾಖಲೆಯಲ್ಲಿರುವ ಹಿಂದಿನ ರೂಪಗಳಿಗೂ ಅಜಗಜಾಂತರವಾದ ವ್ಯತ್ಯಾಸಗಳಿವೆ. ಒಂದು ಪ್ರಾಚೀನ ಭಾಷೆ ಇಂದು ಬಳಕೆಯಲ್ಲಿರಲಿ, ಇಲ್ಲದಿರಲಿ ಸಾವಿರಾರು ವರ್ಷಗಳ ಸಾಮಾಜಿಕ ಬೆಳವಣಿಗೆಯಲ್ಲಿ ಹಲವಾರು ಕಾರಣಗಳಿಂದ ಹಲವು ಘಟ್ಟಗಳಲ್ಲಿ ಬದಲಾವಣೆ ಹೊಂದುತ್ತ ಇಂದಿನಭಾಷೆ-ಲಿಪಿಗಿಂತ ಭಿನ್ನವಾಗಿರುತ್ತದೆ. ಅಂದರೆ ಭಾಷೆಯೊಂದು ವಿವಿಧ ಕಾಲಘಟ್ಟದಲ್ಲಿ ಬದಲಾಗುತ್ತ ಹೋಗುತ್ತಿರುತ್ತದೆ. ಈ ಬದಲಾವಣೆಯೇ ಭಾಷೆಗಳ ಬೆಳವಣಿಗೆಯ ಲಕ್ಷಣವಾಗಿರುತ್ತದೆ. ಜೀವಂತವಾಗಿರುವ ಭಾಷೆ, ಅಂದರೆ ಜನಮನದಲ್ಲಿ ಬಳಕೆಯಲ್ಲಿರುವ ಭಾಷೆ ತನ್ನ ಲಿಪಿರೂಪದಲ್ಲಿ ದಾಖಲೆಯಾಗುತ್ತಾ ಬರುತ್ತಿರುತ್ತದೆ. ಬಳಕೆತಪ್ಪಿದ ಭಾಷೆ ಅಲ್ಲಿಯವರೆಗೆ ಮಾತ್ರ (ಅಂದರೆ ಜನರ ಬಳಕೆಯಲ್ಲಿರುವವರೆಗೆ ಮಾತ್ರ) ದಾಖಲೆಗೊಂಡಿರುತ್ತದೆ. ಇಂತಹ ದಾಖಲೆಯ ಸಾಹಿತ್ಯ-ಗ್ರಂಥಗಳನ್ನು ಅದು ಲಭ್ಯವಿರುವ ಸಮಾಜದಲ್ಲಿ ವಿಶೇಷ ಅಧ್ಯಯನಕ್ಕೆ ಒಳಪಡಿಸುವ ಮೂಲಕ ಆ ಭಾಷೆಯನ್ನು ಅಂದರೆ ಅದರಲ್ಲಿರುವ ಸಾಹಿತ್ಯವನ್ನು ಉಳಿಸಿಕೊಂಡು ಬರಲಾಗುತ್ತದೆ. ಸಂಸ್ಕೃತದಲ್ಲೂ ಲಿಪಿಯನ್ನು ಮತ್ತು ಧ್ವನಿಯನ್ನು ಅಭ್ಯಾಸಮಾಡಿಕೊಂಡು ಅದರ ಲಿಖಿತ ಸಾಹಿತ್ಯದ ಶೈಲಿಯ ಮೂಲಕ ವ್ಯಾಕರಣಬದ್ಧವಾಗಿ ಕಲಿತು ಅಂತಹವರಲ್ಲಿ ಮಾತ್ರ ಬಳಕೆಗೊಂಡು ಇಂದಿಗೂ ಸಾಹಿತ್ಯ ಕೃತಿಗಳನ್ನು ರಚಿಸಲಾಗುತ್ತಿದೆ.



ಹೀಗೆ ಬಳಕೆತಪ್ಪಿದ ಪ್ರಾಚೀನ ಸಂಪದ್ಭರಿತ ಸಾಹಿತ್ಯ-ಸಂಸ್ಕೃತಿಯನ್ನು ಹೊಂದಿರುವ ಶಾಸ್ತ್ರೀಯ ಭಾಷೆಗಳ ಅಧ್ಯಯನ-ಸಂಶೋಧನೆ ಮತ್ತು ಅದರ ಸತ್ವವನ್ನು ತನ್ನ ಭಾಷೆಗೆ ತಂದುಕೊಳ್ಳುವ ಮೂಲಕ ಬಳಕೆಯಲ್ಲಿರುವ ಜೀವಂತ ಭಾಷೆಯನ್ನು ಸಂಶೋಧನೆ ಮತ್ತು ಅದರ ಸತ್ವವನ್ನು ತನ್ನ ಭಾಷೆಗೆ ತಂದುಕೊಳ್ಳುವ ಮೂಲಕ ಬಳಕೆಯಲ್ಲಿರುವ ಜೀವಂತ ಭಾಷೆಯನ್ನು ಬೆಳೆಸುವ, ಶಕ್ತಿವಂತವಾಗಿಸುವ ಉದ್ದೇಶದಿಂದ ಇಂತಹ ಶಾಸ್ತ್ರೀಯಭಾಷೆಗಳ ಅಧ್ಯಯನಕ್ಕೆ ಆಯಾ ಪ್ರಾದೇಶಿಕ ಆಡಳಿತ ವ್ಯವಸ್ಥೆಗಳು ಹೆಚ್ಚಿನ ಆಸಕ್ತಿ ವಹಿಸುತ್ತವೆ. ವಿಶೇಷ ಅನುದಾನಗಳನ್ನು ಮೀಸಲಿರಿಸುತ್ತವೆ. ಸಂಶೋಧನಾ ಸಂಸ್ಥೆಗಳನ್ನು ನಡೆಸುತ್ತವೆ. ಭಾರತದಲ್ಲಿ ಕೇಂದ್ರ ಸರ್ಕಾರದಲ್ಲಿ ಸಂಸ್ಕೃತಕ್ಕೆ ಇಂತಹ ವಿಶೇಷ ಅನುದಾನದಡಿ ಪ್ರತಿವರ್ಷ ಕೋಟ್ಯಾಂತರ ರೂಪಾಯಿಗಳನ್ನು ಬಿಡುಗಡೆ ಮಾಡಲಾಗುತ್ತಿದೆ. ಇದಕ್ಕಾಗಿಯೇ ಬಜೆಟ್‌ನಲ್ಲಿ ಪ್ರತ್ಯೇಕ ನಿಧಿಯನ್ನು ರೂಪಿಸಲಾಗಿದೆ. ವಿವಿಧ ರಾಜ್ಯಗಳ ಸರ್ಕಾರಿ ಇಲಾಖೆಗಳು, ವಿಶ್ವವಿದ್ಯಾನಿಲಯಗಳು, ಖಾಸಗಿ ಸಂಶೋಧನ ಸಂಸ್ಥೆಗಳು ಈ ನಿಧಿಯಿಂದ ಅನುದಾನಗಳನ್ನು ಪಡೆದುಕೊಂಡು ಸಂಸ್ಕೃತ ಭಾಷೆ- ಸಾಹಿತ್ಯದ ಅಧ್ಯಯನದ ವಿವಿಧ ಯೋಜನೆಗಳನ್ನು ಕಾರ್ಯಗತ ಮಾಡುತ್ತ ಬಂದಿವೆ, ಬರುತ್ತಿವೆ.

**ಶಾಸ್ತ್ರೀಯಭಾಷೆಯ ತಮಿಳು ರಾಜಕೀಯ, ಹೊಸ ವ್ಯಾಖ್ಯಾನ**

ಪ್ರಪಂಚದಾದ್ಯಂತ ಶಾಸ್ತ್ರೀಯಭಾಷೆ ಎಂದರೆ 'ಇಂದು ಬಳಕೆಯಲ್ಲಿಲ್ಲದ ಪ್ರಾಚೀನ ಸಂಪದ್ಭರಿತ ಭಾಷೆ' ಎಂಬ ಅಭಿಪ್ರಾಯವೇ ಪ್ರಚಲಿತದಲ್ಲಿರುವಾಗ ೨೦೦೪ರಿಂದ ಭಾರತದಲ್ಲಿ ಮಾತ್ರ ಹೊಸ ವ್ಯಾಖ್ಯಾನವೊಂದು ದಾಖಲಾಗಿದೆ. ಅದೆಂದರೆ 'ಬಳಕೆಯಲ್ಲಿರುವ ಜೀವಂತ ಪ್ರಾಚೀನ ಸಂಪದ್ಭರಿತ ಭಾಷೆ' ಎಂದು ರೂಪುಗೊಂಡಿದೆ. ತಮಿಳು ನಾಡಿನ ರಾಜಕೀಯದಿಂದ ಇದು ಸಾಧ್ಯವಾಗಿದೆ. ಕೇಂದ್ರದ ಸಮ್ಮಿಶ್ರ ಸರ್ಕಾರದಲ್ಲಿ ತಮಿಳುನಾಡಿನ ಡಿಎಂಕೆ ಪಕ್ಷವು ಸೇರಿರುವುದರಿಂದ, ಅದು ತನ್ನ ಸಂಸತ್‌ಸದಸ್ಯರ ಸಂಖ್ಯಾಬಲದ ಸಾಮರ್ಥ್ಯದ ಮೇಲೆ ಕೇಂದ್ರದ ಯು.ಪಿ.ಎ. ಸರ್ಕಾರದ ಮೇಲೆ ಪ್ರಭಾವಬೀರಿ 'ತಮಿಳುಭಾಷೆಗೆ ಶಾಸ್ತ್ರೀಯಭಾಷೆಯ ಸ್ಥಾನಮಾನ ನೀಡುವ ಘೋಷಣೆ ಮಾಡಿದಲ್ಲಿ ಮಾತ್ರ ಸರ್ಕಾರಕ್ಕೆ ತನ್ನ ಬೆಂಬಲ ಇರುತ್ತದೆ' ಎಂಬ ಷರತ್ತನ್ನು ಒಡ್ಡಿತ್ತು. ಅದರ ಪರಿಣಾಮದಿಂದ ಡಿ.ಎಂ.ಕೆ ಪಕ್ಷವು ಸರ್ಕಾರ ರಚನೆಯಾದ ತರುಣದಲ್ಲೇ ಒತ್ತಡ ಹೇರಿ ಕೇಂದ್ರ ಸರ್ಕಾರದಿಂದ ತಮಿಳನ್ನು ಶಾಸ್ತ್ರೀಯಭಾಷೆ ಎಂದು ಗೆಜೆಟ್ ಘೋಷಣೆ ಹೊರಡಿಸುವಲ್ಲಿ ಸಫಲವಾಯಿತು.

ಅದುವರೆಗೆ ಈ ಅಂಶದ ಬಗ್ಗೆ ಅಷ್ಟಾಗಿ ಯೋಚಿಸದಿದ್ದ ಭಾರತದ ಇತರ ಪ್ರಾಚೀನ ಭಾಷಾ ಸಮುದಾಯಗಳು ಈ ಅಧಿಕೃತ ಘೋಷಣೆಯ ಸುದ್ದಿ ಪ್ರಕಟವಾದ ಮೇಲೆ ಎಚ್ಚರಗೊಂಡವು. ವಿಶೇಷವಾಗಿ ತಮಿಳಿನಷ್ಟೇ ಸಮಾನ ಪ್ರಾಚೀನತೆಯನ್ನು ಹೊಂದಿರುವ ಕನ್ನಡ, ತೆಲುಗುಗಳು ಜಾಗೃತವಾಗಿ ಇದರ ಸಾಧಕ ಬಾಧಕಗಳನ್ನು ಪರಿಶೀಲಿಸತೊಡಗಿದಾಗ ಇದು ತಮಿಳುನಾಡಿನ ಡಿ.ಎಂ.ಕೆ. ಪಕ್ಷದ ರಾಜಕೀಯವೆಂಬುದು ವೇದ್ಯವಾಯಿತು. ಈ ಬಗ್ಗೆ ಈ ಎರಡೂ ರಾಜ್ಯಗಳು ಗಂಭೀರವಾಗಿ ಯೋಚಿಸತೊಡಗಿದವು. ತಮಿಳುನಾಡಿನವರಿಗೆ ಈ ಶಾಸ್ತ್ರೀಯಭಾಷೆಯ ಹುಳು ಏಕೆ ಹೊಕ್ಕಿತು? ಯಾರಿಗೂ ಹೊಳೆಯದಿದ್ದ ಈ ವಿಚಾರ ತಮಿಳರಿಗೆ ಹೇಗೆ ಹೊಳೆಯಿತು? ಎಂದು ಯೋಚಿಸಿದಾಗ ಮೂರು ಅಂಶಗಳು ಸ್ಪಷ್ಟವಾಗುತ್ತವೆ.

೧. ತಮಿಳರು ಭಾಷೆಯ ಮೂಲಕವೇ ತಮ್ಮ ಅಸ್ತಿತ್ವವನ್ನು ಗುರುತಿಸಿಕೊಳ್ಳುತ್ತಾರೆ. ಇದು ಅಲ್ಲಿಯ ರಾಜಕೀಯ ಪಕ್ಷಗಳ ಅಸ್ತಿತ್ವದ ಪ್ರಶ್ನೆಯೂ ಹೌದು. 'ತಮಿಳುನಾಡಿಗೆ, ತಮಿಳರಿಗೆ ತಮಿಳು ಭಾಷೆಗೆ ನಾವು ಏನು ಮಾಡುತ್ತೇವೆ ಎನ್ನುವುದರ ಮೇಲೆ ನಾವು ಬದುಕುತ್ತೇವೆ' ಎಂಬ ಗುಟ್ಟನ್ನು ಅವು ಚೆನ್ನಾಗಿ ಅರಿತಿವೆ. ಆದ್ದರಿಂದ ತಮಿಳನ್ನು – ತಮಿಳುನಾಡನ್ನು ಸುಭದ್ರವಾಗಿ ಕಟ್ಟಿಬೆಳೆಸುವಲ್ಲಿ ಅಲ್ಲಿಯ ಪಕ್ಷಗಳು ನಾಮುಂದು ತಾಮುಂದು ಎಂದು ಮುಂದಡಿಯಿಡುತ್ತವೆ. 'ಇದು ತಮ್ಮ ಪಕ್ಷದ ಸಾಧನೆ', ಎಂಬುದನ್ನು ತೋರಿಸುವುದಕ್ಕಾಗಿಯೂ ಹೊಸ ಹೊಸ ಅಭಿವೃದ್ಧಿ ಕಾರ್ಯಗಳನ್ನು ಸದಾ ಶೋಧಿಸುತ್ತಿರುತ್ತವೆ. ನೆರೆರಾಜ್ಯ ಮತ್ತು ಕೇಂದ್ರಗಳಿಂದ ನಾಡು-ನುಡಿಗೆ ಸಮಸ್ಯೆಯೊದಗಿದಾಗ ಅವುಗಳನ್ನು ಆಗುಮಾಡಿಸಿಕೊಳ್ಳುವಲ್ಲಿ



ಸರ್ವಪಕ್ಷಗಳೂ ಒಂದು ಧ್ವನಿಯಾಗುತ್ತವೆ. ರಾಜ್ಯದೊಳಗೆ ಎಣ್ಣೆ-ಸೀಗೆಕಾಯಿಗಳಂತೆ ಕಚ್ಚಾಡುತ್ತಿದ್ದರೂ ಒಕ್ಕೊರಲಿನ ಅಭಿಪ್ರಾಯವನ್ನು ರೂಪಿಸಿ ಒತ್ತಡ ಹೇರುತ್ತವೆ. ಅಲ್ಲಿಯ ಮುಖಂಡರು ಭಿನ್ನಾಭಿಪ್ರಾಯ ಮರೆತು ಹಠಹಿಡಿದು ಕೆಲಸ ಮಾಡಿಸಿಕೊಳ್ಳುತ್ತಾರೆ. ಆ ಛಲ, ದೇಶೀಯನಿಷ್ಠೆ. ಭಾಷಾಭಿಮಾನ ತಮಿಳರಿಗಿರುವುದರಿಂದಲೇ ಡಿ.ಎಂ.ಕೆ. ಪಕ್ಷ ತನ್ನ ಸಾಧನೆಗೆ ಇನ್ನೊಂದು ಗರಿಯನ್ನು ಮೂಡಿಸಿಕೊಳ್ಳಲು ಈ ಶಾಸ್ತ್ರೀಯಭಾಷೆಯ ಸ್ಥಾನವನ್ನು ರಾಜಕೀಯವಾಗಿ ಗಿಟ್ಟಿಸಿಕೊಂಡಿತು.

೨. ತಮಿಳರ ಭಾಷಾಭಿಮಾನ ಪ್ರಶ್ನಾತೀತ. ಭಾಷೆಯೇ ಅವರ ಶಕ್ತಿಯ ಪ್ರಶ್ನೆಯಾಗಿರುವುದರಿಂದ ಭಾಷೆಯ ಮೂಲಕವೇ ತಮ್ಮನ್ನು ಗುರುತಿಸಿಕೊಳ್ಳುವುದರಿಂದ ಭಾಷೆಗಾಗಿ ಏನನ್ನು ಬೇಕಾದರೂ ಮಾಡಲು ಅವರು ಸಿದ್ಧರಿರುತ್ತಾರೆ. ತಮ್ಮ ಭಾಷೆಯೇ ಭಾರತದಲ್ಲಿ ಸಂಸ್ಕೃತಕ್ಕಿಂತ ಪ್ರಾಚೀನವಾದದ್ದು, ಎಲ್ಲ ದ್ರಾವಿಡಭಾಷೆಗಳಿಗೆ ಮೂಲವಾದದ್ದು ಎಂದು ಪದೇ ಪದೇ ಹೇಳುತ್ತ ಅದಕ್ಕೆ ದಾಖಲೆಗಳನ್ನು ರೂಪಿಸುವ ಮೂಲಕ ಸುಳ್ಳನ್ನೇ ಸತ್ಯವಾಗಿಸುತ್ತಾರೆ. ಆ ಅರ್ಧಸತ್ಯವನ್ನೇ ಲೋಕ ಒಪ್ಪುವಂತೆ ಮಾಡುತ್ತಾರೆ. ಹಾಗೆ ಮಾಡಿಯೇ ಈಗ ಈ ಶಾಸ್ತ್ರೀಯಭಾಷೆಯ ಪಟ್ಟವನ್ನು ಸಲೀಸಾಗಿ ಪಡೆದುಕೊಂಡಿರುವುದು. ಇದರಿಂದ ಪ್ರಪಂಚಕ್ಕೆ ತಮಿಳು ಅತ್ಯಂತ ಪ್ರಾಚೀನಭಾಷೆಯೆಂದು ಸಾರಿದಂತಾಯಿತು. ಭಾರತದಲ್ಲಿ ಸಂಸ್ಕೃತಕ್ಕಿಂತ ತಮಿಳೇ ಹೆಚ್ಚು ಪ್ರಾಚೀನತೆ ಹೊಂದಿರುವ ಭಾಷೆ ಎಂಬುದಕ್ಕೆ ದಾಖಲೆಯನ್ನೂ ರೂಪಿಸಿದಂತಾಯಿತು (ರಾಜಕೀಯ ಪ್ರಾಬಲ್ಯದಿಂದ ಕೇಂದ್ರ ಸರ್ಕಾರದ ಮೇಲೆ ಬ್ಲಾಕ್‌ಮೇಲ್ ತಂತ್ರ ಬಳಸಿ, ಸಂಸ್ಕೃತ ಶಾಸ್ತ್ರೀಯ ಭಾಷಾ ಸೌಲಭ್ಯದಲ್ಲಿದ್ದರೂ ಅಧಿಕೃತ ಘೋಷಣೆ ಮಾಡಿರಲಿಲ್ಲವಾದ್ದರಿಂದ ತಮಿಳನ್ನು ಶಾಸ್ತ್ರೀಯಭಾಷೆಯನ್ನಾಗಿ ಘೋಷಿಸಿದ ಒಂದು ವರ್ಷದ ತರುವಾಯ ಸಂಸ್ಕೃತವನ್ನು 'ಶಾಸ್ತ್ರೀಯಭಾಷೆ'ಯನ್ನಾಗಿ ಘೋಷಿಸಿದಂತೆ ಗೆಜೆಟ್ ಪ್ರಕಟಣೆ ಮಾಡಿಸಿದೆ). ತಮಿಳನ್ನು ಅಧಿಕೃತವಾಗಿ ಸರ್ಕಾರದ ಮತ್ತು ಸರ್ಕಾರಿ ಸಂಸ್ಥೆಗಳ ಮೂಲಕವೇ ದೇಶ-ವಿದೇಶಗಳಲ್ಲಿ ಅಧ್ಯಯನಕ್ಕೆ ತೊಡಗಿಸುವ ಅವಕಾಶವನ್ನು ಸೃಷ್ಟಿಸಿಕೊಂಡಂತಾಯಿತು. ತಮಿಳುಭಾಷಾ ಪಂಡಿತರು, ವಿದ್ವಾಂಸರು, ಕವಿಗಳಿಗೆ ರಾಷ್ಟ್ರೀಯ ಅಂತರರಾಷ್ಟ್ರೀಯ ಮಟ್ಟದಲ್ಲಿ ಪ್ರಶಸ್ತಿ ಗೌರವ ಮನ್ನಣೆ ದೊರಕಿಸಿಕೊಂಡತಾಯಿತು. ತಮಿಳನ್ನು ಅಧಿಕೃತವಾಗಿಯೇ ಆಧುನಿಕ ಸಂಪರ್ಕ ಸಾಧನಗಳಿಗೆ (ಕಂಪ್ಯೂಟರ್, ಇಂಟರ್‌ನೆಟ್, ಇ ಮೇಲ್) ಅಳವಡಿಸಿಕೊಂಡಂತಾಯಿತು. ಈ ಎಲ್ಲ ಅನುಕೂಲಗಳನ್ನು ಶಾಸ್ತ್ರೀಯಭಾಷೆಯಡಿ ಕೇಂದ್ರ ಸರ್ಕಾರದ ಮೂಲಕವೇ ಮಾಡಿಸಿಕೊಳ್ಳುವ ರಾಜಮನ್ನಣೆಯನ್ನು ದೊರಕಿಸಿಕೊಳ್ಳುವುದೇ ತಮಿಳಿನ ಈ ಶಾಸ್ತ್ರೀಯ ಭಾಷೆಯ ರಾಜಕೀಯದ ತಂತ್ರವಾಗಿದೆ.

೩. ಎಲ್ಲಕ್ಕಿಂತ ಮುಖ್ಯವಾಗಿ ಕೇಂದ್ರ ಸರ್ಕಾರದಿಂದ ಈ ಹೊಸ ಬಾಬತ್ತಿನಲ್ಲಿ ಹೆಚ್ಚಿನ ಪಾಲಿನ ಅನುದಾನವನ್ನು ತಮಿಳುನಾಡು ಸರ್ಕಾರ ಮಾತ್ರ ಪಡೆಯುವ ಹುನ್ನಾರವಿದೆ ಎಂಬುದೂ ಸುಸ್ಪಷ್ಟವಾಗಿದೆ. ಹೇಗೆಂದರೆ ಸದ್ಯಕ್ಕೆ ಶಾಸ್ತ್ರೀಯ ಭಾಷೆ ಎಂದರೆ ಭಾರತದಲ್ಲಿ ತಮಿಳು ಮತ್ತು ಸಂಸ್ಕೃತಗಳು ಮಾತ್ರ. ಶಾಸ್ತ್ರೀಯಭಾಷೆಯ ಅಭಿವೃದ್ಧಿಗೆ ವಿವಿಧ ಯೋಜನೆಗಳಡಿ ಕೇಂದ್ರ ಬಡ್ಜೆಟ್‌ನಲ್ಲಿ ಮೀಸಲಿಡುವ ಹತ್ತಾರು ಕೋಟಿರೂ.ಗಳಲ್ಲಿ ಇವುಗಳಿಗೆ ಸಮಪಾಲು, ಒಂದುಪಾಲು ಪೂರ್ತಿ ತಮಿಳುಭಾಷೆಗೆ ಅರ್ಥಾತ್ ತಮಿಳುನಾಡಿಗೆ ವರ್ಗಾವಣೆಯಾದರೆ ಇನ್ನೊಂದು ಪಾಲಿನಲ್ಲಿ ಭಾರತದಾದ್ಯಂತ ಸಂಸ್ಕೃತ ಸಂಸ್ಥೆಗಳಿಗೆ ವಿತರಣೆಯಾಗುತ್ತದೆ. ಈ ಪಾಲು ಕಡಿಮೆಯಾಗದಿರಲೆಂದೇ ಬೇರೆ ಯಾವಭಾಷೆಗೂ ಇನ್ನೂ ಕೆಲವು ವರ್ಷ (ಕೊನೆಯಪಕ್ಷ ಕೇಂದ್ರ ಸರ್ಕಾರದಲ್ಲಿ ತನ್ನ ಪಾಲುದಾರ ಆಡಳಿತವಿರುವವರೆಗೆ), ಈ ಸೌಲಭ್ಯವನ್ನು ವಿಸ್ತರಿಸದಂತೆ ನೋಡಿಕೊಳ್ಳುವುದೂ ಇದರಲ್ಲಿ ಡಿ.ಎಂ.ಕೆ.ಯ ತಂತ್ರವಾಗಿರುವ ಸಾಧ್ಯತೆಯಿದೆ. ಅದಕ್ಕಾಗಿಯೇ ಕನ್ನಡಕ್ಕೆ ಈ ಸ್ಥಾನ ನೀಡುವುದನ್ನು ತಡೆಹಿಡಿಯಲಾಗುತ್ತಿದೆ ಎಂಬ ಗುಮಾನಿಯೂ ಕೇಳಿಬರುತ್ತಿದೆ. ಕೇಂದ್ರ ಸರ್ಕಾರ ಪ್ರಸಕ್ತ ವರ್ಷದಲ್ಲಿ ಈ ಬಾಬತ್ತಿಗಾಗಿ ೩೦ ಕೋಟಿ ಮೀಸಲಿರಿಸಿದೆ. ಇದರಲ್ಲಿ ಹದಿನೈದುಕೋಟಿ ಸಾರಾಸಗಟಾಗಿ ತಮಿಳುನಾಡಿಗೆ!



**ಶಾಸ್ತ್ರೀಯಭಾಷೆಯ ಹೊಸ ಸಮಸ್ಯೆ**

ಈ ಬಗೆಯ ರಾಜಕೀಯವನ್ನು ಮಾಡುವ ಮೂಲಕ ತಮಿಳಿಗೆ ಹೆಚ್ಚಿನ ಮನ್ನಣೆ, ಕೀರ್ತಿ ಮತ್ತು ಅನುದಾನ ಪಡೆಯುವುದಕ್ಕಾಗಿ ತಮಿಳುನಾಡು ಕೇಂದ್ರ ಸರ್ಕಾರದಿಂದ ಭಾರತದಲ್ಲಿ ಶಾಸ್ತ್ರೀಯ ಭಾಷೆಗೆ ಹೊಸ ವ್ಯಾಖ್ಯಾನವನ್ನೇ ರೂಪಿಸಿದೆ. ತಮಿಳನ್ನು ಶಾಸ್ತ್ರೀಯಭಾಷೆಯನ್ನಾಗಿ ಘೋಷಿಸುವ ಮೂಲಕ ಶಾಸ್ತ್ರೀಯ ಭಾಷೆ ಎಂಬುದರ ಅರ್ಥವನ್ನೇ ಬದಲಾಯಿಸಿದಂತಾಗಿದೆ. ಇಲ್ಲಿಯವರೆಗೆ ಶಾಸ್ತ್ರೀಯ ಭಾಷೆ ಎಂದರೆ, ಇಂದು ಬಳಕೆಯಲ್ಲಿಲ್ಲದ ಪ್ರಾಚೀನ ಸಾಹಿತ್ಯವಿರುವ ಸಮೃದ್ಧ ಭಾಷೆ ಎಂದಿದ್ದುದು, ಭಾರತದಲ್ಲಿ, ಇನ್ನು ಮುಂದೆ, ಇಂದಿಗೂ ಬಳಕೆಯಲ್ಲಿರುವ ಪ್ರಾಚೀನತೆಯನ್ನು ಹೊಂದಿರುವ ಸಮೃದ್ಧ ಭಾಷೆ' ಎಂಬುದಾಗಿ ಬದಲಾವಣೆ ಹೊಂದಿದಂತಾಗಿದೆ. ಅಂದರೆ 'ಜೀವಂತ ಶಾಸ್ತ್ರೀಯಭಾಷೆ (Living Classical Language) ಈ ಹೊಸ ವ್ಯಾಖ್ಯಾನದ ಕಾರಣದಿಂದ ಭಾರತದಲ್ಲಿ ಇನ್ನೊಂದು ಭಾಷಾಸಮಸ್ಯೆ ನಿರ್ಮಾಣವಾಗಿದೆ. ಈಗಾಗಲೇ ಇರುವ ಗಡಿ ಸಮಸ್ಯೆ, ರಾಜ್ಯಭಾಷಾ ಸಮಸ್ಯೆ, ಸಂವಿಧಾನದಲ್ಲಿ ತಮ್ಮಭಾಷೆಯನ್ನೂ ಸೇರಿಸಬೇಕೆಂಬ ಒತ್ತಡದ ಸಮಸ್ಯೆ, ಆಡಳಿತ ಭಾಷಾಸಮಸ್ಯೆ, ಉದ್ಯೋಗ ಸಮಸ್ಯೆ, ವಸತಿಸಮಸ್ಯೆ, ಶಿಕ್ಷಣದಲ್ಲಿ ಭಾಷಾ ಕಲಿಕೆಯ ಸಮಸ್ಯೆ, ವಲಸೆ ಸಮಸ್ಯೆ ಇತ್ಯಾದಿ ಭಾಷೆಯ ಕಾರಣದಿಂದಲೇ ನಿರ್ಮಾಣವಾಗಿರುವ ಹತ್ತು ಹಲವು ಸಮಸ್ಯೆಗಳ ಜೊತೆಗೆ ತಮಿಳುನಾಡಿನ ರಾಜಕೀಯದಿಂದ ಇಂದು ಶಾಸ್ತ್ರೀಯಭಾಷೆಯ ಸಮಸ್ಯೆಯೂ ಸೇರಿಕೊಂಡಂತಾಗಿದೆ. ರಾಜ್ಯಗಳು ಇದನ್ನು ಪಡೆಯುವುದಕ್ಕಾಗಿಯೂ ಕೇಂದ್ರದ ಮೇಲೆ ಒತ್ತಡ ಹೇರುತ್ತವೆ.

**ಕನ್ನಡ – ತೆಲುಗುಗಳ ಒತ್ತಾಯ**

ತಮಿಳಿನಷ್ಟೇ ಪ್ರಾಚೀನತೆ ಇರುವ ಕನ್ನಡ ತೆಲುಗುಗಳು ಸರ್ಕಾರದ ಮೇಲೆ ಒತ್ತಡಹೇರಿ ತಮ್ಮ ಭಾಷೆಗಳನ್ನು ಶಾಸ್ತ್ರೀಯ ಭಾಷೆಗಳನ್ನಾಗಿ ಘೋಷಿಸಬೇಕೆಂದು ಕೂಗುಹಾಕುತ್ತಿವೆ. ಆಯಾ ರಾಜ್ಯಸರ್ಕಾರಗಳು ನಿಯೋಗಗಳ ಮೂಲಕ, ಸಾರ್ವಜನಿಕ ಅಭಿಪ್ರಾಯ, ಸಮೂಹಮಾಧ್ಯಮಗಳ ಮೂಲಕ, ಸಮಿತಿ ವರದಿಗಳ ಮೂಲಕ, ಅಂಕಿಅಂಶಗಳನ್ನೂ ಮಾಹಿತಿಗಳನ್ನು ಸಮರ್ಥನೆಗಳನ್ನೂ ಕೇಂದ್ರಸರ್ಕಾರಕ್ಕೆ ತಲುಪಿಸುತ್ತಿವೆ. ಇದರಿಂದ ತಪ್ಪಿಸಿಕೊಳ್ಳಲು ಯು.ಪಿ.ಎ. ತಜ್ಞಸಮಿತಿ ರಚಿಸಿ ಶಾಸ್ತ್ರೀಯಭಾಷೆಯ ಅರ್ಹತೆ ಪಡೆಯಲು ನಿಯಮಗಳನ್ನು ರೂಪಿಸಿದೆ. ತಮಿಳಿಗೆ ಇಲ್ಲದ ಈ ನಿಬಂಧನೆಗಳನ್ನು ಉಳಿದ ಭಾಷೆಗಳಿಗೆ ಹೇರಿದೆ. ಅವುಗಳೆಂದರೆ

೧. ಕನಿಷ್ಠ ಒಂದು ಸಾವಿರ ವರ್ಷದಷ್ಟು ಪ್ರಾಚೀನ ಇತಿಹಾಸ ಇರಬೇಕು.

೨. ಸ್ವತಂತ್ರ ಸಾಹಿತ್ಯ ಪರಂಪರೆಯು ನಿರ್ಮಾಣವಾಗಿರಬೇಕು.

೩. ಸಾಹಿತ್ಯ ಕೃತಿಗಳು ತಮ್ಮದೇ ಆದ ಸ್ವಂತ ಕಥಾವಸ್ತು-ತಂತ್ರಗಳನ್ನು ಹೊಂದಿರಬೇಕು. ಅನುಕರಣೆ-ಅನುವಾದಗಳಾಗಿರಬಾರದು.

೪. ಪ್ರಾಚೀನ ಭಾಷೆಗೂ ಈಗಿನ ಭಾಷೆಗೂ ಸ್ಪಷ್ಟವ್ಯತ್ಯಾಸಗಳಿರಬೇಕು.

ಎಂಬ ನಾಲ್ಕು ಸಾಮಾನ್ಯ ನಿಯಮ ರೂಪಿಸಿದ ಮೇಲೂ ಕನ್ನಡ ತೆಲುಗುಗಳು ಅದಕ್ಕೆ ಅನ್ವಯವಾಗುವುದನ್ನು ಗಮನಿಸಿ, ಅದನ್ನು ತಡೆಯಲು ೧೦೦೦ ವರ್ಷದ ಪ್ರಾಚೀನತೆಯನ್ನು ಇದ್ದಕ್ಕಿದ್ದಂತೆ ಕೇಂದ್ರ ಸರ್ಕಾರ ೧೫೦೦ ವರ್ಷಗಳಿಗೆ ವಿಸ್ತರಿಸಿತು. ಈ ಹಠಾತ್ ಬದಲಾವಣೆಯನ್ನು ತೀವ್ರವಾಗಿ ವಿರೋಧಿಸಲಾಯಿತು. ಆಂಧ್ರ ಸರ್ಕಾರ ಕೋರ್ಟ್‌ನಲ್ಲೂ ಪ್ರಶ್ನಿಸುವ ಹೆಜ್ಜೆ ಇಟ್ಟಿತು. 'ಇದು ಕೇಂದ್ರ ಸರ್ಕಾರದ ಮಲತಾಯಿಧೋರಣೆ, ಎಂದು ಪ್ರಬಲವಾಗಿ ಆಂಧ್ರ – ಕರ್ನಾಟಕಗಳು ಟೀಕಿಸಿದವು. ಬದಲಾವಣೆಯಾದ ನಿಯಮಕ್ಕೂ ಕನ್ನಡ ಹೊಂದಾಣಿಕೆಯಾಗುತ್ತಿದ್ದು, ಎಲ್ಲ ಅಗತ್ಯ ದಾಖಲೆಗಳನ್ನು ಸಲ್ಲಿಸಿದ್ದರೂ ಕೇಂದ್ರ ಸರ್ಕಾರ ಸಮಿತಿಯ ಸಭೆಯನ್ನೇ ಕರೆಯದೆ ದಿನದೂಡುತ್ತಿದೆ. ಕೇಂದ್ರದ ಮೇಲೆ ಒತ್ತಡ ಹೇರುವಂಥ ರಾಜಕೀಯ ಇಚ್ಛಾಶಕ್ತಿಯಿಲ್ಲದೆ ಕರ್ನಾಟಕದ ಜನತೆ ಕಾಯಬೇಕಾಗಿದೆ.



### ಕನ್ನಡಕ್ಕೆ ಶಾಸ್ತ್ರೀಯಭಾಷೆಯ ಸ್ಥಾನದ ಅರ್ಹತೆ

ತಮಿಳು ಯಾವ ಕಾರಣದಿಂದ 'ಶಾಸ್ತ್ರೀಯಭಾಷೆ' ಎಂದು ಕರೆಸಿಕೊಂಡಿದೆಯೇ ಅದೇ ಕಾರಣದಿಂದ ಕನ್ನಡವೂ ಶಾಸ್ತ್ರೀಯಭಾಷೆಯಾಗಿ ಘೋಷಣೆಯಾಗುವುದು ಅತ್ಯಗತ್ಯ. ಏಕೆಂದರೆ ತಮಿಳಿಗಿರುವಷ್ಟೇ ಪ್ರಾಚೀನತೆ, ಇತಿಹಾಸ, ಮಹತ್ವ ಕನ್ನಡಕ್ಕೂ ಇದೆ. ಇಂದು ಬಳಕೆಯಲ್ಲಿರುವ ದ್ರಾವಿಡ ಭಾಷೆಗಳೆಲ್ಲ ಸಮಾನ ಪ್ರಾಚೀನತೆ ಹೊಂದಿರುವ ಭಾಷೆಗಳೇ ಆದರೂ ಲಿಖಿತ ದಾಖಲೆಗಳಲ್ಲಿ ಹೆಚ್ಚು ಪ್ರಾಚೀನತೆ ಹೊಂದಿರುವ ಭಾಷೆಗಳೆಂದರೆ ಕನ್ನಡ ತಮಿಳುಗಳು ಮಾತ್ರ. ಭಾರತದಲ್ಲಿ ಬ್ರಾಹ್ಮಿಯಿಂದ ಸ್ವತಂತ್ರ ಲಿಪಿಗಳನ್ನು ರೂಢಿಸಿಕೊಂಡು ಮೂರುಭಾಷೆಗಳಲ್ಲಿ ಕನ್ನಡವೂ ಒಂದು. ಉಳಿದೆರಡು ಭಾಷೆಗಳಿಗೆ ಶಾಸ್ತ್ರೀಯ ಸ್ಥಾನಮಾನ ದೊರಕಿರುವಾಗ ಇನ್ನೊಂದು ಅಷ್ಟೇ ಪ್ರಾಚೀನ ಇತಿಹಾಸ ಇರುವ ಭಾಷೆಯಾದ ಕನ್ನಡಕ್ಕೂ ಆ ಸ್ಥಾನ ಲಭಿಸುವುದು ನ್ಯಾಯೋಚಿತವೂ ಹೌದು, ಹಕ್ಕೂ ಹೌದು.

ಕ್ರಿ.ಶ.ದ ಆರಂಭದಿಂದಲೇ ಅಂದರೆ ೨೦೦೦ ವರ್ಷಗಳ ಹಿಂದೆಯೇ ಕನ್ನಡನಾಡು ಸ್ವತಂತ್ರ ಅಸ್ತಿತ್ವವನ್ನು ಪಡೆದಿದ್ದ 'ಪ್ರತ್ಯೇಕ ದೇಶ'ವಾಗಿತ್ತು. ಅದಕ್ಕೂ ಮುಂಚಿನಿಂದಲೇ ಕನ್ನಡಿಗರ, ಕರ್ನಾಟಕದ ಸ್ಪಷ್ಟ ಉಲ್ಲೇಖಗಳು ಸಾಕಷ್ಟು ಲಭಿಸುತ್ತವೆ. ಕ್ರಿ.ಪೂ. ೧ನೇ ಶತಮಾನದಿಂದಲೇ ಕನ್ನಡ ನಾಡು ಮತ್ತು ಕನ್ನಡಭಾಷೆಯ ಪದ, ವಾಕ್ಯಗಳು, ಶಾಸನಗಳಲ್ಲಿ ಮತ್ತು ವಿವಿಧ ಗ್ರಂಥಗಳಲ್ಲಿ ಲಭಿಸುತ್ತವೆ. ಕನ್ನಡ ಲಿಪಿ-ಭಾಷೆಯ ಪ್ರಥಮ ಲಭ್ಯ ಹಲ್ಮಿಡಿ ಶಾಸನ ಕ್ರಿ.ಶ. ೪೨೦ರ ಕಾಲದಲ್ಲಿದ್ದರೂ ಅದಕ್ಕೂ ಮುಂಚೆ ಕನ್ನಡ ಸ್ವತಂತ್ರ ಕೃತಿ ಶ್ರೀವಿಜಯನ ಕವಿರಾಜಮಾರ್ಗ (ಕ್ರಿ.ಶ. ೮೫೦) ೯ನೇ ಶತಮಾನದಲ್ಲಿದ್ದರೂ ಕ್ರಿ.ಶ. ೪-೫ನೇ ಶತಮಾನದಿಂದಲೂ ಸ್ವತಂತ್ರ ಸಾಹಿತ್ಯ ಪರಂಪರೆಯೊಂದು ಇದ್ದುದರ ಬಗ್ಗೆ ಅದರಲ್ಲೇ ಸ್ಪಷ್ಟದಾಖಲೆಗಳಿವೆ. ೯ನೇ ಶತಮಾನಕ್ಕೆ ಮುಂಚೆಯೇ ಕನ್ನಡಭಾಷೆಯ ಒಂದು ಸ್ಥಿತಿ (ಪೂರ್ವದ ಹಳಗನ್ನಡ) ಆಗಿಹೋಗಿರುವ ಬಗ್ಗೆ ಮತ್ತು ಕ್ರಿ.ಶ. ೫ನೇ ಶತಮಾನಕ್ಕಿಂತ ಮುಂಚಿನ ಕನ್ನಡವನ್ನು 'ಮೂಲಕನ್ನಡ' ಎಂಬ ಇನ್ನೊಂದು ಸ್ಥಿತಿಯಲ್ಲಿದ್ದುದನ್ನು ಭಾಷಾವಿಜ್ಞಾನಿಗಳು ಆಧಾರ ಸಮೇತ ಸಂಶೋಧನೆಮಾಡಿ ಗ್ರಂಥಗಳನ್ನು ರಚಿಸಿದ್ದಾರೆ.

ಸರಿಸುಮಾರು ೧೫೦೦ ವರ್ಷಗಳ ಸ್ವತಂತ್ರ ಸಾಹಿತ್ಯ ಪರಂಪರೆ ಕನ್ನಡಕ್ಕಿದೆ. ಪೂರ್ವದ ಹಳಗನ್ನಡ ಕಾಲದಲ್ಲಿ ಸ್ವತಂತ್ರ ಗದ್ಯಕಥಾ ಪರಂಪರೆಯಿದ್ದುದಕ್ಕೆ 'ವಡ್ಡಾರಾಧನೆ' ಸಾಕ್ಷಿಯಾದರೆ ಚಿತ್ತಾಣ-ಬೆದಂಡೆಗಳಂತಹ ದೇಸೀ ಕಾವ್ಯ ಪರಂಪರೆಗಳಿದ್ದುದನ್ನು 'ಕವಿರಾಜಮಾರ್ಗ' ದಾಖಲಿಸುತ್ತದೆ. ಕವಿರಾಜಮಾರ್ಗವು ಪೂರ್ವದ ಹಳಗನ್ನಡ ಸ್ಥಿತಿಯಿಂದ ಹಳಗನ್ನಡವಾಗಿ ಬದಲಾಗುತ್ತಿದ್ದ ಸಂಕ್ರಮಣ ಕಾಲದ ಕೃತಿ ಈ ಭಾಷಾ ಬದಲಾವಣೆಯನ್ನು ಮತ್ತು ಆವರೆಗಿನ ಸಾಹಿತ್ಯದ ಸ್ವರೂಪವನ್ನು 'ಶಾಸ್ತ್ರ'ವನ್ನಾಗಿ ನೋಡಿರುವ ಪ್ರಥಮ ಕೃತಿಯಾಗಿರುವ ಈ

ಕವಿರಾಜಮಾರ್ಗವನ್ನು ಆವರೆಗೆ ಬಂದಿರುವ ಸು. ೫೦ ಕ್ಕೂ ಹೆಚ್ಚು ಕನ್ನಡ ಕೃತಿಗಳ ಆಧಾರದಿಂದ ರಚಿಸಲಾಗಿದೆ. ಆ ಎಲ್ಲ ಕೃತಿಗಳ ಪದ್ಯಭಾಗಗಳು ಈ ಕೃತಿಯಲ್ಲಿ ದಾಖಲಾಗಿವೆ. ಕನ್ನಡ ಭಾಷೆಯ ಉತ್ತರ ಮತ್ತು ದಕ್ಷಿಣ ಪ್ರಭೇದಗಳನ್ನು ಆ ಕಾಲಕ್ಕೇ ಗುರುತಿಸಿ ಭೌಗೋಳಿಕ ಸ್ವರೂಪವನ್ನೂ ಭಾಷೆಯ ಸ್ವತಂತ್ರ ಕೃತಿ ರಚನಾ ಸ್ವರೂಪವನ್ನೂ ದಾಖಲಿಸಿರುವ ಪ್ರಪ್ರಥಮ ಭಾಷಾವೈಜ್ಞಾನಿಕ, ವರ್ಣನಾತ್ಮಕ, ಅಲಂಕಾರ ಶಾಸ್ತ್ರೀಯ ಕೃತಿಯಾಗಿ ಇದು ಮುಖ್ಯವಾಗಿದೆ. ಚಂಪು, ವಚನ, ರಗಳೆ, ಷಟ್ಪದಿ, ಕೀರ್ತನೆ, ಸಾಂಗತ್ಯ ಮುಂತಾದ ಸಾಹಿತ್ಯ ವಿಭಾಗಗಳು ೧೦ನೇ ಶತಮಾನದಿಂದ ೧೮ನೇ ಶತಮಾನದ ವರೆಗೆ ಕಾಲ ಕಾಲಕ್ಕೆ ಕಾಣಿಸಿಕೊಂಡು ಕನ್ನಡಕ್ಕೆ ಸ್ವತಂತ್ರ ಸಾಹಿತ್ಯ ಪರಂಪರೆಯನ್ನು ತಂದುಕೊಟ್ಟಿವೆ.

ಈ ಎಲ್ಲ ಸಾಹಿತ್ಯ ಪ್ರಕಾರಗಳಲ್ಲಿ ೧೦೦೦ಕ್ಕೂ ಹೆಚ್ಚು ಗ್ರಂಥಗಳು ರಚನೆಯಾಗಿದ್ದು ಯಾವುವೂ ಇನ್ನೊಂದು ಭಾಷೆಯ – ಸಂಸ್ಕೃತದ – ನೇರ ಅನುವಾದ ಅಥವಾ ಅನುಕರಣೆಯಾಗಿರದೆ ಸ್ವತಂತ್ರ ಪುನಃಸೃಷ್ಟಿಯ ಕೃತಿಗಳಾಗಿವೆ. ವಚನ, ಕೀರ್ತನೆಗಳಂತೂ ಭಾರತೀಯ ಸಾಹಿತ್ಯ ಸಂದರ್ಭದಲ್ಲೇ ಏಕೆ, ವಿಶ್ವದಲ್ಲೇ ವಿನೂತನ ಪ್ರಗತಿಪರ ಸಾಹಿತ್ಯ ಪ್ರಕಾರಗಳಾಗಿವೆ. ಇವು ಕೇವಲ ಸಾಹಿತ್ಯ ಮಾತ್ರವಾಗಿರದೆ ಆಯಾಕಾಲದ ಸಾಮಾಜಿಕ ಜಾಗೃತಿಯ ಚಳವಳಿಯ ಭಾಗಗಳಾಗಿ ಬಂದವಾಗಿವೆ. ಇಂದಿನ ಪ್ರಸಿದ್ಧ 'ದಕ್ಷಿಣಾದಿ ಸಂಗೀತ'ವು 'ಕರ್ನಾಟಕ ಸಂಗೀತ' ಎಂಬ ಹೆಸರನ್ನು ಪಡೆದು ಬೆಳೆದದ್ದು ೧೬ನೇ ಶತಮಾನದ ಕನ್ನಡ ಕೀರ್ತನ ಸಾಹಿತ್ಯದಿಂದಲೇ ಆತದೆ.

ಸಂಸ್ಕೃತ ಭಾಷೆ ಮತ್ತು ಸಾಹಿತ್ಯದ ಪರಂಪರೆ ದಕ್ಷಿಣ ಭಾರತದಲ್ಲಿ ಉಳಿದು ಬಂದಿರುವುದೇ ಕನ್ನಡದ ಮೂಲಕ ಎಂಬುದು ವಿಶೇಷ ಸಂಗತಿಯಾಗಿದೆ. ಪ್ರಸಿದ್ಧ ಪಂಚತಂತ್ರದ ವಸುಭಾಗಭಟ್ಟ ಪರಂಪರೆ ಉಳಿದಿರುವುದು ಕನ್ನಡದ 'ಪಂಚತಂತ್ರ' ಕೃತಿಯ ಮೂಲಕ. ಪ್ರಖ್ಯಾತ ಕೌಟಿಲ್ಯನ ಅರ್ಥಶಾಸ್ತ್ರ ದೊರಕಿರುವುದು ಕರ್ನಾಟಕದ ಹಸ್ತಪ್ರತಿಯಿಂದ. ಸಂಸ್ಕೃತ ಭಾಷೆಗೆ 'ನಂದಿನಾಗರಿ' ಲಿಪಿಯನ್ನು ರೂಢಿಸಿ ಬಳಕೆಗೆ ತಂದು, ಕ್ರಿ.ಶ.ದ ಆರಂಭಕಾಲದಲ್ಲೇ ಬ್ರಾಹ್ಮಿಲಿಪಿಯನ್ನು ಸಂಸ್ಕೃತ ಭಾಷೆಗೆ ಬಳಸಿ ಅದನ್ನು ಸಂಸ್ಕೃತ ಲಿಪಿಯನ್ನಾಗಿ ರೂಢಿಸಿದ ನಾಡು ಕರ್ನಾಟಕ. ಸಂಸ್ಕೃತ ಭಾಷೆ ಸಾಹಿತ್ಯದ ಪ್ರಭಾವದೊಳಗೆ ಕನ್ನಡ ಮುಳುಗಿಹೋಗಿದ್ದರೂ ತನ್ನ ಸ್ವಂತಿಕೆಯನ್ನು ಸಾಹಿತ್ಯ, ವ್ಯಾಕರಣ, ಅಲಂಕಾರ, ಛಂದಸ್ಸು ಭಾಷೆಗಳಲ್ಲಿ, ಉಳಿಸಿಕೊಂಡು ಬರುವ ಮೂಲಕ ಕನ್ನಡ ಪ್ರತ್ಯೇಕ ಅಸ್ತಿತ್ವವನ್ನು ಬೆಳೆಸಿಕೊಂಡಿದೆ. ಭಾರತದಲ್ಲಿ ಇಡೀ ಜೈನಸಾಹಿತ್ಯ ಪರಂಪರೆಗೆ ಕನ್ನಡವೇ ಕರ್ನಾಟಕವೇ ಮೂಲವಾಗಿದೆ.

ಆಧುನಿಕ ಕನ್ನಡಕ್ಕೂ ಶಾಸ್ತ್ರೀಯ ಕನ್ನಡಕ್ಕೂ ಸ್ಪಷ್ಟ ವ್ಯಾತ್ಯಾಸಗಳಿದ್ದು ಅಲ್ಲಿಂದ ಇಲ್ಲಿವರೆಗೆ ಹಂತ ಹಂತಗಳಲ್ಲಿ ಭಾಷೆ ಬದಲಾವಣೆ ಪಡೆದಿದೆ.

೧. ಮೂಲಕನ್ನಡ – ಕ್ರಿ.ಶ. ೫ನೇ ಶತಮಾನದ ವರೆಗೆ

೨. ಪೂರ್ವದ ಹಳಗನ್ನಡ – ಕ್ರಿ.ಶ. ೯ನೇ ಶತಮಾನದ ವರೆಗೆ

೩. ಹಳಗನ್ನಡ – ಕ್ರಿ.ಶ. ೧೨ನೇ ಶತಮಾನದ ವರೆಗೆ

೪. ಪೂರ್ವದ ನಡುಗನ್ನಡ – ಕ್ರಿ.ಶ. ೧೫ನೇ ಶತಮಾನದ ವರೆಗೆ

೫. ನಡುಗನ್ನಡ – ಕ್ರಿ.ಶ. ೧೮ನೇ ಶತಮಾನದ ವರೆಗೆ

೬. ಹೊಸಗನ್ನಡ – ಕ್ರಿ.ಶ. ೧೯ನೇ ಶತಮಾನದ ವರೆಗೆ

೭. ಆಧುನಿಕ ಕನ್ನಡ – ೨೦ನೇ ಶತಮಾನದಿಂದ

ಈ ಒಂದೊಂದು ಹಂತದಲ್ಲೂ ಕನ್ನಡಭಾಷೆ ಸ್ಪಷ್ಟವಾದ ವ್ಯತ್ಯಾಸಗಳನ್ನು ಪಡೆದುಕೊಳ್ಳುತ್ತಾ ಕಾಲದಿಂದ ಕಾಲಕ್ಕೆ ಬದಲಾಗುತ್ತ ಬೆಳೆಯುತ್ತ ಹೊಸತನವನ್ನು ಕಂಡುಕೊಳ್ಳುತ್ತ ಬಂದಿದೆ. ಜಗತ್ತಿನ ಭಾಷೆಗಳಲ್ಲಿ ಇಂಗ್ಲಿಷನ್ನು ಬಿಟ್ಟರೆ ಕನ್ನಡವೇ ಅತಿವೇಗವಾಗಿ ಬದಲಾಗುತ್ತಿರುವ ಭಾಷೆ ಎಂಬ ಹೇಳಿಕೆಗೆ ಪಾತ್ರವಾಗಿದೆ. ಬದಲಾವಣೆ – ವ್ಯತ್ಯಾಸ ಎನ್ನುವುದು ಭಾಷಾವಿಜ್ಞಾನದಲ್ಲಿ ಬೆಳವಣಿಗೆಯ – ಅಭಿವೃದ್ಧಿಯ ಲಕ್ಷಣವಾಗಿದೆ. ಯಾವುದೇ ಭಾಷೆಯನ್ನು ಬಹಳ ನಿಖರವಾಗಿ ತನ್ನ ಭಾಷೆಯಲ್ಲಿ ಯಥಾವತ್ತಾಗಿ ಪುನರಾವರ್ತಿಸಬಹುದಾದ ಸಮರ್ಥವಾಗದ ಧ್ವನಿವ್ಯವಸ್ಥೆ ಕನ್ನಡದಲ್ಲಿದೆ. ಪ್ರಪಂಚದಲ್ಲಿ ಸಂಸ್ಕೃತವನ್ನು ಬಿಟ್ಟರೆ ಕನ್ನಡ ಮಾತ್ರ ಅತಿಹೆಚ್ಚು ಧ್ವನಿಗಳನ್ನು ಹೊಂದಿರುವ – ವರ್ಣಮಾಲೆಯಿರುವ ಭಾಷೆಯೆನಿಸಿದೆ. ಭಾಷಾ ವಿಜ್ಞಾನದಲ್ಲಿ ಅತಿಹೆಚ್ಚು ಧ್ವನಿಗಳನ್ನು ಹೊಂದಿರುವ ಭಾಷೆಯನ್ನು ಮಾತ್ರ ಹೆಚ್ಚು ವೈಜ್ಞಾನಿಕ ಭಾಷೆ ಎನ್ನಲಾಗುತ್ತದೆ.

ಕನ್ನಡ ಭಾಷೆಯ ಇನ್ನೊಂದು ಜಾಗತಿಕ ವೈಶಿಷ್ಟ್ಯವೆಂದರೆ, ಸಂಖ್ಯೆಗಳಲ್ಲಿ ಕೃತಿಯನ್ನು ರಚಿಸಿದ ದಾಖಲೆಮಾಡಿರುವುದು 'ಸಿರಿಭೂವಲಯ' ಅಂತಹ ಅಪರೂಪದ ಸಂಖ್ಯಾಲಿಪಿಯಲ್ಲಿ ರಚನೆಯಾಗಿರುವ ವಿಶ್ವದಾಖಲೆಯ ಗ್ರಂಥ. ಗಿನ್ನಿಸ್ ದಾಖಲೆಯಾಗಬೇಕಾಗಿರುವ ಕೃತಿ. ಪ್ರಪಂಚದಲ್ಲೆಲ್ಲೂ ಈವರೆಗೂ ಯಾವಭಾಷೆಯಲ್ಲೂ ಇಂಥ ಕೃತಿ ರಚನೆಯಾಗಿಲ್ಲ. ಅತಿಹೆಚ್ಚಿನ ಧ್ವನಿಗಳನ್ನು ಸೃಷ್ಟಿಮಾಡಿ ಆ ಧ್ವನಿಗಳನ್ನು ಕನ್ನಡದಲ್ಲಿ ರೂಢಿಸಿಕೊಂಡು ಅವುಗಳಿಗೆ ೧ ರಿಂದ ೬೪ರ ವರೆಗೆ ಅಂಕಿಸಂಕೇತ ಕೊಟ್ಟು ಈ ಅಂಕಿಗಳನ್ನು ೨೭ x ೨೭ ಚೌಕ ಮನೆಗಳ ಚಕ್ರಗಳಲ್ಲಿ ಬರೆದಿರುವುದು ಇದರ ವೈಶಿಷ್ಟ್ಯ. ಆ ಚೌಕಮನೆಗಳಲ್ಲಿ ಅಸ್ತವ್ಯಸ್ತವಾಗಿ ಕಂಡುಬರುವ ಅಂಕಿಗಳನ್ನು ಅಕ್ಷರಗಳಿಗೆ ಅಳವಡಿಸಬೇಕು. ಅನಂತರ ಕವಿ ಹೇಳುವ ಗಣಿತ ಸಿದ್ಧಾಂತದ ನವಮಾಂಕ ಪದ್ಧತಿಯ ಮ್ಯಾಜಿಕ್ ಸ್ಕ್ವಯರ್ – ಪರ್ಮ್ಯುಟೇಷನ್ ಕಾಂಬಿನೇಷನ್ ತಂತ್ರಗಳನ್ನು ಹೋಲುವ ವಿವಿಧ ಬಂಧಗಳ ಕ್ರಮದಲ್ಲಿ ಬಿಡಿಸಿಕೊಂಡು ಓದಬೇಕು. ಹಾಗೆ ಓದಿದಾಗ ಮಾತ್ರ ಕೃತಿಗಳು ಕಂಡುಬರುತ್ತವೆ. ಇದೊಂದು ಅದ್ಭುತ ಪ್ರಯೋಗವಾಗಿದೆ. ಇದರ ಕಾಲವನ್ನು ೧೬ನೇ ಶತಮಾನ ಎಂದು ಗುರುತಿಸಲಾಗುತ್ತಿದೆ. ಕುಮುದೇಂದು ಎಂಬ ಕವಿ ಇದರ ಕರ್ತೃ. ಈವರೆಗೆ ಇದನ್ನು ಸಂಪೂರ್ಣವಾಗಿ ಬಿಡಿಸಿ ಓದಲಾಗಿಲ್ಲ. ಸರ್ಪಬಂಧ, ಪದ್ಮಬಂಧ ಮುಂತಾದ ಸು. ೩೦ ವಿವಿಧ ಬಂದಗಳಲ್ಲಿ ಈ ಚಕ್ರಗಳನ್ನು ಬಿಡಿಸಿ ಓದಿದರೆ ನೂರಾರು ವಿಷಯಗಳ ಸಾಹಿತ್ಯ ಕೃತಿಗಳು ೭೧೮ ಭಾಷೆಗಳಲ್ಲಿ ಹೊರಬರುತ್ತವೆ ಎಂದು ಕವಿ ಹೇಳಿದ್ದಾನೆ. ಈವರೆಗೆ 'ವಿಮಲಾಂಕಬಂಧ' ಎಂಬ ಒಂದು ಬಂಧದಲ್ಲಿ ಮಾತ್ರ ಸುಮಾರು ಅರ್ಧ ಭಾಗವನ್ನು ಅಂದರೆ ೩೩ ಅಧ್ಯಾಯಗಳನ್ನು ಮಾತ್ರ ಓದಿದ್ದು ಅದರಲ್ಲಿ ಕನ್ನಡದ ಸಾಂಗತ್ಯ ಪದ್ಯಗಳಲ್ಲಿ ಕವಿಕಾವ್ಯವಿಚಾರ, ಕೃತಿರಚನಾ ಸ್ವರೂಪದ ವಿವರ, ರಸಸಿದ್ಧಾಂತ ಹಾಗೂ ಭಗವದ್ಗೀತೆ ಭಾಗಗಳು ಮಾತ್ರ ವ್ಯಕ್ತವಾಗಿವೆ. ಪಂಡಿತ ಎಲ್ಲಪ್ಪಶಾಸ್ತ್ರಿಗಳು, ಕರ್ಲಮಂಗಲಂ ಶ್ರೀಕಂಠಯ್ಯನವರು ಮತ್ತು ಕೆ. ಅನಂತಸುಬ್ಬರಾವ್ ತ್ರಿಮೂರ್ತಿಗಳು ತಮ್ಮ ಜೀವಮಾನದ ಸಾಧನೆಯಾಗಿ ಈ ಕೃತಿಯನ್ನು ಶೋಧಿಸಿ ಬಿಡಿಸಿ ಪ್ರಕಟಿಸಿರುವ ಸಾಹಸಮಾಡಿದ ಪ್ರಾತಃಸ್ಮರಣೀಯರಾಗಿದ್ದಾರೆ.

ಕುತೂಹಲಕ್ಕಾದರೂ ಈ ತಂತ್ರವನ್ನು, ಗುಟ್ಟನ್ನು ಬಿಡಿಸಿ ಇವುಗಳು ಹೇಳುವ ಸಾಹಿತ್ಯ, ಧರ್ಮ, ಶಾಸ್ತ್ರ, ಪುರಾಣ, ಜ್ಯೋತಿಷ್ಯ, ಆಯುರ್ವೇದ ಮುಂತಾದ ಹಲವು ವಿಷಯದ ಗ್ರಂಥಗಳು, ಜೈನ, ವೈದಿಕ ಧರ್ಮದ ಕೃತಿಗಳು ಯಾವುವು? ಇದರಲ್ಲಿ ಎಷ್ಟು ಭಾಷೆಯ ಕೃತಿಗಳು ಅಡಗಿವೆ? ಎಂಬುದನ್ನು ತೋರಿಸುವ ಸವಾಲು ಕನ್ನಡಿಗರ ಮೇಲಿದೆ. ಈಗಾಗಲೆ ಸಂಸ್ಕೃತ, ಪಾಳಿ, ಪ್ರಾಕೃತ, ತಮಿಳು, ತೆಲುಗು ಮುಂತಾದ ಭಾಷೆಗಳ ಕೆಲವು ಪದ್ಯಗಳು ಮಾತ್ರ ಕಂಡು ಬಂದಿರುತ್ತವೆ. ಜಗತ್ತಿನಲ್ಲೇ ಇಂತಹ ಅದ್ಭುತ ಸವಾಲನ್ನು ಸೃಷ್ಟಿಸಿರುವ ಭಾಷೆ ಕನ್ನಡ ಮಾತ್ರವಾಗಿದೆ.

ಹೀಗೆ ಹತ್ತು ಹಲವು ವೈಶಿಷ್ಟ್ಯಗಳಿಂದ ಕೂಡಿರುವ ಕನ್ನಡ ಭಾಷೆಯನ್ನು 'ಜೀವಂತ ಶಾಸ್ತ್ರೀಯಭಾಷೆ' ಎಂದು ಘೋಷಿಸಲೇಬೇಕಾಗಿದೆ. ಅದನ್ನು ಜಗತ್ತಿಗೆ, ಆಧುನಿಕ ತಂತ್ರಜ್ಞಾನಗಳ ಮೂಲಕ, ಸಂವಹನ

ಸಾಧ್ಯತೆಗಳ ಮೂಲಕ ಪರಿಚಯಿಸಲೇಬೇಕಾಗಿದೆ. ಇದು ಕನ್ನಡಿಗರ ಅಸ್ತಿತ್ವದ ಪ್ರಶ್ನೆಯೂ ಆಗಿದೆ. ನಮ್ಮ ಭಾಷೆಯಷ್ಟೇ ಪ್ರಾಚೀನತೆಯಿದ್ದರೂ ನಮ್ಮ ಭಾಷೆಯಷ್ಟು ಸಂಪದ್ಭರಿತವಲ್ಲದಿರುವ ಭಾಷೆಯನ್ನು ಕೇಂದ್ರಸರ್ಕಾರ 'ಶಾಸ್ತ್ರೀಯ ಭಾಷೆ'ಯ ಸೌಲಭ್ಯ ನೀಡಿ ಗೌರವಿಸಿರುವಾಗ ನಮಗೆ ನೀಡಲು ಚೌಕಾಸಿಮಾಡುತ್ತಿರುವುದು ನಮ್ಮ ಅಭಿಮಾನವನ್ನು ಕೆರಳಿಸಬೇಕಾಗಿರುವ ಸಂಗತಿಯಾಗಬೇಕು. ನಾವು ನಾವಾಗಿ ಗುರುತಿಸಿಕೊಳ್ಳುವ ಹಂತದಲ್ಲಿ ಇಂತಹ ಭೇದಭಾವವನ್ನು ಸಹಿಸಲಾಗದು ಎಂಬುದನ್ನು ಕನ್ನಡ ಜನತೆ, ಕೇಂದ್ರ ಸರ್ಕಾರಕ್ಕೆ ಸರಿಯಾದ ರೀತಿಯಲ್ಲಿ ತೋರಿಸಬೇಕಾಗಿದೆ.

## ಶಾಸ್ತ್ರೀಯಭಾಷೆಗೆ ಸಿಗುವ ಸೌಲಭ್ಯಗಳು

ಶಾಸ್ತ್ರೀಯಭಾಷೆಯ ಘೋಷಣೆಯಿಂದ ಬರುವ ಸೌಲಭ್ಯಗಳಿಗಿಂತ ನಮಗೆ ಇದು ಅಸ್ತಿತ್ವದ, ನಮ್ಮತನದ, ಮರ್ಯಾದೆಯ, ಪ್ರತಿಷ್ಠೆಯ ಪ್ರಶ್ನೆಯಾಗಬೇಕು. ನೆರೆಯ ರಾಜ್ಯದ ರಾಜಕೀಯಕ್ಕೆ – ದಬ್ಬಾಳಿಕೆಗೆ ನಾವು ಮತ್ತು ನಮ್ಮ ಭವಿಷ್ಯದ ಕನ್ನಡಿಗರು ಈಡಾಗದಂತೆ ನಾವಿಂದು ಎಚ್ಚರ ವಹಿಸಬೇಕು. ನಮಗೆ ಬರಬೇಕಾದದ್ದನ್ನು ಹಕ್ಕೊತ್ತಾಯದ ಮೂಲಕವಾದರೂ ಪಡೆದುಕೊಂಡು ಕನ್ನಡ-ಕನ್ನಡಿಗ-ಕರ್ನಾಟಕವನ್ನು ಸುಭದ್ರವಾಗಿ ಕಟ್ಟಬೇಕಾಗಿದೆ. ಕೇಂದ್ರಸರ್ಕಾರ, ಶಾಸ್ತ್ರೀಯಭಾಷೆಗಳಿಗೆ ಈ ಕೆಳಕಂಡ ಸೌಲಭ್ಯಗಳನ್ನು ನೀಡುತ್ತಿದೆ.

೧. ಶಾಸ್ತ್ರೀಯ ಭಾಷೆಗಳಲ್ಲಿ ಪರಿಣಿತಿ ಸಾಧಿಸಿರುವ ಇಬ್ಬರು ಘನವಿದ್ವಾಂಸರಿಗೆ ಪ್ರತಿವರ್ಷ ಅಂತರರಾಷ್ಟ್ರೀಯ ಮಟ್ಟದ ಉನ್ನತ ಮೌಲ್ಯದ ಪ್ರಶಸ್ತಿ-ಗೌರವಗಳು
೨. ಶಾಸ್ತ್ರೀಯಭಾಷೆಗಳ ಅಧ್ಯಯನ. ಸಂಶೋಧನೆಗೆ ಉನ್ನತ ಮಟ್ಟದ ಸಂಶೋಧನ ಕೇಂದ್ರದ ಸ್ಥಾಪನೆ
೩. ಭಾರತದ ವಿವಿಧ ವಿಶ್ವವಿದ್ಯಾನಿಲಯಗಳಲ್ಲಿ ಶಾಸ್ತ್ರೀಯ ಭಾಷೆಗಳ ಪ್ರಾಧ್ಯಾಪಕ ಪೀಠಗಳನ್ನು, ವಿಶ್ವವಿದ್ಯಾಲಯ ಅನುದಾನ ಆಯೋಗದ ಮೂಲಕ ಸ್ಥಾಪಿಸುವುದು.
೪. ಈಗಾಗಲೇ ನೀಡುತ್ತಿರುವ ಭಾಷಾ – ಸಂಶೋಧನಾ ಸಂಸ್ಥೆಗಳ ಅನುದಾನಗಳನ್ನು ಹೆಚ್ಚಿಸುವುದು ಮತ್ತು ವಿಸ್ತರಿಸುವುದು.

ಈ ಸೌಲಭ್ಯಗಳು ಒಬ್ಬ ಸೋದರನಿಗೆ ದಕ್ಕಿರುವಾಗ ಇನ್ನೊಬ್ಬ ಸೋದರನಿಗೂ ದಕ್ಕಬೇಕಾದದ್ದು ನ್ಯಾಯೋಚಿತವಾದದ್ದು ಮತ್ತು ಅತ್ಯಗತ್ಯವಾದದ್ದು. ಸರೀಕರೊಂದಿಗೆ ತಲೆಯೆತ್ತಿ ನಿಲ್ಲಲು, ಸಮಾಜದಲ್ಲಿ ಸುಭದ್ರತೆಯನ್ನು ಗಳಿಸಿಕೊಳ್ಳಲು ಇನ್ನೊಬ್ಬ ಸೋದರನೂ ಅದನ್ನು ತನ್ನದಾಗಿಸಿಕೊಳ್ಳಲು ಏನು ಬೇಕೋ ಅದನ್ನು ಮಾಡುವುದು ಅವನ ಧರ್ಮ ಮತ್ತು ಕರ್ತವ್ಯವಾಗಬೇಕು. ಇಂದಿನ ಸಾಮಾಜಿಕ ಸಂದರ್ಭದಲ್ಲಿ ತನ್ನ ಭಾಷೆಯನ್ನು ಎಲ್ಲ ಆಧುನಿಕ ಸಂವಹನ ಸಾಧ್ಯತೆಗಳಿಗೆ ಒಡ್ಡಿಕೊಂಡಾಗ ಮಾತ್ರ ತಾನು ಉಳಿಯುವುದು ಸಾಧ್ಯ. ಭಾಷೆ ಬದುಕಿನ ಒಂದು ಭಾಗವೇ ವಿನಾ ಕೇವಲ ಸಂವಹನ ಸೌಲಭ್ಯವಲ್ಲ, ಭಾಷೆ ಸತ್ತರೆ ಆ ಭಾಷೆಯನ್ನಾಡುವ ಸಮಾಜವೂ ಸಾಯುತ್ತದೆ. ತಾನು ಏನೇ ಆದರೂ ಎಷ್ಟೇ ಬೆಳೆದರೂ ಅದನ್ನು ತನ್ನಭಾಷೆಯೊಂದಿಗೇ ತೋರಿಸಬೇಕು. ಇಂತಹ ಬದ್ಧತೆ ತಮಿಳರಿಗಿರುವುದರಿಂದಲೇ ಅವರು ಈ ಶಾಸ್ತ್ರೀಯ ಭಾಷೆಯ ಮರ್ಮವನ್ನು ಅರಿತುಕೊಂಡು, ತಮ್ಮ ರಾಜಕೀಯ ಪ್ರಾಬಲ್ಯವನ್ನು ಬಳಸಿ ಅದನ್ನು ಸಾಧಿಸಿಕೊಂಡಿರುವುದು. ಇದನ್ನು ನಾವೂ ಅರಿತು ಈ ಸ್ಥಾನವನ್ನು ಪಡೆದುಕೊಳ್ಳುವುದರಲ್ಲಿ ನಮ್ಮ ಜಾಣತನವನ್ನು ಪ್ರದರ್ಶಿಸಬೇಕೇ ವಿನಾ ನಿರಾಕರಿಸುವುದರಲ್ಲಲ್ಲ. ನಿರಾಕರಿಸುವುದು ಸ್ವಂತಿಕೆಯ ಲಕ್ಷಣವಲ್ಲ. ನಾವಿಂದು ಅತಿಬುದ್ಧಿವಂತರೆನಿಸಿ ದಡ್ಡರಾಗುತ್ತಿದ್ದೇವೆ. ಅವರು ದಡ್ಡರೆನಿಸಿಕೊಂಡೇ ಬುದ್ಧಿವಂತರಾಗುತ್ತಿದ್ದಾರೆ.

**ದ್ವಂದ್ವನಿಲುವು – "ಕನ್ನಡಿಗರ ಶಾಪ":**

ಕೆಲವು ಬುದ್ಧಿಜೀವಿಗಳು ತಮ್ಮ ಬುದ್ಧಿಯನ್ನು, ವೈಚಾರಿಕತೆಯನ್ನು ಪ್ರದರ್ಶಿಸುವುದಕ್ಕಾಗಿ ಈ 'ಶಾಸ್ತ್ರೀಯಭಾಷೆ'ಯ ಕಲ್ಪನೆಯನ್ನೇ ನಿರಾಕರಿಸುತ್ತಿದ್ದಾರೆ. 'ಜೀವಂತ ಭಾಷೆಗಳು ಶಾಸ್ತ್ರೀಯ ಭಾಷೆಗಳಾಗಲಾರವು. ಕನ್ನಡವನ್ನು ಶಾಸ್ತ್ರೀಯಭಾಷೆ ಎಂದು ಕರೆದರೆ ಅದು ಸತ್ತಭಾಷೆಯಾಗುತ್ತದೆ. ತಮಿಳರಿಗೆ ಬುದ್ಧಿಯಿಲ್ಲ; ನಾವು ಕೇಂದ್ರದ ಮೇಲೆ ಪ್ರಭಾವಬೀರಿ ತಮಿಳನ್ನೂ ಶಾಸ್ತ್ರೀಯಭಾಷಾ ಸ್ಥಾನದಿಂದ ಹಿಮ್ಮೆಟ್ಟಿಸಬೇಕು. ಹೀಗಿರುವಾಗ ಕನ್ನಡವನ್ನು ಶಾಸ್ತ್ರೀಯಭಾಷೆಯನ್ನಾಗಿ ಸೇರಿಸಬೇಕೆಂದು ಒತ್ತಾಯಿಸುವುದರಲ್ಲಿ ಅರ್ಥವಿಲ್ಲ' ಎಂಬರ್ಥದಲ್ಲಿ ವಾದಿಸುತ್ತಾರೆ. ಇನ್ನು ಕೆಲವರು 'ಕ್ಲಾಸಿಕಲ್ ಲಾಂಗ್ವೇಜ್ ಎಂಬ ಇಂಗ್ಲಿಷ್ ಪದಕ್ಕೆ ಶಾಸ್ತ್ರೀಯ ಭಾಷೆ ಎಂದು ಕರೆಯುವುದೇ ತಪ್ಪು. 'ಅಭಿಜಾತ ಭಾಷೆ' ಎಂದೋ ಪ್ರಾಚೀನಭಾಷೆ ಎಂದೋ ಬೇರೆ ರೀತಿಯಲ್ಲಿ ಕರೆಯುವುದು ಸರಿ' ಎಂದು ತರ್ಕಿಸುತ್ತಾರೆ. ಮತ್ತೂ ಕೆಲವು 'ಪ್ರಭೃತಿ'ಗಳು, ಕನ್ನಡದ ಸಮಸ್ಯೆ ಬೇಕಾದಷ್ಟಿದೆ. ಶಾಸ್ತ್ರೀಯಭಾಷೆಯ ಸ್ಥಾನ ಪಡೆಯುವುದರಿಂದ ಅವೆಲ್ಲ ನಿವಾರಣೆಯಾಗುವುದಿಲ್ಲ. ಯಾರೋ ಒಬ್ಬ ವಿದ್ವಾಂಸನಿಗೆ ಮಣೆಹಾಸುವ ಪ್ರಶಸ್ತಿಗಳಿಂದ ನಾವು ಏನನ್ನೂ ಪಡೆದಂತಾಗುವುದಿಲ್ಲ. ಆದ್ದರಿಂದ ಈ ಹೋರಾಟವನ್ನು ಬಿಟ್ಟು ಜ್ವಲಂತ ಸಮಸ್ಯೆಗಳತ್ತ ಗಮನ ಹರಿಸೋಣ ಎಂದು ಸಲಹೆ ನೀಡುತ್ತಾರೆ.

ಮೊದಲೇ ಕನ್ನಡದ ಬಗ್ಗೆ ನಿರ್ಲಕ್ಷ ಇರುವ ಸರ್ಕಾರಕ್ಕೆ ಈ ವಿತಂಡವಾದಗಳೆಲ್ಲ ಇನ್ನಷ್ಟು ಜಡತನವನ್ನು ತಂದುಕೊಡುತ್ತದೆ. ನಿದ್ರಿಸುವವನಿಗೆ ಹಾಸಿಗೆ ಹಾಸಿಕೊಟ್ಟಂತೆ. ಇಂತಹ ಭಿನ್ನಾಭಿಪ್ರಾಯಗಳಿಂದಲೇ ಕನ್ನಡ ಇಂದು ಸಮಸ್ಯೆಗಳ ಕೂಪವಾಗಿಬಿಟ್ಟಿದೆ. ಕನ್ನಡ–ಕನ್ನಡಿಗ–ಕರ್ನಾಟಕದ ಹಿತದೃಷ್ಟಿಯಿಲ್ಲದೆ ಸರ್ಕಾರ ನಲುಗುತ್ತಿದೆ. ಕನ್ನಡವನ್ನು ಉಳಿಸುವುದಕ್ಕಾಗಿ, ಬೆಳೆಸುವುದಕ್ಕಾಗಿ ಕನ್ನಡಿಗರಲ್ಲೇ ಜಗಳ ವಾದವಿವಾದಗಳು ಮುಗಿಲೇಳುತ್ತಿವೆ. ರಾಜಕೀಯ ಪಕ್ಷಗಳು, ಆಳುವ ಸರ್ಕಾರಗಳಂತೂ ಇಂತಹ ಭಿನ್ನಾಭಿಪ್ರಾಯಗಳನ್ನು ಬೆಂಬಲಿಸಿ ತಮ್ಮ ಬೇಳೆ

ಬೇಯಿಸಿಕೊಳ್ಳುತ್ತವೆ. ಬೀಸುವ ದೊಣ್ಣೆಯಿಂದ ತಪ್ಪಿಸಿಕೊಳ್ಳುತ್ತವೆ. ತಮ್ಮ ಅಧಿಕಾರ, ಸ್ಥಾನಗಳನ್ನು ಸುಭದ್ರಗೊಳಿಸಕೊಳ್ಳುತ್ತವೆ. ಸಮಸ್ಯೆಗಳನ್ನು ಬಿಡಿಸುವ ರೂಪದಲ್ಲಿ ಇನ್ನಷ್ಟು ಬಿಗಡಾಯಿಸುತ್ತವೆ. ಅವು ತಕ್ಷಣಕ್ಕೆ ಪರಿಹಾರವೆನಿಸಿದರೂ ಭವಿಷ್ಯಕ್ಕೆ ಮಾರಕವಾಗುವುದನ್ನು ಲೆಕ್ಕಿಸದೆ ಕನ್ನಡಕ್ಕೆ ನಿಷ್ಠೆ ತೋರಿಸುವ ಬದಲು, ದ್ರೋಹಬಗೆದು ಸ್ವಲಾಭ ಮಾಡಿಕೊಂಡು ವಿಜೃಂಭಿಸುತ್ತವೆ.

ನಮ್ಮಗಳ ಈ ಅತೀಬುದ್ಧಿವಂತಿಕೆ, ಭಿನ್ನಾಭಿಪ್ರಾಯ, ವೈಚಾರಿಕತೆ, ವಿತಂಡವಾದಗಳಿಂದ ಕನ್ನಡಕ್ಕೆ ಕಂಟಕವಾಗುವುದನ್ನು ಯೋಚಿಸುವುದಕ್ಕೇ ಹೋಗಲಾಗದಂತೆ ನಾವೇ ಸರ್ಕಾರಗಳನ್ನು – ರಾಜಕೀಯ ಪಕ್ಷಗಳನ್ನು ದಾರಿ ತಪ್ಪಿಸುತ್ತಿದ್ದೇವೆ. ಈ ಇಬ್ಬಂದಿತನ ಕನ್ನಡಿಗರನ್ನು ನಾಶಮಾಡುತ್ತಿದೆ. ರಾಜಕೀಯ ನಾಯಕರು ತಮ್ಮ ಸ್ವಾರ್ಥಕ್ಕಾಗಿ, ಇಂಥವರನ್ನು ಬಳಸಿಕೊಳ್ಳುತ್ತಾರೆ. ತಾವು ಮಾನಸಿಕವಾಗಿ ಕನ್ನಡೇತರರಾಗಿ, 'ಭಾರತೀಯ ಪ್ರಜೆ'ಗಳಾಗಿ ಬಿಡುತ್ತಾರೆ. 'ಭಾರತ ಬಹುಭಾಷಾ ರಾಷ್ಟ್ರವಾಗಿರುವುದರಿಂದ ಯಾರು ಎಲ್ಲಿ ಏನು ಬೇಕಾದರೂ ಮಾಡಬಹುದು, ಭಾಷೆಯಿಂದ ಯಾರನ್ನೂ ಬೇರೆ ಮಾಡಲಾಗುವುದಿಲ್ಲ, ಉಳಿದ ಭಾಷಿಕರು ಇಲ್ಲಿ ಅಲ್ಪಸಂಖ್ಯಾತರು, ಅವರಿಗೆ ಹೆಚ್ಚಿನ ಸೌಲಭ್ಯ ಪ್ರೋತ್ಸಾಹ ಕೊಡಬೇಕು' ಎಂಬ ಆದರ್ಶವಾದಿಗಳಾಗಿ ಈ ದ್ವಂದ್ವ ನಿಲುವಿನ ಸಾಹಿತಿಗಳ ಹೇಳಿಕೆಗಳ ಬೆಂಬಲದಿಂದ ತಮ್ಮ ಅನೀತಿಗಳನ್ನು ಸಮರ್ಥಿಸಿಕೊಂಡು ತಮ್ಮ ಓಟಿನ ರಾಜಕೀಯವನ್ನು ವಿಜೃಂಭಿಸಿ, ಬಹುಭಾಷಿಗರಿಗೆಲ್ಲ ಮಣೆ ಹಾಸಿ, ಕನ್ನಡವನ್ನು ಕಾಲಕಸ ಮಾಡುತ್ತಿದ್ದಾರೆ.

ಇದನ್ನು ವಿರೋಧಿಸುವ ಧ್ವನಿಗೇ ಇಲ್ಲಿ 'ಪ್ರಗತಿಪರಚಿಂತನೆ'ಯ ಸೋಗಿನಲ್ಲಿ ವಿರೋಧ ವ್ಯಕ್ತವಾಗುತ್ತದೆ. ಈ ವಿಪರ್ಯಾಸದಿಂದ ಕರ್ನಾಟಕ, ಕನ್ನಡಿಗರು ಹೊರಬರದಿದ್ದರೆ ಕನ್ನಡ ಕೃಶವಾಗುತ್ತದೆ. ಆಡಳಿತಭಾಷೆ, ಶಿಕ್ಷಣಭಾಷೆ, ಉದ್ಯೋಗ, ವಸತಿ, ನೆಲ, ಜಲ ಎಲ್ಲದರಲ್ಲೂ ಈ ಒಡಕುಧ್ವನಿಗಳೇ ಕನ್ನಡವನ್ನು ಮೇಲೇಳದಂತೆ ಕಟ್ಟಿಹಾಕುತ್ತಿವೆ. ಕನ್ನಡಕ್ಕೆ ಹಂತ ಹಂತದಲ್ಲೂ ಉಸಿರು ಕಟ್ಟುತ್ತಿದೆ. ಇಂತಹ ಒಳಜಗಳಗಳಲ್ಲಿ ಕನ್ನಡ ನಲುಗುತ್ತಿರುವಾಗ ನೆರೆಯ ತಮಿಳು–ತೆಲುಗಿನಂತಹ ಭಾಷೆಗಳು ಮೇಲೇಳುತ್ತವೆ. ಭಾಷೆಯ ಮೂಲಕವೇ ತಮ್ಮ ಶಕ್ತಿಯನ್ನು ಪ್ರದರ್ಶಿಸಿ ಗಟ್ಟಿಯಾಗಿ ನಿಲ್ಲುತ್ತವೆ. 'ಪ್ರಾದೇಶಿಕತೆಯೇ ನಮ್ಮ ಶಕ್ತಿ' ಎಂಬುದನ್ನು "ರಾಷ್ಟ್ರೀಯತೆ"ಗೆ ತೋರಿಸಿ ಅವೂ ತಮ್ಮೆದುರು ಬಾಗುವಂತೆ ಮಾಡಿ ಬಲಯುತವಾಗುತ್ತಿವೆ.

ಕನ್ನಡಿಗರು ಈ ಮರ್ಮವನ್ನು ಅರಿತು ಬಾಳಿದರೆ ಕನ್ನಡ ಉಳಿಯುತ್ತದೆ, ಕನ್ನಡ ಬೆಳೆಯುತ್ತದೆ. ಈ ನಿಟ್ಟಿನಲ್ಲಿ ಕನ್ನಡಕ್ಕೆ 'ಶಾಸ್ತ್ರೀಯ ಭಾಷೆ'ಯ ಸ್ಥಾನವನ್ನು ಪಡೆದುಕೊಳ್ಳುವುದು ಒಂದು ಉಪಾಯಮಾತ್ರ. ಇದರಿಂದ ಕನ್ನಡಕ್ಕೆ ಶಕ್ತಿ ಬರುತ್ತದೆ. ಕನ್ನಡಿಗರಿಗೆ ಶಕ್ತಿಬರುತ್ತದೆ. ಕನ್ನಡ ತಾಂತ್ರಿಕವಾಗಿ, ಶೈಕ್ಷಣಿಕವಾಗಿ ಗಟ್ಟಿಯಾಗುತ್ತದೆ. ಆಧುನಿಕ ಸಂವಹನ ಸಾಧ್ಯತೆಗೆ ತನಗೆತಾನೇ ತೆರೆದುಕೊಳ್ಳುತ್ತದೆ. ಜಾಗತಿಕ ಮಟ್ಟದಲ್ಲಿ ಕನ್ನಡ ಅಧ್ಯಯನ ಭಾಷೆಯಾಗಿ ಗಮನ ಸೆಳೆಯುತ್ತದೆ. ಕೇಂದ್ರ ಸರ್ಕಾರದಲ್ಲಿ ರೂಪಗೊಳ್ಳುವ ಯಾವುದೇ ಭಾಷೆ–ಸಾಹಿತ್ಯ–ಸಂಸ್ಕೃತಿಗೆ ಸಂಬಂಧಿಸಿದ ಯೋಜನೆಗಳು, ಸೌಲಭ್ಯಗಳು ಕನ್ನಡಕ್ಕೆ ತಾನಾಗಿ ಹರಿದು ಬರುತ್ತವೆ. ಅದರ ಸಾರ್ಥಕ ಬಳಕೆಯಿಂದ ಕನ್ನಡ–ಕನ್ನಡಿಗ–ಕರ್ನಾಟಕವನ್ನು ಇನ್ನಷ್ಟು ಸತ್ವಪೂರ್ಣವಾಗಿ ಕಟ್ಟಿಕೊಡಲು ಸಾಧ್ಯವಾಗುತ್ತದೆ.*

* ಬೆಂಗಳೂರು ನಗರ ಸಾರಿಗೆ ಸಂಸ್ಥೆ ಕನ್ನಡ ಕ್ರಿಯಾ ಸಮಿತಿಯು
೦೫.೭.೦೬ರಂದು ಏರ್ಪಡಿಸಿದ್ದ ಕನ್ನಡ ಜಾಗೃತಿ ಸಮಾವೇಶ ನಡೆಸಿದ
ಚಿಂತನೆಗೋಷ್ಠಿಯಲ್ಲಿ ಮಂಡಿಸಿದ ಟಿಪ್ಪಣಿಯ ವಿಸ್ತೃತ ರೂಪ.
'ಕನ್ನಡ ಕೈಮರ'ದಲ್ಲಿ ಪ್ರಕಟ.

# ಶಾಸ್ತ್ರೀಯ ಭಾಷಾ ಸ್ಥಾನಮಾನ, ಅಳಿದು ಹೋಗಲಿ ಎಲ್ಲ ಅನುಮಾನ



ಮನು ಬಳಿಗಾರ್

ರಾಷ್ಟ್ರಪತಿ ಭವನವನ್ನೊಮ್ಮೆ ಸಮೀಪದಿಂದ ನೋಡಬೇಕೆಂಬ ಬಯಕೆ ಮೊನ್ನೆಯಷ್ಟೆ ಈಡೇರಿತು. ಇದಕ್ಕೆ ಕಾರಣ ಕನ್ನಡಕ್ಕೆ ಶಾಸ್ತ್ರೀಯ ಭಾಷಾ ಸ್ಥಾನ ದೊರಕಿಸಿಕೊಳ್ಳಬೇಕೆಂಬ ಉದ್ದೇಶದಿಂದ ಹೊರಟ ಮಾನ್ಯ ಮುಖ್ಯ ಮಂತ್ರಿಗಳ ನಿಯೋಗದೊಂದಿಗೆ ಇರುವ ಸದವಕಾಶ ಒದಗಿ ಬಂದಿತ್ತು. ಜುಲೈ ೨, ೩ – ೨೦೦೮. ಹೂವಿನ ಜೊತೆ ದಾರವೂ ಮಾಲೆಯಾಗಿ ಗಣ್ಯರ ಕೊರಳು ಅಲಂಕರಿಸಿದಂತೆ ನಮ್ಮ ನಾಡಿನ ಹೆಮ್ಮೆಯ ಸಾಹಿತಿಗಳಾದ ರಾಷ್ಟ್ರಕವಿ ಜಿಎಸ್ಸೆಸ್, ದೇಜಗೌ, ಚಿದಾನಂದಮೂರ್ತಿ, ಕಂಬಾರ, ಸಾಶಿಮರವರೊಡನೆ ಅವರ ಪರಿಚಾರಿಕೆಗಾಗಿ ನಾನು. ಇದನ್ನೇ ಅಲ್ಲವೆ ಪುಣ್ಯ ವಿಶೇಷ ಎನ್ನುವುದು!. ಏಕ ಕಾಲದಲ್ಲೇ ದಿಗ್ಗಜರೈವರ ಸಾಹಚರ್ಯ ಒಡನಾಟ, ಅದೂ ಭರ್ಪೂರ ಮೂರು ದಿನ.

ನೋಡಲು ಎರಡು ಕಣ್ಣು ಖಂಡಿತ ಸಾಲವು ಎಂಬ ಮಾತು ಆ ಮಹಾನ್ ಕಟ್ಟಡದ ಎದುರು ನಿಂತಾಗ ತಂತಾನೆ ಮನವರಿಕೆಯಾಯಿತು. ನೂರಾರು ವರ್ಷಗಳಷ್ಟು ಹಳೆಯದಾದರೂ ಇಂದೇ ನಿರ್ಮಿಸಿದಂತೆ ಕಾಣುವ ಕೆಂಪು ಕುರಾಣಿ ಕಲ್ಲಿನಲ್ಲಿ ಕಟ್ಟಿದ ಆ ಭವ್ಯ ಕಟ್ಟಡ, ಸೌಂದರ್ಯದ ಖಣಿ; ನೋಡುಗರನ್ನು ದಿಙ್ಮೂಢರನ್ನಾಗಿಸಿಬಿಡುತ್ತದೆ. ಆದರೆ ನಮಗೆ ಇದೆಲ್ಲಕ್ಕೆ ಸಮಯವಿರಲಿಲ್ಲ. ಮಧ್ಯಾಹ್ನ ಹನ್ನೆರಡು ನಾಲ್ವತ್ತೈದಕ್ಕೆ ನಿಯೋಗ ಘನತೆವೆತ್ತ ರಾಷ್ಟ್ರಪತಿಯವರನ್ನು ಭೆಟ್ಟಿ ಮಾಡಬೇಕಿತ್ತು. ೧೨.೨೦ಕ್ಕೆ ಅಲ್ಲಿ ವರದಿ ಮಾಡಿ ಸುರಕ್ಷಣಾ ತಪಾಸಣೆಗೆ ಒಳಪಟ್ಟು ರಾಷ್ಟ್ರಪತಿಯವರು ಬರುವ ೧೫ ನಿಮಿಷ ಮೊದಲೇ ನಿಗದಿತ ಸಭಾಸ್ಥಳದಲ್ಲಿ ನಾವೆಲ್ಲ ಕುಳಿತುಕೊಂಡಾಯ್ತು. ಇಲ್ಲಿಯ ತಪಾಸಣೆಯಲ್ಲಿ ಗಣ್ಯ ಅತಿಗಣ್ಯರೆಲ್ಲರೂ ಒಳಗೊಳ್ಳುವದು ಒಮ್ಮೆ ವಿಚಿತ್ರವೆನಿಸಿದರೂ ಅದು ಅನಿವಾರ್ಯ ಎಂಬ ಭಾವ ಆವರಿಸಿಬಿಡುತ್ತದೆ. ರಾಷ್ಟ್ರಪತಿ ಭವನದ ವಿಶಾಲ ಗೋಡೆ, ಆವರಣ, ಒಳಗಿನ ದಾರಿಗಳು, ಛತ್ತಿನಲ್ಲಿಯ ಅದ್ಭುತ ಪೇಂಟಿಂಗ್‌ಗಳು, ಒಳನಡೆವಾಗ ಅಕ್ಕಪಕ್ಕದಲ್ಲಿರುವ ಅಪರೂಪದ ಭಿತ್ತಿಚಿತ್ರಗಳು, ಅಪೂರ್ವ ಚಿತ್ರಪಟಗಳು ದಂಗುಬಡಿಸುತ್ತವೆ. ವಿಶಾಲತೆ, ಭವ್ಯತೆಗಳ ಮೀರಿದ ಶಿಸ್ತುಬದ್ಧ ಮೌನವೊಂದು ಎಲ್ಲವನ್ನು ಸುಗಮವಾಗಿಯೇ ನಡೆಸುತ್ತ ಸಾಗುತ್ತದೆ ಜಗಮಗಿಸುವ ಆ ಒಳಾಂಗಣದಲ್ಲಿ. ರಾಷ್ಟ್ರಪತಿಯವರ ಸಮ್ಮುಖದಲ್ಲಿ, ಕನ್ನಡಕ್ಕೆ ಶಾಸ್ತ್ರೀಯ ಭಾಷಾ ಸ್ಥಾನ ಯಾಕೆ



ದೊರೆಯಲೇಬೇಕು ಎಂಬುದನ್ನು ಮಂಡಿಸುವ ಸರದಿ ಸಾಹಿತಿಗಳಲ್ಲಿ ಮೊದಲು ಬಂದದ್ದು ಡಾ. ಚಿದಾನಂದಮೂರ್ತಿ ಅವರಿಗೆ. ಗಂಭೀರವಾಗಿ ಎದ್ದುನಿಂತ ಆ ವಾಮನಮೂರ್ತಿ, ಕನ್ನಡ ಭಾಷೆಯ ಹುಟ್ಟು ಬೆಳವಣಿಗೆ, ಸಾಹಿತ್ಯ ಪರಂಪರೆ, ಇತಿಹಾಸಗಳ ಮೇಲೆ ಬೆಳಕು ಚೆಲ್ಲುತ್ತ ತಾಯಿ ಭುವನೇಶ್ವರಿಯೇ ಮೈಮೇಲೆ ಬಂದಂತೆ ತ್ರಿವಿಕ್ರಮನ ಅವತಾರ ತಾಳಿಬಿಟ್ಟರು. ನಡುನಡುವೆ ತಮ್ಮ ಧ್ವನಿಗೆ ಪೂರಕವಾಗಿ ತೋರುಬೆರಳನ್ನು ನೆಟ್ಟಗಾಗಿಸಿ ಕೈ ಮೇಲೆತ್ತುತ್ತ ಕನ್ನಡದ ಗೋವರ್ಧನ ಗಿರಿಯ ವಿರಾಟ್ ದರ್ಶನ ಮಾಡಿಸಿದ ಪರಿ ನಮ್ಮನ್ನೆಲ್ಲ ಮಂತ್ರಮುಗ್ಧರನ್ನಾಗಿಸಿತ್ತು. ತದನಂತರ ಡಾ. ದೇಜಗೌ. ತೊಂಭತ್ತು ತುಂಬಿದ್ದರೂ ಕನ್ನಡದ ಕೆಚ್ಚು, ಹೋರಾಟದ ಕಿಚ್ಚು ಎರಡನ್ನೂ ಉಜ್ವಲವಾಗಿ ಕಾಪಾಡಿಕೊಂಡು ಬಂದ ಇವರು ಸಮರ್ಥವಾಗಿ ವಾದ ಮಂಡಿಸಿ ಮುಗಿಸುತ್ತ, ಕೊನೆಗೆ "ದೇಶದ ಅತ್ಯುನ್ನತ ಸ್ಥಾನದಲ್ಲಿ ಇಂದು ತಮ್ಮ ಸ್ವರೂಪದಲ್ಲಿ ಮಾತೃ ಹೃದಯವೊಂದು ಕುಳಿತಿದೆ. ಮಕ್ಕಳಿಗೆ ಆದ/ಆಗುವ ಅನ್ಯಾಯದ ಅರಿವು ಆ ಕರುಣಾಮಯಿಗೆ ಖಂಡಿತ ಆಗುತ್ತದೆಂಬ ನಂಬುಗೆ ನಮಗಿದೆ" ಎಂದರು. ಪ್ರಾಯಶಃ ಅದು ರಾಷ್ಟ್ರಪತಿಯವರನ್ನು ತೀವ್ರವಾಗಿ ತಟ್ಟಿತೆಂದೇ ತೋರುತ್ತದೆ. ಆ ಮಹಾತಾಯಿಯ ಮುಖದಲ್ಲಿ ಪ್ರಸನ್ನತೆಯ ರೂಹು ಮೂಡತೊಡಗಿತು; ಅದಾವುದೊ ಭಾವಪರವಶತೆಗೆ ನಮ್ಮನ್ನೂ ಕರೆದೊಯ್ದಿತು. ತಲೆ ಮೇಲೆ ಸೆರಗು ಹೊದ್ದು ಘನ ಗಾಂಭೀರ್ಯದಿಂದ ನಾವೆಲ್ಲ ಕುಳಿತಿದ್ದ ಕೊಠಡಿಗೆ ಅವರು ಪ್ರವೇಶಿಸಿದಾಗಲೇ ನನಗೆ ದೂರದ ಹಳ್ಳಿಯಲ್ಲಿರುವ ಇದೇ ವಯಸ್ಸಿನ ನಮ್ಮ ತಾಯಿಯ ಮುಖ ಅದಾಗಲೇ ಸುಳಿದೂ ಹೋಗಿತ್ತು ಆ ಮಾತು ಬೇರೆ.

ಈ ನಿಯೋಗವು ಭೆಟ್ಟಿ ಮಾಡಿದ ಇತರ ಪ್ರಮುಖರೆಂದರೆ ಗೃಹಮಂತ್ರಿ ಶಿವರಾಜ್ ಪಾಟೀಲ್ ಹಾಗೂ ಲೋಕಸಭಾ ಪ್ರತಿಪಕ್ಷ ನಾಯಕ ಅಡ್ವಾನಿ ಅವರು. ಮೇಲಿನ ಇಬ್ಬರು ವಿದ್ವಾಂಸರೂ ಅಲ್ಲದೆ ಡಾ. ಕಂಬಾರ್ ಹಾಗೂ ರಾಷ್ಟ್ರಕವಿಗಳೂ ಇಲ್ಲಿ ಅಭಿವ್ಯಕ್ತಿಸಿದ ಅಂಶಗಳು ಒಟ್ಟಾರೆಯಾಗಿ ಕನ್ನಡದ ಅರ್ಹತೆ, ಯೋಗ್ಯತೆಯನ್ನು ಪ್ರಖರವಾಗಿ ಪ್ರತಿಬಿಂಬಿಸುವಂತಹವಾಗಿದ್ದವು. ಜಗತ್ತಿನ ನೂರಕ್ಕಿಂತ ಹೆಚ್ಚು ವಿಶ್ವವಿದ್ಯಾಲಯಗಳಲ್ಲಿ ಕನ್ನಡ ಭಾಷೆ ಬಗ್ಗೆ ತಿಳುವಳಿಕೆ ಇದೆ ಅಷ್ಟೇ ಅಲ್ಲ ಅನೇಕ ವಿದೇಶಿ ವಿಶ್ವವಿದ್ಯಾಲಯಗಳಲ್ಲಿ ಅದನ್ನು 'ಶಾಸ್ತ್ರೀಯ ಭಾಷೆ' ಎಂದು ಸಂಬೋಧಿಸಲಾಗುತ್ತದೆ ಎಂಬುದನ್ನು ಡಾ. ಕಂಬಾರ ಗಣ್ಯರ ಗಮನಕ್ಕೆ ತಂದಾಗ ನಮ್ಮೆಲ್ಲರ ರೋಮ ನೆಟ್ಟಗೆ ನಿಂತಿತ್ತು. ಶಿವರಾಜ್ ಪಾಟೀಲರಂತೂ ಅದನ್ನು ಮತ್ತೊಮ್ಮೆ ಹೇಳಲು ಕೇಳಿಕೊಂಡರು.

ಈ ಹಿರಿಯ ಸಾಹಿತಿಗಳು ಅಲ್ಲಿ ಹರಿಸಿದ ವಾಗ್ಝರಿಯ ರಸಾಸ್ವಾದ ಮಾಡಿದ ನನಗೆ, ಕನ್ನಡ ಭಾಷೆ

ಬಗೆಗಿನ ಇಂತಹ ಹಿರಿಮೆ ಗರಿಮೆಗಳ ಅರಿವು ನಾಡಿನ ಎಲ್ಲರಿಗೂ ಆಗುವದು ಸಮಯೋಚಿತವೆನಿಸಿ ಆ ಶಬ್ದ ಸಂಪತ್ತಿನ ಸಾರಸಂಗ್ರಹವನಿಲ್ಲಿ ಬಿಚ್ಚಿಡುತ್ತಿದ್ದೇನೆ:

ಕರ್ನಾಟಕ ಎಂಬ ಹೆಸರು ಕ್ರಿ.ಶ.ಪೂರ್ವ ೧೦೦೦ ವರ್ಷ ಹಳೆಯದಾದ ವ್ಯಾಸವಿರಚಿತ ಮಹಾಭಾರತದಲ್ಲೇ ಉಲ್ಲೇಖಿಸಲ್ಪಟ್ಟಿದೆ. 'ಇಸಿಲ' ಎಂಬ ಕನ್ನಡ ಪ್ರದೇಶವೊಂದರ ಉಲ್ಲೇಖ ಅಶೋಕನ ಕಾಲದ ಶಿಲಾಲೇಖ(೨೫೨ ಕ್ರಿ.ಪೂ)ದಲ್ಲಿದೆ. ಈಗಿನ ಜ್ವಲಂತ ಸಂದರ್ಭದಲ್ಲಿ ತೀರ ಪ್ರಸ್ತುತವೆನಿಸುವ ಒಂದು ವಿಶೇಷ ವಿಷಯವೆಂದರೆ ಕ್ರಿ.ಪೂ. ೨ನೇ ಶತಮಾನದ ತಮಿಳು ಭಾಷೆಯ ಮೇಲೆ ಪೂರ್ವಹಳೆಗನ್ನಡದ ಪ್ರಭಾವ ಆಗಿತ್ತೆಂದು ಖ್ಯಾತ ತಮಿಳು ವಿದ್ವಾಂಸ ಇರಾವತಮ್ ಮಹಾದೇವನ್ ಅವರೇ ರುಜುವಾತುಪಡಿಸಿದ್ದಾರೆ ಎಂಬುದು. ಇದು ಕೇಂದ್ರ ಸರಕಾರ ನೇಮಿಸಿದ ತಜ್ಞರ ಸಮಿತಿಯು ಲಘುವಾಗಿ ಪರಿಗಣಿಸುವ ಸಂಗತಿ ಖಂಡಿತ ಅಲ್ಲ. (ಯಾಕೆಂದರೆ ಈಗಾಗಲೇ ತಮಿಳಿಗೆ ಶಾಸ್ತ್ರೀಯ ಭಾಷಾ ಮನ್ನಣೆ ದೊರಕಿ ಅದು ದೇಶದ ಕೆಲವು ವಿಶ್ವವಿದ್ಯಾಲಯಗಳಲ್ಲಿ, ಯೋಜನೆಗಳಲ್ಲಿ ಸ್ಥಾನ ಭದ್ರಪಡಿಸಿಕೊಂಡು, ನೂರಾರು ಕೋಟಿ ಕೇಂದ್ರದ ಅನುದಾನ ಪಡೆಯುವಲ್ಲಿ ಯಶಸ್ವಿಯಾಗಿದೆ). ತದನಂತರದ ಮಹತ್ವದ ಪುರಾವೆ ಈಜಿಪ್ತಿನ ಆಗ್ಸಿರಿಂಕಸ್ ಎಂಬಲ್ಲಿ ದೊರೆತಿದೆ. ಅಲ್ಲಿನ ಪ್ರಹಸನವೊಂದರಲ್ಲಿ ಹಾಗೂ ಟಾಲೆಮಿಯ ಬರವಣಿಗೆಯಲ್ಲಿ ಹಲವಾರು ಕನ್ನಡ ಶಬ್ದಗಳು (ಕ್ರಿ.ಶ.೧-೨ ಶತಮಾನ)ದಲ್ಲೇ ಕಾಣಿಸಿಕೊಂಡಿವೆ. ಅಲೆಗ್ಸಾಂಡ್ರಿಯಾದ ಗ್ರಂಥಾಲಯದ ಗೋಡೆಯ ಮೇಲೆ ಉಲ್ಲೇಖಿಸಿದ ವಿಶ್ವದ ಪ್ರಾಚೀನ ಭಾಷೆಗಳಲ್ಲಿ 'ಊರಲ್ಲಿ' ಎಂಬ ಕನ್ನಡ ಪದ ಗೋಚರಿಸುತ್ತಿರುವುದನ್ನು ಇತ್ತೀಚಿನ ತಮ್ಮ ಪ್ರವಾಸ ಕಥನದಲ್ಲಿ ಕವಿ ದೊಡ್ಡರಂಗೇಗೌಡರು ನಮೂದಿಸಿದ್ದನ್ನೂ ಇಲ್ಲಿ ನೆನೆಯಬಹುದಾಗಿದೆ. ಮುಂದಿನ ಮಹತ್ವದ ಮೈಲಿಗಲ್ಲೆಂದರೆ, ಶಾಮಕುಂದ ಹಾಗೂ ತಂಬೂಲರಾಯಚಾರ್ಯರು "ಚಿಕ್ಕಂದಾಗಮ"ದ ಮೇಲೆ ಬರೆದ ಕನ್ನಡ ಟೀಕೆಗಳು (ಕ್ರಿ.ಶ. ೩-೪ ಶತಮಾನ). ಹಾಗೆಯೇ ಎಲ್ಲಕ್ಕಿಂತ ಸ್ಪಷ್ಟ ಹಾಗೂ ಖಚಿತ ಪುರಾವೆಯಾಗಿ ನಮ್ಮ ಹಲ್ಮಿಡಿ ಶಾಸನ (ಕ್ರಿ.ಶ. ೪೫೦) ದಲ್ಲಿನ ಕನ್ನಡ ಲಿಪಿ ನಮ್ಮೆದುರಿಗಿದೆ. ಈಗ ಇದನ್ನು ಬೆಂಗಳೂರಿನ ಪ್ರಾಚ್ಯವಸ್ತು ಸಂಗ್ರಹಾಲಯಕ್ಕೆ ತಂದಿದ್ದು ಹಲ್ಮಿಡಿ ಗ್ರಾಮದಲ್ಲಿ ಇದರ ಪ್ರತಿರೂಪ ಮಾದರಿ ಇಡಲಾಗಿದೆ. ಒಟ್ಟಾರೆಯಾಗಿ ಹೆಸರಾಂತ ವಿದ್ವಾಂಸರು, ಸಂಶೋಧಕರು, ಮೇರು ಸಾಹಿತಿಗಳಾದ ರಾಷ್ಟ್ರಕವಿ ಗೋವಿಂದ ಪೈ, ಬಿ.ಎಲ್. ರೈಸ್, ಕಿಟ್ಟೆಲ್, ಫ್ಲೀಟ್, ತೀನಂಶ್ರೀ, ಅಂಡ್ರೊನೊವ್, ಡಿಎಲ್ಎನ್ ಮುಂತಾದವರು ಖಚಿತವಾಗಿ ಅಭಿಪ್ರಾಯಿಸಿದ್ದೆಂದರೆ: ಕನ್ನಡಕ್ಕೆ ೨೩೦೦ ವರ್ಷಗಳ ಸುದೀರ್ಘವಾದ ದಾಖಲಿತ ಇತಿಹಾಸವಿದೆ. ತಮಿಳಿನಷ್ಟೇ ಪುರಾತನ ಪರಂಪರೆಯಿದೆ.

ನೃಪತುಂಗನ 'ಕವಿರಾಜಮಾರ್ಗ'ವು (ಕ್ರಿ.ಶ. ೮೫೦) ಶಾಸ್ತ್ರ ಗ್ರಂಥವಾಗಿದ್ದು ಕನ್ನಡ ಕಾವ್ಯ ಆ ಪೂರ್ವದಲ್ಲೇ ಸಾಕಷ್ಟು ಪ್ರಬುದ್ಧವಾಗಿತ್ತೆಂಬುದನ್ನು ಮನವರಿಕೆ ಮಾಡಿಕೊಡುತ್ತದೆ. ಹತ್ತನೆ ಶತಮಾನದ ಪಂಪ, ರನ್ನರಂತೂ ವಿಶ್ವದರ್ಜೆಯ ಶ್ರೇಷ್ಠ ಕವಿಗಳಾಗಿದ್ದಾರೆ. ಹನ್ನೆರಡನೇ ಶತಮಾನದ ವಚನ ಸಾಹಿತ್ಯ ಕನ್ನಡ ಭಾಷೆಯು ಜಗತ್ತಿನ ಸಾಹಿತ್ಯಕ್ಕೆ ನೀಡಿದ ಮಹೋನ್ನತ ಕೊಡುಗೆಯಾಗಿದೆ. ಆಧುನಿಕ ಸಂದರ್ಭದಲ್ಲಂತೂ ಕನ್ನಡ ಸಾಹಿತ್ಯ ಏಳು ಜ್ಞಾನಪೀಠ ಪುರಸ್ಕಾರಗಳನ್ನು ತನ್ನದಾಗಿಸಿಕೊಂಡು ಪ್ರಾದೇಶಿಕ ಭಾಷೆಗಳಲ್ಲಿ ವಿಕ್ರಮವನ್ನೇ ಸಾಧಿಸಿದೆ. (ತಮಿಳಿಗೆ ಕೇವಲ ಎರಡು ಮಾತ್ರ). ಇದೆಲ್ಲ ಕನ್ನಡದ ಸಮೃದ್ಧ ಸ್ವತಂತ್ರ ಅಸ್ತಿತ್ವ, ಅಸ್ಮಿತೆಯನ್ನು ಅರುಹುತ್ತದೆ. ಈ ಉಜ್ವಲ ಸಾಹಿತ್ಯ ಪರಂಪರೆ ೧೫೦೦ ವರ್ಷ ಅವಿಚ್ಛಿನ್ನವಾಗಿ ಬೇರಾವ ಪ್ರಭಾವಕ್ಕೂ ಒಳಗಾಗದೆ ನಡೆದುಕೊಂಡು ಬಂದಿದೆ. ಈ ಎಲ್ಲ ವಿಷಯವನ್ನು ವಿಸ್ತೃತವಾಗಿ, ಪ್ರೊ. ಸಿದ್ರಾಮಯ್ಯನವರು ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾಗಿದ್ದಾಗ ಹೊರತಂದ ಡಾ. ಚಿದಾನಂದಮೂರ್ತಿ ಹಾಗೂ ಡಾ. ಶೇಷಗಿರಿರಾವ್ ತಯಾರಿಸಿದ ತಜ್ಞರ ವರದಿಯಲ್ಲಿ ಮೂಲ ದಾಖಲೆ ಪುರಾವೆಗಳೊಂದಿಗೆ ಪ್ರತಿಪಾದಿಸಲಾಗಿದೆ. ಹೀಗೆ ಕನ್ನಡವು ಶಾಸ್ತ್ರೀಯ ಭಾಷೆಯ ಸ್ಥಾನಕ್ಕಾಗಿ ಬೇಕಾಗುವ ಎಲ್ಲ ಮಾನದಂಡಗಳನ್ನು (೧೫೦೦ ವರ್ಷಗಳ ದಾಖಲಿತ ಇತಿಹಾಸ, ಅಪ್ರಭಾವಿತ ಮೂಲ ಸಾಹಿತ್ಯ ರಚನೆ, ಸ್ವಂತಿಕೆ, ನಿರಂತರತೆ, ಸಮೃದ್ಧತೆ) ಪೂರೈಸುತ್ತಿದ್ದರೂ ಇನ್ನೂ ಎಷ್ಟು ದಿನ ಕಾಯಬೇಕೋ! ನ್ಯಾಯಸಮ್ಮತ ನಮ್ಮ ಹಕ್ಕಿಗಾಗಿ. ಆದರೂ ಈ ಅನುಮಾನ ಅಳಿಯುವ ಕಾಲ ಸನ್ನಿಹಿತವಾಗುತ್ತಿದೆ ಎಂಬ ಆಶಾಭಾವನೆಯೊಂದಿಗೆನೆ ಈಗ ಇಲ್ಲಿ ವಿರಮಿಸುತ್ತಿದ್ದೇನೆ.*

* ಸೌಜನ್ಯ: ಬೆಳಕ ಬೆಡಗು, ಅಂಕಿತ ಪುಸ್ತಕ.


ಡಾ. ದೇಜಗೌ

# ಕನ್ನಡ ಶಾಸ್ತ್ರೀಯಭಾಷೆ

ಇಂಡಿಯಾದಂಥ ಬಹುಭಾಷಾ ರಾಷ್ಟ್ರದಲ್ಲಿ ಯಾವುದಾದರೊಂದು ಭಾಷೆ ಎಷ್ಟೇ ಶ್ರೇಷ್ಠವಾದುದಾಗಿರಲಿ, ಅದಕ್ಕೊಂದು ವಿಶಿಷ್ಟ ಸ್ಥಾನವನ್ನು ಕಲ್ಪಿಸುವಾಗ ತಾತ್ಕಾಲಿಕ ರಾಜಕೀಯ ಲಾಭಗಳನ್ನು ನಿರ್ಲಕ್ಷಿಸಿ, ತಾರತಮ್ಯ ಪಕ್ಷಪಾತಗಳಿಗೆಡೆಗೊಡದೆ, ತಲಸ್ಪರ್ಶಿಯೂ, ಕೂಲಂಕಷವೂ, ದೂರದರ್ಶಿಯೂ, ನಿರವಸರವೂ ಆದ ನಿರ್ಣಯವನ್ನು ರೂಪಿಸಬೇಕಾದದ್ದು ಆಡಳಿತಗಾರರ ಧರ್ಮವಾಗಬೇಕು. ೧೮೮೭ರಷ್ಟು ಹಿಂದೆಯೇ ಪರಾತ್ತಿಮಲ್ ಕಲ್ಯೆಂಗ್ನರ್ ಎಂಬ ತಮಿಳು ಪಂಡಿತರೂ, ಇತ್ತೀಚೆಗೆ ಕ್ಯಾಲಿಫೋರ್ನಿಯಾ ವಿಶ್ವವಿದ್ಯಾನಿಲಯದ ಜಾರ್ಜ್‌ಹಾರ್ಟ್ ಎಂಬ ವಿದ್ವಾಂಸರೂ ತಮಿಳಿಗೆ ಶಾಸ್ತ್ರೀಯ ಸ್ಥಾನಮಾನ ಸಿಗಬೇಕೆಂದು ವಾದಿಸಿದ್ದುಂಟು. ಜಗತ್ತಿನಲ್ಲಿ ತಮಿಳೇ ಅತ್ಯಂತ ಪ್ರಾಚೀನ ಭಾಷೆಯೆಂದು, ಕಲ್ಲು ಮಣ್ಣು ಹುಟ್ಟುವುದಕ್ಕೆ ಮುಂಚೆ ಅರ್ಥಾತ್ ಜಗತ್ತು ಹುಟ್ಟುವುದಕ್ಕೆ ಮುಂಚೆ(?)ಯೇ ಅದು ಇತ್ತೆಂದು ತಮಿಳು ಸರ್ಕಾರದ ನಿರೂಪವೊಂದು ಹೇಳುತ್ತದೆ.

ದಿನಾಂಕ: ೧೨-೦೯-೨೦೦೪ರಂದು ತಮಿಳಿಗೆ ಶಾಸ್ತ್ರೀಯ ಭಾಷೆಯ ಸ್ಥಾನಮಾನವನ್ನು ಕೇಂದ್ರ ಸರ್ಕಾರ ಘೋಷಿಸಿದಾಗ, ಅದು ತನ್ನ ಮುಂದಿರಿಸಿಕೊಂಡ ಮಾನದಂಡಗಳು ನಾಲ್ಕು.

೧. ಭಾಷೆ ಪುರಾತನವಾದುದಾಗಿರಬೇಕು.
೨. ಅದು ಸ್ವತಂತ್ರವಾಗಿ ಹುಟ್ಟಿ ಬೆಳೆದಿರಬೇಕು.
೩. ಅದು ಯಾವ ಭಾಷೆಯ ಪ್ರಭಾವಕ್ಕೂ ಒಳಪಡಬಾರದು.
೪. ಶ್ರೇಷ್ಠವೂ ಆದ ಸಾಹಿತ್ಯವನ್ನು ಹೊಂದಿರಬೇಕು.

ತಮಿಳಿನ ಪ್ರಾಚೀನತೆಯಾಗಲಿ, ಸ್ವತಂತ್ರತೆಯಾಗಲಿ, ಅನ್ಯಭಾಷೆಯ ಪ್ರಭಾವಕ್ಕದು ಒಳಪಡಲಿಲ್ಲವೆಂಬ ಹೇಳಿಕೆಯಾಗಲಿ, ಸತ್ಯಕ್ಕೆ ದೂರವಾದ ಸಂಗತಿಗಳು. ಕಟ್ಟುಕತೆಗಳ ಆಧಾರದ ಮೇಲೆ ತಮಿಳರು ತಮ್ಮ ನಿರ್ಣಯಗಳನ್ನು ಸಾಧಿಸುತ್ತಾರೆ. ಸರಿಸರಿ ಸಾಹಿತ್ಯದ ಕಾಲ ಕ್ರಿ.ಪೂ. ೧೭೫೦ ರಿಂದ ಕ್ರಿ.ಶ. ಹನ್ನೆರಡನೆಯ ಶತಮಾನದ ತನಕ ಕಾಪಾಡುತ್ತದೆ. ತಮಿಳು ಸಾಹಿತ್ಯ ಕ್ರಿ.ಶ. ೯ನೆಯ ಶತಮಾನಕ್ಕಿಂತ ಹಿಂದೆ ಇದ್ದಿರಲಾರದೆಂದೂ ಪ್ರೊ. ಬಿ.ಜಿ.ಎಲ್. ಸ್ವಾಮಿ ಸೋದಾಹರಣವಾಗಿ ಸ್ಪಷ್ಟಪಡಿಸಿದ್ದಾರೆ. ಕನ್ನಡಿಗರು, ತೆಲುಗರು ಸಹ ಸರಿಸರಿ ಸಾಹಿತ್ಯಕ್ಕೆ ಕಾಣಿಕೆ ಸಲ್ಲಿಸಿದ್ದಾರೆಂದೂ, ಕನ್ನಡದ ಲಿಪಿ ೧ನೆಯ ಶತಮಾನದ ಹೊತ್ತಿಗೆ ಜಾರಿಯಲ್ಲಿದ್ದರೆ, ತಮಿಳು ಲಿಪಿ ೧೦ನೆಯ ಶತಮಾನದಲ್ಲಿ ಬಳಕೆಗೆ ಬಂತೆಂದು ಸುಪ್ರಸಿದ್ಧ ಇತಿಹಾಸ ತಜ್ಞರಾದ ಡಾ. ಎಸ್. ಶೆಟ್ಟರ್ ಸ್ಪಷ್ಟಪಡಿಸಿದ್ದಾರೆ.

ಸರಿಸರಿ ಪದವಾಗಲಿ, ತೊಲ್‌ಕಾಪ್ಪಿಯಂ ಪದದ ದ್ವಿತೀಯಾಂಶವಾಗಲಿ ಸಂಸ್ಕೃತವೆಂಬುದು ಸ್ಪಷ್ಟ. ತಿರುಕ್ಕುರುಳಿನ ಮೇಲೆ ಸಂಸ್ಕೃತದ ನೀತಿಕಾವ್ಯಗಳ ಪ್ರಭಾವವಿದ್ದೇ ಇದೆ. ಪ್ರಾಚೀನ ಕನ್ನಡ ತಮಿಳಿನ ಮೇಲೆ ಪ್ರಭಾವ ಬೀರಿದೆಯೆಂದು ತಮಿಳಿನ ಶಿಖರಪ್ರಾಯದ ವಿದ್ವಾಂಸರಾದ ಐರಾವತಂ ಮಹಾದೇವನ್ ಸೋದಾಹರಣವಾಗಿ ವಿವರಿಸಿದ್ದಾರೆ. ಕ್ರಿ.ಪೂ. ಎರಡನೆಯ ಶತಮಾನದ ಶಾಸನದಲ್ಲಿ 'ಗವುಡಿ' ಎಂಬ ಕನ್ನಡ ಪದವಿದೆ. ಕ್ರಿ.ಶ. ೨ನೆಯ ಶತಮಾನದ ನಾಡನೂರು ಪಟ್ಟ ಶಾಸನದಲ್ಲಿ 'ಕಂಡಿ' 'ತಾಯಿ' ಪದಗಳಿವೆ. ಮತ್ತೊಂದು ಶಾಸನದಲ್ಲಿ 'ಪೊಸಿಲ್' ಪದವಿದೆ.

ತಮಿಳಿಗೆ ಶಾಸ್ತ್ರೀಯ ಸ್ಥಾನಮಾನ ದೊರೆತದ್ದು ಕನ್ನಡಿಗರಿಗೆ ಸಂತೋಷದ ವಿಷಯವೇ ಸರಿ. ಬೇರೆ ಭಾಷೆಗಳಿಗೆ ಒಂದೆರಡು ವರ್ಷಗಳ ತನಕ ಶಾಸ್ತ್ರೀಯ ಸ್ಥಾನಮಾನ ನೀಡಕೂಡದೆಂದು ಹೇಳಿದ್ದು, ಪ್ರಾಚೀನತೆಗೆ ಒಂದೂವರೆ ಸಾವಿರ ವರ್ಷ ಅವಧಿಯನ್ನು ನಿಗದಿಸಿದ್ದು ಅವರ ಸಂಕುಚಿತ ಮನೋಧರ್ಮಕ್ಕೆ ಸಾಕ್ಷಿಯಾಗಿವೆ. ಕನ್ನಡ ಭಾಷೆ ತಮಿಳಿಗಿಂತ ಪ್ರಾಚೀನವೆಂಬುದು ಲಿಪಿ ಮಾತ್ರದಿಂದಲೇ ಸ್ಪಷ್ಟವಾಗುತ್ತದೆ. ಹಲ್ಮಿಡಿ ಶಾಸನ, ವಡ್ಡಾರಾಧನೆ, ಕವಿರಾಜಮಾರ್ಗಗಳು, ಅವುಗಳಲ್ಲಿ ಉಕ್ತಗೊಂಡಿರುವ ಪೂರ್ವಸೂರಿಗಳು, ಚಂಪೂ ಮೊದಲಾದ ಸಾಹಿತ್ಯ ಪ್ರಕಾರಗಳು ಅಶೋಕನ ಶಾಸನದಲ್ಲಿದ್ದ (ಕ್ರಿ.ಪೂ. ೩ನೆಯ ಶತಮಾನ) ಇಸಿಲ ಪದ; ಟಾಲೆಮಿ (ಕ್ರಿ.ಶ. ೧೫೦)ಯ ಗ್ರಂಥದಲ್ಲಿ ಬರುವ ಬಾದಾಮಿ, ಪುನ್ನಾಟ, ಮುದುಗಲ್ ಮೊದಲಾದ ಕನ್ನಡನಾಡಿನ ಊರ ಹೆಸರುಗಳು; ಆಕ್ಸಿರಿಂಕಸ್ ಪ್ಯಾಪಿರೈ ಎಂಬ ಗ್ರೀಕ್ ಪ್ರಹಸನ (ಕ್ರಿ.ಶ. ೧೫೦)ದಲ್ಲಿ ಬರುವ ಕನ್ನಡದ ಮಾತುಗಳು; ಎರಡನೆಯ ಶತಮಾನದ ಸಪ್ತಶತಿಯಲ್ಲಿರುವ ತುಪ್ಪ, ಪೆಟ್ಟು ಮೊದಲಾದ ಕನ್ನಡದ ಪದಗಳು ಇವು ಕನ್ನಡದ ಪ್ರಾಚೀನತೆಯನ್ನು ಮಾತ್ರವಲ್ಲ ತಮಿಳಿನ ಮೇಲೆ ನಡೆದಿರುವ ಕನ್ನಡದ ಪ್ರಭಾವವನ್ನು ಎತ್ತಿತೋರಿಸುತ್ತವೆ. ಪೋರ್ವೋಕ್ತ ಶಾಸನಗಳನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡಿರುವ ಮಹದೇವನ್ ಅವರ ಹೇಳಿಕೆ ಇದು: – 'ದಿ ಪ್ರೆಸೆಂಟ್ ಸ್ಟಡಿ ಹ್ಯಾಸ್ ಬ್ರಾಟ್ ಟು ಲೈಟ್ ದಿ ಹಿತರ್‌ಟು ಅನ್–ಸಸ್ಪೆಕ್ಟೆಡ್ ಇನ್‌ಫ್ಲೂಯೆನ್ಸ್ ಆಫ್ ಓಲ್ಡ್ ಕನ್ನಡ ಆನ್ ಟ್ಯಾಮಿಳ್ ಬ್ರಾಹ್ಮಿ ಇನ್‌ಸ್ಕ್ರಿಪ್ಷನ್ಸ್ ಫ್ರಂ ಎ ಪೀರಿಯಡ್ ಸೆಕೆಂಡ್ ಸೆಂಚ್ಯುರಿ ಬಿಸಿ ಟು ಫೋರ್ತ್ ಸೆಂಚ್ಯುರಿ ಎ.ಡಿ.'

ವಾಸ್ತವವಾಗಿ ತಮಿಳು, ಕನ್ನಡಗಳಂತೂ ಅವಳಿ–ಜವಳಿ ಭಾಷೆಗಳು. ಅಂದಮೇಲೆ ಪುರಾತನತೆಯಲ್ಲಿ ಎರಡೂ ಸಮಭಾಷಾ ಸಮೃದ್ಧಿಯಲ್ಲಿ ಕನ್ನಡವೇ ಮಿಗಿಲು. ಕಾರಣ, ತಮಿಳು ವರ್ಣಮಾಲೆ ಅವೈಜ್ಞಾನಿಕವಾದುದು. ಸಾಹಿತ್ಯ ಶಿಲ್ಪ, ಸಂಗೀತ ಕಲೆಗಳಲ್ಲಿ ಕನ್ನಡ ಇಂಡಿಯಾದಲ್ಲಿಯೇ ಅತ್ಯುತ್ತಮವಾದದ್ದು. ವಚನಸಾಹಿತ್ಯ ದಾಸಸಾಹಿತ್ಯಗಳಿಗೆ ಸಮನಾದ ಸಾಹಿತ್ಯ ಜಗತ್ತಿನಲ್ಲಿಯೇ ಇಲ್ಲ. ಜಗತ್ತಿನ ಸಾಹಿತ್ಯದ ಇತಿಹಾಸದಲ್ಲಿ ಇಪ್ಪತ್ತನೆಯ ಶತಮಾನದ ಕನ್ನಡ ಸಾಹಿತ್ಯವೊಂದು ಸುವರ್ಣಯುಗವೆಂದೇ ಹೇಳಬಹುದು. ಸಂಸ್ಕೃತ, ಗ್ರೀಕ್, ಲ್ಯಾಟಿನ್ ಭಾಷೆಗಳ ಹೊರತಾಗಿ ಕನ್ನಡ ಅತ್ಯಂತ ಪ್ರಾಚೀನ ಭಾಷೆ. ಸಮೃದ್ಧಿಯಲ್ಲಿ ಕನ್ನಡ ಸಾಹಿತ್ಯ ಬೇರೆ ಭಾಷೆಗಳ ಸಾಹಿತ್ಯಕ್ಕೆ ಕಡಿಮೆಯಿಲ್ಲ.

ಶಾಸ್ತ್ರೀಯ ಭಾಷೆಯ ಸ್ಥಾನಮಾನಗಳಿಂದ ತಮಿಳಿಗಾಗಿರುವ ಪ್ರಯೋಜನಗಳು:–

೧. ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಅದಕ್ಕೆ ಪ್ರತಿಷ್ಠೆ ಮನ್ನಣೆಗಳು ದೊರಕುತ್ತವೆ
೨. ಶ್ರೇಷ್ಠದರ್ಜೆಯ ಅಧ್ಯಯನ ಕೇಂದ್ರ ಸ್ಥಾಪನೆಯಾಗುತ್ತದೆ
೩. ಅಂತರರಾಷ್ಟ್ರೀಯ ಮತ್ತು ರಾಷ್ಟ್ರೀಯ ಪ್ರಶಸ್ತಿಗಳ ಪ್ರದಾನ
೪. ಕೇಂದ್ರೀಯ ವಿಶ್ವವಿದ್ಯಾನಿಲಯಗಳನ್ನೊಳಗೊಂಡಂತೆ ಹಲವು ವಿಶ್ವವಿದ್ಯಾನಿಲಯಗಳಲ್ಲಿ ತಮಿಳು ಅಧ್ಯಯನ ಪೀಠಗಳ ಸ್ಥಾಪನೆ
೫. ತಮಿಳಿನ ಪ್ರಾಚೀನ ಗ್ರಂಥ ಸಂಪಾದನೆ, ಮುದ್ರಣ
೬. ಪ್ರಾಚೀನ ತಮಿಳಿನ ಬಗ್ಗೆ ದೃಶ್ಯಚಿತ್ರಗಳ ನಿರ್ಮಾಣ
೭. ಅಂತರ್ಜಾಲ ಬೋಧನಾ ವ್ಯವಸ್ಥೆ



೮. ತೌಲನಿಕ ಅಧ್ಯಯನ
೯. ಸಂಶೋಧನೆಗೆ ಪ್ರಾಶಸ್ತ್ಯ
೧೦. ಭಾಷಾಂತರ
೧೧. ಕಲೆ ವಾಸ್ತುಶಿಲ್ಪ ಪುರಾತತ್ವಗಳ ಅಧ್ಯಯನ ಹಾಗೂ ಸಂಶೋಧನೆ
೧೦. ಭಾಷಾಂತರ
೧೧. ಕಲೆ ವಾಸ್ತುಶಿಲ್ಪ ಪುರಾತತ್ವಗಳ ಅಧ್ಯಯನ ಹಾಗೂ ಸಂಶೋಧನೆ
೧೨. ಭಾಷಾಶಾಸ್ತ್ರದ ಅಧ್ಯಯನ

ಈ ವಿಷಯಗಳ ಜೊತೆಗೆ ಕನ್ನಡ ಇನ್ನು ಕೆಲವು ಯೋಜನೆಗಳನ್ನು ಸೇರಿಸಿಕೊಳ್ಳಬೇಕಾಗುತ್ತದೆ. ಸಾಹಿತ್ಯ ರಚನೆಯಿಂದಲೇ ಕನ್ನಡ ಭಾಷೆಯ ಸರ್ವಾಂಗೀಣ ಅಭಿವೃದ್ಧಿ ಸಾಧ್ಯವಿಲ್ಲ. ಸಾಹಿತಿಗಳಿಗೆ ಸಾಕಷ್ಟು ಪ್ರೋತ್ಸಾಹ ನೀಡಬೇಕಾದದ್ದು ಸಹಜ. ಅದರ ಜತೆಗೆ ಸಾಹಿತ್ಯೇತರ ವಿಷಯಗಳ ಕಡೆಗೆ ಗಮನ ಹರಿಸಬೇಕು. ವೈದ್ಯ, ಕೃಷಿ, ಇಂಜಿನಿಯರಿಂಗ್, ಭೌತವಿಜ್ಞಾನ, ಜೀವವಿಜ್ಞಾನ ಇವೇ ಮೊದಲಾದ ವೈಜ್ಞಾನಿಕ ವಿಷಯಗಳಲ್ಲಿ ಪ್ರಬುದ್ಧ ಗ್ರಂಥಗಳನ್ನು ರಚಿಸಿದವರಿಗೆ, ಈ ವಿಷಯಗಳಲ್ಲಿ ಕನ್ನಡದ ಮೂಲಕ ಸಂಶೋಧನೆ ನಡೆಸಿದವರಿಗೆ, ಅನುವಾದಕರಿಗೆ ಪ್ರೋತ್ಸಾಹಧನ, ಪ್ರಶಸ್ತಿ, ಬಹುಮಾನ, ವೇತನಗಳನ್ನು ನೀಡಬೇಕು. ಭಾಷಾಂತರಕಾರರು ಜಗತ್ತಿನ ಬೇರೆ ಬೇರೆ ಭಾಷೆಗಳನ್ನು ಕಲಿಯಲು ಪ್ರೋತ್ಸಾಹ ನೀಡಬೇಕು. ಗಡಿಪ್ರದೇಶದ ಜನರಿಗೆ ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಸೌಲಭ್ಯಗಳನ್ನು ಒದಗಿಸಬೇಕು. ವಿಜ್ಞಾನ ಗ್ರಂಥಮಾಲೆಗಳ ಪ್ರಕಾಶನಕ್ಕೆ ಸೌಲಭ್ಯಗಳನ್ನು ಕಲ್ಪಿಸಬೇಕು. ಸಾಹಿತ್ಯ ಪರಿಷತ್ತು, ವಿದ್ಯಾವರ್ಧಕ ಸಂಘ, ಕನ್ನಡ ಅಧ್ಯಯನ ಸಂಸ್ಥೆಗಳು ಕನ್ನಡ ವಿಶ್ವವಿದ್ಯಾನಿಲಯ, ರಂಗಾಯಣದಂಥ ಸಂಸ್ಥೆಗಳು ಸಂಶೋಧನೆ ನಡೆಸಲು ಅವಕಾಶ ಕಲ್ಪಿಸಬೇಕು.

ಕಪ್ಪೆ ಅರಭಟ್ಟನ್ ಶಿಷ್ಟಜನ ಪ್ರಿಯನ್
ಕಷ್ಟಜನ ವರ್ಜಿತನ್ ಕಲಿಯುಗವಿಪರೀತನ್ [॥ *]
ವರನ್ತೇಜಸ್ವಿನೋ ಮೃತ್ಯು[ತ್ಯು ] ರ್ನ ತು ಮಾನಾವಖಣ್ಡನಮ್
ಮೃತ್ಯು[ತ್ಯು ] ಸ್ತತ್ಕ್ಷಣಿಕೋ ದುಃಖಮ್ಮಾನಭಂಗನ್ದಿನೇ ದಿನೇ [॥ *]
ಸಾಧುಗೆ ಸಾಧು ಮಾಧೂ[ಧು] ರ್ಯ್ಯನ್ಗೆ[ಙ್ಗೆ] ಮಾಧೂ[ಧು] ರ್ಯ್ಯಂ
ಬಾಧಿಪ್ಪ
ಕಲಿಗೆ ಕಲಿಯುಗ ವಿಪರೀತನ್ಮಾಧವನೀತನ್ಪೆರನಲ್ಲ[॥ *]
ಒಳ್ಳಿತ್ತ ಕೆಯ್ವೊರಾರ್ಪ್ಪೊರ್ಅಲ್ಲದುಮದರಿನ್ತೆ ಬಲ್ಲಿತ್ತು ಕಲಿಗೆ
[ವಿ]ಪರೀತಾ ಪುರಾಕೃತಮಿಲ್ಲಿ ಸನ್ದಿಕ್ಕುಮದು ಬನ್ದು
ಕಟ್ಟಿದ ಸಿಂಘಮನ್ಕೆಟ್ಟೊಡೇನೆಮಗೆನ್ದು ಬಿಟ್ಟವೋಲ್ಕಲಿಗೆ ವಿ-
[ಪ ]ರೀತಂಗಹಿತರ್ಕ್ಕಳ್ಕಿಟ್ಟುರ್ಮ್ಮೆಣ್ತಿರವಿಚಾರಮ್ [॥* ]



ತಮಿಳು ಭಾಷೆಗೆ ಶಾಸ್ತ್ರೀಯ ಸ್ಥಾನಮಾನ ದೊರೆತನಂತರ ನನ್ನ ಮನಸ್ಸು ಕಳವಳಕ್ಕೀಡಾಯಿತು. ಕಳವಳಕ್ಕೆ ಕಾರಣ, ತಮಿಳಿನ ಮೇಲಿನ ಮಾತ್ಸರ್ಯವಲ್ಲ; ಅಷ್ಟೇ ಲಕ್ಷಣಗಳುಳ್ಳ ಕನ್ನಡವನ್ನು ಕಡೆಗಣಿಸಿದ್ದು, ಮತ್ತು ಒಂದು ವರ್ಷ ಬೇರಾವ ಭಾಷೆಗೂ ಈ ಸ್ಥಾನಮಾನ ಕೊಡಕೂಡದೆಂದು ಕೇಂದ್ರ ಸರ್ಕಾರವನ್ನು ನಿಯಂತ್ರಿಸಿದ್ದು, ಲೌಕಿಕ ಲಾಭಗಳ ಪ್ರಶ್ನೆಯಲ್ಲ, ಆತ್ಮಗೌರವದ, ಸ್ವಾಭಿಮಾನದ ಪ್ರಶ್ನೆ. ನವೋದಯಕಾಲದ ಸಾಹಿತಿಗಳು, ಅದರಲ್ಲಿಯೂ ಬಿ.ಎಂ.ಶ್ರೀ. ಮತ್ತು ಕುವೆಂಪು ಅವರು, ಅವರಿಗಿಂತ ಹಿಂದಿದ್ದ ರಾ.ಹ. ದೇಶಪಾಂಡೆಯವರು ಕನ್ನಡಕ್ಕಾಗಿ ನಡೆಸಿದ ಹೋರಾಟದ ನೆನಪು ಜಾಗ್ರತ್, ಸ್ವಪ್ನಾವಸ್ಥೆಗಳಲ್ಲಿ ನನ್ನ ಮನಸ್ಸನ್ನು ಕಲಕುತ್ತಿತ್ತು. ಈ ಸಮಯದಲ್ಲಿ ಅವರು ಬದುಕಿದ್ದರೆ ತೆಪ್ಪಗಿರುತ್ತಿದ್ದರೆ? ಬೀದಿಗಿಳಿಯುತ್ತಿರಲಿಲ್ಲವೆ? ಈಗ ಆ ಬಗ್ಗೆ ಚಿಂತಿಸುವವರನ್ನೇ ಕಾಣೆನಲ್ಲ. ಒಬ್ಬರೂ ಆ ಬಗ್ಗೆ ಸೊಲ್ಲೆತ್ತಲಿಲ್ಲವಲ್ಲ. ಈಗ ನಾವು ನಿಷ್ಕ್ರಿಯರಾದರೆ ಆ ಮಹಾವ್ಯಕ್ತಿಗೆ ದ್ರೋಹವೆಸಗಿ-ದಂತಾಗುವುದಿಲ್ಲವೆ? ಭುವನೇಶ್ವರಿಗೆ, ಕನ್ನಡ ಭಾಷಾ ಸಂಸ್ಕೃತಿಗೆ, ಪಂಪ ಬಸವೇಶ್ವರ ಕುಮಾರವ್ಯಾಸಾದಿ ಪೂರ್ವಕವಿಗಳಿಗೆ ಮೋಸ ಮಾಡಿದಂತಾಗುವುದಿಲ್ಲವೆ? ಅವರು ಬಿಟ್ಟುಹೋಗಿರುವ ಆಸ್ತಿಯ ಬಲದಿಂದ ಪ್ರತಾಪವನ್ನು ಮೆರೆಯುತ್ತಿರುವ ನಾವು ಕೃತಘ್ನರಾಗುವುದಿಲ್ಲವೆ? ಇಂಥ ಹಲವಾರು ಪ್ರಶ್ನೆಗಳು ನನ್ನನ್ನು ಕಾಡತೊಡಗಿದವು. ತಮಿಳಿನ ಪರವಾಗಿ ಕೇಂದ್ರ ಸರ್ಕಾರದ ಘೋಷಣೆ ಹೊರಬಿದ್ದು ಒಂದು ವರ್ಷವಾದರೂ ಯಾವ ಸಾಹಿತಿಯಾಗಲಿ, ಶಿಕ್ಷಕನಾಗಲಿ, ರಾಜಕಾರಣಿಯಾಗಲಿ, ಕನ್ನಡ ಸಾಹಿತ್ಯ ಪರಿಷತ್ತಿನಂಥ ಸಂಸ್ಥೆಗಳಾಗಲಿ, ಚಳುವಳಿಗಾರರಾಗಲಿ ಈ ಬಗ್ಗೆ ಆಸಕ್ತಿ ತೋರಲಿಲ್ಲವಲ್ಲ ಎಂಬ ಚಿಂತೆ ನಿರಂತರವಾಗಿ ಕಾಡತೊಡಗಿತು. ಇನ್ನು ಮೇಲೆ ನಾನು ಸುಮ್ಮನಿರಬಾರದು. 'ದೇಹ ವಯಸ್ಸಾಗಿದೆ; ಶರೀರ ಹಣ್ಣಾಗಿದೆ; ಸತ್ತರೂ ಸರಿಯೆ' ಎಂದು ನಿರ್ಧರಿಸಿ, ದಿ: ೩೦-೧೧-೨೦೦೫ರಂದು ಜಿಲ್ಲಾಧಿಕಾರಿಗಳ ಕಛೇರಿಯ ಮುಂದೆ ಉಪವಾಸಮಾಡಲು ನಿರ್ಧರಿಸಿ ಪತ್ರಿಕೆಗಳಿಗೆ ಆ ಬಗ್ಗೆ ಪ್ರಕಟಣೆ ಕಳಿಸಿದೆ.

ಗೊತ್ತಾದ ದಿನವೂ ಬಂತು. ಎಂ.ಬಿ. ವಿಶ್ವನಾಥ್ ಮೊದಲಾದ ಮಿತ್ರರು ಚಿಟ್ಟೆಚಪ್ಪರ ಆಸನ ವ್ಯವಸ್ಥೆಗಳನ್ನು ನೋಡಿಕೊಂಡರು. ಬೆಳಗ್ಗೆ ೬ ಗಂಟೆಗೆ ಸರಿಯಾಗಿ ನಾನಲ್ಲಿಗೆ ಹೋದೆ. ನನ್ನ ನಿರೀಕ್ಷೆ ಮೀರಿ ಜನ ನೆರೆದರು. ಸಾವಿರಾರು ಮಂದಿ ಬಂದು ಹೋದರು. ಸುತ್ತಮುತ್ತ ಪೊಲೀಸರಿದ್ದರು. ವೈದ್ಯರೊಬ್ಬರು ಬಂದು, ನನ್ನ ದೇಹದ ಪರೀಕ್ಷೆ ಮಾಡುವುದಾಗಿ ತಿಳಿಸಿದರು. ಆಗದೆಂದೆ. ಕೆಲವು ಸಾಹಿತಿಗಳು ಮತ್ತು ರಾಜಕಾರಣಿಗಳು ಭಾಷಣ ಮಾಡಿದರು. ಆ ಕಾರ್ಯಕ್ರಮ ನಿರಂತರವಾಗಿ ನಡೆಯುತ್ತಿತ್ತು. ಕೆಲವು ಮಂದಿ ಸೋದರಿಯರು ಹಾಡುತ್ತಿದ್ದರು. ಒಬ್ಬಿಬ್ಬರು ಮಿತ್ರರು ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನ ಬೇಕಿಲ್ಲವೆಂದು ಗರ್ಜಿಸಿದರು. ಅವರ ಗರ್ಜನೆಯಲ್ಲಿ ತಮ್ಮ ನಾಯಕರ ಪ್ರತಿಧ್ವನಿಯಿತ್ತು. ಹುಬ್ಬಳ್ಳಿಯಿಂದ ಧಾವಿಸಿ ಬಂದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಪ್ರೊ. ಚಂದ್ರಶೇಖರ ಪಾಟೀಲರು ಗಂಭೀರವಾಗಿ, ಉತ್ತೇಜನ ಪೂರ್ವಕವಾಗಿ ಭಾಷಣಮಾಡಿ, ಈ ಆಂದೋಲನವನ್ನು ದೇಜಗೌ ಚಳುವಳಿಯೆಂದು ಕರೆಯುವುದಾಗಿ ನುಡಿದು ನನಗೆ ಧೈರ್ಯ ಹೇಳಿದರು. ಶ್ರೀನಿವಾಸ ಪ್ರಸಾದರು ಸಹ ಪ್ರೋತ್ಸಾಹಕರವಾಗಿ ಮಾತನಾಡಿ, ನನ್ನ ಆರೋಗ್ಯದ ದೃಷ್ಟಿಯಿಂದ ಮಧ್ಯಾಹ್ನ ೪ ಗಂಟೆಯ ಹೊತ್ತಿಗೆ ಉಪವಾಸ ಮುಗಿಸಬೇಕೆಂದು ಒತ್ತಾಯಿಸಿದರು.

ಶ್ರೀ ರಾಜಶೇಖರನ್ ಅವರ ವಿಶ್ವಾಸದ ಮಾತಿಗೆ ಮಣಿದು ಆಮರಣಾಂತ ಉಪವಾಸವನ್ನು ನಿಲ್ಲಿಸಿದೆ. ಉಪವಾಸಾನಂತರ ನಾನು ಅನೇಕ ಮಿತ್ರರನ್ನು ಸಂಪರ್ಕಿಸಿ, ಈ ವಿಷಯದಲ್ಲಿ ಕನ್ನಡಿಗರೆಲ್ಲರೂ ಒಟ್ಟಾಗಿ ಚಳುವಳಿ ಹೂಡಬೇಕೆಂದು ವಿನಂತಿಸಿಕೊಂಡೆ. ಅಧಿಕಾರದಲ್ಲಿದ್ದ ನಾಯಕರಿಗೆ ಅನೇಕ ಪತ್ರಗಳನ್ನು ಬರೆದು, ಸಾಹಿತಿಗಳ ಕೂಗು ಕೇಂದ್ರಕ್ಕೆ ಕೇಳಿಸುವುದಿಲ್ಲ, ನೀವು ಈ ಸಮಸ್ಯೆಯ ಪರಿಹಾರಕ್ಕೆ ಪಣತೊಡಿ, ಇದು ನಾಡಿನ ಭವಿಷ್ಯದ ಪ್ರಶ್ನೆಯೂ ಹೌದು ಎಂದು ತಿಳಿಸಿದೆ.

ಸಂಸತ್ಸದಸ್ಯರ ಪೈಕಿ ಅನಂತಕುಮಾರ್, ಶಿವಣ್ಣ, ವಿಜಯಶಂಕರ್, ಪಾರ್ಲಿಮೆಂಟ್‌ನಲ್ಲಿ ಈ ವಿಷಯ ಎತ್ತಿದ್ದುಂಟು. ಈ ಬಗ್ಗೆ ತುಂಬ ಕಾತರ ವ್ಯಕ್ತಪಡಿಸಿದ್ದಲ್ಲದೆ, ಪ್ರಾಮಾಣಿಕವಾಗಿ, ಸತತವಾಗಿ, ಶ್ರದ್ಧೆಯಿಂದ ದುಡಿದವರೆಂದರೆ ಕೇಂದ್ರ-ರಾಜ್ಯ ಸಚಿವರಾದ ಮಾನ್ಯ ಶ್ರೀ. ಎಂ.ವಿ. ರಾಜಶೇಖರನ್ ಅವರು, ತಮ್ಮ ಆತ್ಮಗೌರವವನ್ನು ಪಣಕ್ಕೊಡ್ಡಿ, ಮಂತ್ರಿಮಂಡಲದ ತಮಿಳು ಸಚಿವರಿಗೆ ಕೈಜೋಡಿಸಿ ಕನ್ನಡಕ್ಕೆ ಅಡ್ಡಬರಬಾರದೆಂದು ವಿನಂತಿ ಮಾಡಿಕೊಂಡಿದ್ದೂ ಉಂಟು.

ಮಾನ್ಯ ಶ್ರೀ ಯಡಿಯೂರಪ್ಪನವರು ಮೊದಲಸಲ ಪ್ರಮಾಣವಚನ ಸ್ವೀಕರಿಸಿದಾಗ, ನಾನವರಲ್ಲಿ ಶಾಸ್ತ್ರೀಯ ಸ್ಥಾನಮಾನದ ಬಗ್ಗೆ ವಿನಂತಿ ಮಾಡಿಕೊಂಡೆ. ಅನಂತರ ಅವರೆಲ್ಲಿ ಹೋದರೂ ಶಾಸ್ತ್ರೀಯ ಸ್ಥಾನಮಾನದ ಮಂತ್ರವನ್ನೇ ಜಪಿಸುತ್ತಿದ್ದರು. ಕೆಲವು ಸಾಹಿತಿಗಳನ್ನು, ಶಾಸಕರನ್ನು ಒಳಗೊಂಡ ನಿಯೋಗವನ್ನವರು ದೆಹಲಿಗೆ ಕರೆದೊಯ್ದರು. ಅನಂತರ ಖರ್ಗೆಯವರೂ ಕೆಲವು ಶಾಸಕರನ್ನು ಕರೆದುಕೊಂಡು ಹೋಗಿ, ಸಂಬಂಧಪಟ್ಟವರಲ್ಲಿ ಈ ವಿಷಯ ಪ್ರಸ್ತಾಪಿಸಿದರಂತೆ. ಶಾಸ್ತ್ರೀಯ ಭಾಷೆಗೆ ಸಂಬಂಧಿಸಿದ ತಜ್ಞಸಮಿತಿಗೆ ಮುಖ್ಯವಾಗಿ ಡಾ. ಉದಯನಾರಾಯಣಸಿಂಗ್ ಅವರಿಗೆ ಕೇಂದ್ರ ಸರ್ಕಾರಕ್ಕೆ ವಂದನೆಗಳನ್ನು ಸಲ್ಲಿಸಬೇಕು. ಕೊನೆಗೆ ಸಾಹಿತಿಗಳು ಹಾಗೂ ಶಾಸಕರೊಡನೆ ರಾಜಘಾಟ್ ಬಳಿ ಧರಣಿ ಹೂಡುವುದಾಗಿ ಯಡಿಯೂರಪ್ಪನವರು ಗುಡುಗುತ್ತಿದ್ದಂತೆ ಕೇಂದ್ರ ಸರ್ಕಾರದ ತೀರ್ಮಾನ ಪ್ರಕಟವಾದದ್ದು ಸಂತೋಷದ ಸಂಗತಿ. ಈ ತೀರ್ಮಾನ ಇತಿಹಾಸದಲ್ಲಿ ಶಾಶ್ವತವಾಗಿ ಉಳಿಯುತ್ತದೆ. ಹೋದಲೆಲ್ಲಾ ಸಾಮಾನ್ಯ ಜನ ಶಾಸ್ತ್ರೀಯ ಸ್ಥಾನಮಾನದ ವಿಚಾರ 'ಏನಾಯಿತೆಂದು' ಕೇಳುತ್ತಿದ್ದರು. ಕನ್ನಡಿಗರೆಲ್ಲರೂ ಈ ಬಗ್ಗೆ ಎಚ್ಚೆತ್ತಿದ್ದರೆಂಬುದಂತು ಸತ್ಯ. ಜನಮನದ ಶಕ್ತಿ ಮೇಣವರಭೀಪ್ಸೆಯು ಮಹಾಸಿದ್ಧಿಗಳಿಗೆ ಕಾರಣವೆಂಬುದನ್ನು ಮರೆಯಲಾಗದು. ಕಳೆದ ಒಂದು ಶತಮಾನದಿಂದಲೂ ಕನ್ನಡಕ್ಕಾಗಿ ಹೋರಾಡಿದ ಬಿ.ಎಂ.ಶ್ರೀ, ಕುವೆಂಪು, ದೇಶಪಾಂಡೆ, ಆಲೂರು ವೆಂಕಟರಾವ್, ಚೆನ್ನಬಸಪ್ಪ ಮೊದಲಾದವರಿಗೆ ಕನ್ನಡದ ಪ್ರಾಚೀನತೆಯ ಬಗ್ಗೆ ಸಂಶೋಧನೆ ನಡೆಸಿದ ಫಾದರ್‌ಹೆರಾಸ್, ಕಿಟ್ಟೆಲ್, ರೈಸ್, ರಾ. ನರಸಿಂಹಾಚಾರ್, ವೆಂಕಟಸುಬ್ಬಯ್ಯ, ಗೋವಿಂದ ಪೈ, ಡಿ.ಎಲ್.ಎನ್, ತೀ.ನಂ.ಶ್ರೀ, ಶ್ರೀಕಂಠಶಾಸ್ತ್ರೀ, ಎಂ.ಎಚ್. ಕೃಷ್ಣ, ಹಳಕಟ್ಟಿ, ಹಿರೇಮಠ, ಕಲ್ಬುರ್ಗಿ, ವೆಂಕಟಾಚಲಶಾಸ್ತ್ರೀ, ಚಿದಾನಂದಮೂರ್ತಿ, ಶೇಷಗಿರಿರಾವ್, ತಾರಾನಾಥ್, ಆರ್‌ವಿಎಸ್ ಸುಂದರಂ, ಹಂಪನಾ, ಲಿಂಗದೇವರು ಹಳೇಮನೆ, ಮುಂತಾದವರಿಗೆ, ಕವಿಋಷಿ ಸಂತರಿಗೆ, ನಾಡು ನುಡಿಗಳ ನಿಜಭಕ್ತರಾದ ರಾಜಕೀಯ ನಾಯಕರಿಗೆ ಈ ವಿಜಯೋತ್ಸವ ಸಂದರ್ಭದಲ್ಲಿ ನಮನ ಸಲ್ಲಿಸುತ್ತ, ನಾಡುನುಡಿಗಳಿಗೆ ಧಕ್ಕೆಯೊದಗಿದಾಗ, ಕೇಂದ್ರ ಸರ್ಕಾರದಿಂದ ತಾರತಮ್ಯ ನೀತಿ ತಲೆದೋರಿದಾಗ, ಕನ್ನಡಿಗರೆಲ್ಲರೂ ಸಂಕುಚಿತ ಭಾವನೆಗಳನ್ನು ತೊರೆದು ಒಂದಾಗಿ ಸರ್ವತ್ಯಾಗಕ್ಕೂ ಸಿದ್ಧರಾಗಬೇಕೆಂದು ಹಾರೈಸುತ್ತ, ಸಿರಿಗನ್ನಡಂ ಗೆಲ್ಗೆ, ಸಿರಿಗನ್ನಡಂ ಬಾಳ್ಗೆ ಎಂದು ಪ್ರಾರ್ಥಿಸುತ್ತೇನೆ*.

ಸೌಜನ್ಯ: ಕರ್ನಾಟಕ ಲೋಚನ,
ಸಂಪುಟ ೨೨, ಸಂಚಿಕೆ ೦೨.

# ಕನ್ನಡ ಬೆಳೆಸುವ ಬಗೆ

**ಪ್ರಜಾವಾಣಿ**

ಅಂತ ವಿಶ್ವಾಸಾರ್ಹ ಕನ್ನಡ ದಿನಪತ್ರಿಕೆ

ಕನ್ನಡ ಭಾಷೆಗೆ ಕೊನೆಗೂ ಅಭಿಜಾತ ಸ್ಥಾನ ದೊರೆತಿದೆ. ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನ ನೀಡಲು ಕೇಂದ್ರ ಸರ್ಕಾರ ಒಪ್ಪಿಗೆ ಕೊಡುವ ಮೂಲಕ ರಾಜ್ಯದ ಜನತೆಗೆ ರಾಜ್ಯೋತ್ಸವದ ಕೊಡುಗೆ ನೀಡಿದೆ. ಸಹಜವಾಗಿಯೇ ಕೇಂದ್ರದಲ್ಲಿ ಆಡಳಿತದಲ್ಲಿರುವ ಕಾಂಗ್ರೆಸ್ ನೇತೃತ್ವದ ಸರ್ಕಾರ, ಹಾಗೆಯೇ ರಾಜ್ಯದಲ್ಲಿ ಆಡಳಿತದಲ್ಲಿರುವ ಬಿಜೆಪಿ ಸರ್ಕಾರ ಈ ನಿರ್ಧಾರದ ರಾಜಕೀಯ ಲಾಭ ಗಳಿಸಲು ಪ್ರಯತ್ನಿಸುತ್ತಿವೆ. ರಾಜಕೀಯ ಲಾಭಗಳೇನೇ ಇದ್ದರೂ ಭಾವನಾತ್ಮಕವಾಗಿ ಕನ್ನಡಿಗರು ಈ ನಿರ್ಧಾರದಿಂದ ಸಂತೋಷಗೊಂಡಿದ್ದಾರೆ. ಅಷ್ಟರಮಟ್ಟಿಗೆ ಇದೊಂದು ಕೇಂದ್ರ ಸರ್ಕಾರದ ಜನಮೆಚ್ಚುಗೆಯ ನಿರ್ಧಾರ ಎನ್ನುವುದರಲ್ಲಿ ಅನುಮಾನವಿಲ್ಲ. ಈ ನಿರ್ಧಾರ ಜಾರಿಗೆ ಬರಲು ಒಂದು ತಡೆ ಇದೆ. ಕನ್ನಡ ಮತ್ತು ತೆಲುಗಿಗೆ ಶಾಸ್ತ್ರೀಯ ಸ್ಥಾನಮಾನ ನೀಡುವುದನ್ನು ಪ್ರಶ್ನಿಸಿರುವ ಸಾರ್ವಜನಿಕ ಹಿತಾಸಕ್ತಿಯ ಅರ್ಜಿಯೊಂದು ಮದ್ರಾಸ್ ಹೈಕೋರ್ಟಿನ ವಿಚಾರಣೆಯಲ್ಲಿದೆ. ಕನ್ನಡ ಮತ್ತು ತೆಲುಗಿಗೆ ಶಾಸ್ತ್ರೀಯ ಸ್ಥಾನಮಾನ ನೀಡಿಕೆ ನಿರ್ಧಾರ ಈ ಪ್ರಕರಣದ ಅಂತಿಮ ತೀರ್ಪಿಗೆ ಅನ್ವಯವಾಗಿರುತ್ತದೆ ಎಂದು ಕೇಂದ್ರ ಸರ್ಕಾರವೇ ಹೇಳಿದೆ. ಆ ಸಾರ್ವಜನಿಕ ಹಿತಾಸಕ್ತಿ ಅರ್ಜಿ ವಜಾ ಮಾಡುವಂತೆ ಕೋರಿ ಕೇಂದ್ರ ಸರ್ಕಾರ ಅರ್ಜಿ ಸಲ್ಲಿಸಬೇಕಿದೆ. ಈ ವಿಚಾರದಲ್ಲಿ ಆಂಧ್ರ ಮತ್ತು ಕರ್ನಾಟಕ ಸರ್ಕಾರಗಳು ಕೇಂದ್ರಕ್ಕೆ ನೆರವಾಗಬೇಕು ಅಷ್ಟೇ ಅಲ್ಲ, ಒತ್ತಡವನ್ನೂ ತರಬೇಕಿದೆ. ಸರ್ಕಾರದ ಹೊಣೆ ಹೊತ್ತಿರುವವರು ಕನ್ನಡದ ಹೆಸರಲ್ಲಿ ಕುಣಿಯುವುದನ್ನು ಬಿಟ್ಟು ಈ ದಿಕ್ಕಿನಲ್ಲಿ ಕಾರ್ಯತತ್ಪರವಾಗಬೇಕಿದೆ. ಕನ್ನಡಕ್ಕೆ ಶಾಸ್ತ್ರೀಯ ಸ್ಥಾನ ದೊರಕುವುದರಿಂದ ಕನ್ನಡ ಭಾಷೆ, ಸಂಸ್ಕೃತಿ, ಪ್ರದೇಶ ಮತ್ತು ಕನ್ನಡಿಗರ ಬದುಕಿನ ಅಧ್ಯಯನಕ್ಕೆ ಒಂದು ಉನ್ನತ ಮಟ್ಟದ ವೇದಿಕೆ ರೂಪುಗೊಳ್ಳಲಿದೆ. ಕೇಂದ್ರದಿಂದ ಅದಕ್ಕಾಗಿ ಸಾಕಷ್ಟು ಆರ್ಥಿಕ ನೆರವು ಸಿಗಲಿದೆ. ಇದನ್ನು ಕರ್ನಾಟಕದ ಅಧ್ಯಯನಕಾರರು ಹೇಗೆ ಬಳಸಿಕೊಂಡು ಉನ್ನತ ಮಟ್ಟದ ಸಂಶೋಧನೆ ನಡೆಸುತ್ತಾರೆ ಎನ್ನುವುದರ ಮೇಲೆ ಕನ್ನಡಕ್ಕೆ ಶಾಸ್ತ್ರೀಯ ಸ್ಥಾನ ಮಾನ ದೊರಕಿದ್ದರ ಸಾರ್ಥಕತೆ ಅಡಗಿದೆ.

ಪ್ರತಿ ಸಾರಿಯಂತೆ ಈ ವರ್ಷವೂ ಕನ್ನಡ ರಾಜ್ಯೋತ್ಸವ ಆಚರಣೆ ಭಾವಾವೇಶದಿಂದ ನಡೆದಿದೆ. ಮುಖ್ಯಮಂತ್ರಿಯವರು ಕನ್ನಡದ ಅಭಿವೃದ್ಧಿ ಹೆಸರಿನಲ್ಲಿ ಇಂತಿಂಥ ಬಾಬ್ತಿಗೆ ಇಷ್ಟಿಷ್ಟು ಎಂದು ಮಡಿಗಾಸು ಪ್ರಕಟಿಸಿದ್ದಾರೆ. ಕನ್ನಡದ ಅಭಿವೃದ್ಧಿಯ ಸಮಸ್ಯೆಗಳು ಏನು ಎನ್ನುವುದೇ ಸರ್ಕಾರಕ್ಕೆ ತಿಳಿದಂತೆ ಕಾಣುತ್ತಿಲ್ಲ. ಕನ್ನಡದ ಅಭಿವೃದ್ಧಿಗೂ ಕರ್ನಾಟಕದ ಅಭಿವೃದ್ಧಿಗೂ ನೇರ ಸಂಬಂಧವಿದೆ. ಮೊದಲು ಕರ್ನಾಟಕವನ್ನು ಅಭಿವೃದ್ಧಿಯ ಮುಂಚೂಣಿಗೆ ತರಬೇಕು. ಆಗ ಕನ್ನಡ ತಾನೇ ತಾನಾಗಿ ಪ್ರತಿಷ್ಠೆಯ ಮತ್ತು ಹೆಮ್ಮೆಯ ಭಾಷೆಯಾಗಿ ಜನರ ಮಧ್ಯೆ ಅರಳುತ್ತದೆ. ಕನ್ನಡವನ್ನು ಜನರ ದಿನನಿತ್ಯದ ಉಪಯುಕ್ತ ಭಾಷೆಯನ್ನಾಗಿ ಮಾಡಬೇಕು. ಇದಾಗಬೇಕಾದರೆ ಕನ್ನಡ ಆಡಳಿತ ಭಾಷೆಯಾಗಬೇಕು. ಕನ್ನಡದ ಅಭಿವೃದ್ಧಿ ಬಗ್ಗೆ ಸರ್ಕಾರ ನಡೆಸುವವರಲ್ಲಿ ಪ್ರಾಮಾಣಿಕತೆ, ಬದ್ಧತೆ ಬೇಕು. ಹಣ, ಆಸ್ತಿ ಮಾಡುವುದನ್ನೇ ದೊಡ್ಡ ದಂಧೆಯನ್ನಾಗಿಸಿಕೊಂಡಿರುವ ರಾಜಕಾರಣಿಗಳು, ಅಧಿಕಾರಿಗಳು ಕನ್ನಡವನ್ನು ಉಳಿಸಿ, ಬೆಳೆಸುತ್ತಾರೆಂಬ ಬಗ್ಗೆ ಸಾರ್ವಜನಿಕರಲ್ಲಂತೂ ವಿಶ್ವಾಸವಿಲ್ಲ. ಬಿಜೆಪಿ ತಾನು ಭಿನ್ನ ಎನ್ನುವುದಾದರೆ ಜನರಲ್ಲಿ ವಿಶ್ವಾಸ ಮೂಡಿಸುವಂಥ ಕನ್ನಡದ ಕೆಲಸ ಮಾಡಬೇಕು.*

* ಸೌಜನ್ಯ: ಪ್ರಜಾವಾಣಿ, ಸಂಪಾದಕೀಯ, ೩.೧೧.೨೦೦೮.

# ಕನ್ನಡಕ್ಕೆ ಶಾಸ್ತ್ರೀಯ ಸ್ಥಾನದ ಗರಿ

ಬಹುಜನ
ಕನ್ನಡಿಗರು
ಪ್ರಗತಿಪರ ಕನ್ನಡ ಪಾಕ್ಷಿಕ

ಬ್ರಿಟಿಷರ ಅಧಿಕಾರಾವಧಿಯಲ್ಲಿ ಬೇರೆ ಬೇರೆ ಪ್ರಾಂತ್ಯಗಳ ಆಡಳಿತ ವ್ಯಾಪ್ತಿಯಲ್ಲಿ ಹರಿದು ಹಂಚಿಹೋಗಿದ್ದ ಕನ್ನಡ ಮಾತನಾಡುವ ಬಹುತೇಕ ಪ್ರದೇಶಗಳು ಕನ್ನಡದ ಹಿರಿಯರನೇಕರ ಸತತ ಹೋರಾಟ ಹಾಗೂ ತ್ಯಾಗ ಬಲಿದಾನಗಳ ಮೂಲಕ ಒಂದೇ ಆಡಳಿತದಡಿ ಬಂದು ಸೇರಿದ ನವಂಬರ್ ೧, ೧೯೫೬ ಕರ್ನಾಟಕ ರಾಜ್ಯ ಪುನರೋದಯ ದಿನ. ಕನ್ನಡಿಗರು ಈ ದಿನವನ್ನು 'ರಾಜ್ಯೋತ್ಸವ'ದ ಹೆಸರಿನಲ್ಲಿ ಪ್ರತಿವರ್ಷವೂ ಸಂಭ್ರಮಿಸುತ್ತಾರೆ. ಈ ಬಾರಿ ಅದರ ಹಿಂದಿನ ದಿನವಾದ ಅಕ್ಟೋಬರ್ ೩೧, ೨೦೦೮ರಂದು ಭಾರತ ಒಕ್ಕೂಟ ಸರ್ಕಾರ ಕನ್ನಡಕ್ಕೆ ಶಾಸ್ತ್ರೀಯ ಭಾಷಾ ಸ್ಥಾನಮಾನವನ್ನು ಘೋಷಿಸಿರುವುದು ಸಮಸ್ತ ಕನ್ನಡಿಗರಿಗೆ ಕರ್ನಾಟಕ ರಾಜ್ಯೋತ್ಸವದ ಕೊಡುಗೆಯನ್ನು ನೀಡಿದಂತಾಗಿದೆ. ಕಳೆದ ನಾಲ್ಕು ವರ್ಷಗಳ ಸುಮಾರಿನಿಂದ ರಾಜ್ಯದ ಉದ್ದಗಲಕ್ಕೂ ಸಾಹಿತಿಗಳು, ಕಲಾವಿದರು, ಕನ್ನಡಪರ ಸಂಘಟನೆಗಳು, ಕನ್ನಡ ಪರ ಚಿಂತಕರು ನಿರಂತರವಾಗಿ ನಡೆಸಿಕೊಂಡು ಬಂದ ಹೋರಾಟಕ್ಕೆ ತಡವಾಗಿಯಾದರೂ ಭಾರತ ಸರಕಾರ ಮಣಿದಿದೆ. ಈ ಪ್ರಯತ್ನದಲ್ಲಿ ಕೇಂದ್ರದ ಮಾಜಿ ಸಚಿವ ಎಂ.ವಿ. ರಾಜಶೇಖರನ್ ಅವರ ಪಾತ್ರ ಗಣನೀಯವಾದುದು. ಸಚಿವೆ ಅಂಬಿಕಾ ಸೋನಿಯವರು ಸಂಜೆ ದೆಹಲಿಯಲ್ಲಿ ಸುದ್ದಿಗೋಷ್ಠಿಯಲ್ಲಿ ಈ ಸಂತಸದ ಸುದ್ದಿಯನ್ನು ಪ್ರಕಟಿಸುತ್ತಿದ್ದಂತೆಯೇ ಕನ್ನಡ ಕಾರ್ಯಕರ್ತರು ನಾಡಿನೆಲ್ಲೆಡೆ ಸಂಭ್ರಮದಿಂದ ಕುಣಿದಾಡಿದರು. ಪರಸ್ಪರ ದೂರವಾಣಿಯಲ್ಲಿ ಹಾಗೂ ಭೇಟಿಯಾಗಿ ಸಂತಸವನ್ನು, ಶುಭಾಶಯವನ್ನು ವಿನಿಮಯ ಮಾಡಿಕೊಂಡರು. ಸಿಹಿಯನ್ನು ಹಂಚಿಕೊಂಡು, ಪಟಾಕಿ ಸಿಡಿಸಿ ಸಂಭ್ರಮಿಸಿದರು. ಕಳೆದ ಕೆಲವು ದಿನಗಳಿಂದ ಕನ್ನಡ ಸಾಹಿತ್ಯ, ಸಾಂಸ್ಕೃತಿಕ ಕ್ಷೇತ್ರಕ್ಕೆ ಸಂಬಂಧಿಸಿದ ಯಾವುದೇ ಸಭೆ ಸಮಾರಂಭಗಳಲ್ಲಿಯೂ ಕನ್ನಡಕ್ಕೆ ಶಾಸ್ತ್ರೀಯ ಭಾಷಾ ಸ್ಥಾನಮಾನ ನೀಡದೆ ಭಾರತ ಸರಕಾರ ಕನ್ನಡದ ಬಗೆಗೆ ಮಲತಾಯಿ ಧೋರಣೆ ತೋರುತ್ತಿರುವ ಬಗೆಗೆ ಪ್ರಸ್ತಾಪವಾಗದೇ ಇರಲಿಲ್ಲ. ಕನ್ನಡ ಸಾಹಿತ್ಯ ಪರಿಷತ್ತು ಮೊದಲುಗೊಂಡು ಅನೇಕ ಕನ್ನಡ ಪರ ಸಂಘಟನೆಗಳು ನವೆಂಬರ್ ೧ರಿಂದ ಹಿಡಿದು ಮಾಸಾಂತ್ಯದುದ್ದಕ್ಕೂ ಪ್ರತಿಭಟನಾ ಕಾರ್ಯಕ್ರಮಗಳನ್ನು

ಹಮ್ಮಿಕೊಂಡಿದ್ದವು. ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪನವರು ನ. ೫ರಂದು ದೆಹಲಿಗೆ ಸರ್ವಪಕ್ಷ ನಿಯೋಗ ಕೊಂಡೊಯ್ಯಲು ನಿಶ್ಚಯಿಸಿದ್ದರು. ಆದರೆ ಒಕ್ಕೂಟ ಸರ್ಕಾರ ಇವು ಯಾವುದಕ್ಕೂ ಅವಕಾಶ ನೀಡದ ಹಾಗೆ ರಾಜ್ಯೋತ್ಸವದ ಹಿಂದಿನ ದಿನವೇ ಕನ್ನಡಕ್ಕೆ ಶಾಸ್ತ್ರೀಯ ಭಾಷಾ ಸ್ಥಾನಮಾನ ಘೋಷಿಸಿತು. ಮುಖ್ಯಮಂತ್ರಿಯವರು ದೆಹಲಿಗೆ ನಿಯೋಗ ಕರೆದೊಯ್ಯುವುದನ್ನು ರದ್ದುಗೊಳಿಸಿ, ಪ್ರಧಾನಿ ಡಾ॥ ಮನಮೋಹನ್‌ಸಿಂಗ್ ಅವರನ್ನು ಅಭಿನಂದಿಸಿದ್ದಾರೆ.

ಕಳೆದ ಲೋಕಸಭಾ ಸಾರ್ವತ್ರಿಕ ಚುನಾವಣೆಯ ಬಳಿಕ ಭಾರತ ಒಕ್ಕೂಟದಲ್ಲಿ ಯಾವೊಂದು ಪಕ್ಷವೂ ಸರಕಾರ ರಚಿಸಲು ಸಾಧ್ಯವಾಗದ ಸ್ಥಿತಿಯಲ್ಲಿದ್ದಾಗ ಏಕೈಕ ಬಹುಮತೀಯ ಪಕ್ಷವಾಗಿ ಹೊರಹೊಮ್ಮಿದ್ದ ಕಾಂಗ್ರೆಸ್ ಪಕ್ಷ ಇತರ ಸಮಾನ ಮನಸ್ಕ ಪಕ್ಷಗಳ ಜೊತೆಗೂಡಿ ಸರ್ಕಾರ ರಚಿಸಲು ಮುಂದಾದಾಗ ತಮಿಳುನಾಡಿನಲ್ಲಿ ಹೆಚ್ಚು ಲೋಕಸಭಾ ಸ್ಥಾನಗಳನ್ನು ಗಳಿಸಿಕೊಂಡಿದ್ದ 'ದ್ರಾವಿಡ ಮುನ್ನೇತ್ರ ಕಳಗಂ' ಪಕ್ಷದ ಮುಖಂಡ ಎಂ. ಕರುಣಾನಿಧಿಯವರು ಕಾಂಗ್ರೆಸ್ಸನ್ನು ಬೆಂಬಲಿಸಲು ವಿಧಿಸಿದ ಷರತ್ತುಗಳಲ್ಲಿ ತಮಿಳಿಗೆ ಶಾಸ್ತ್ರೀಯ ಭಾಷಾ ಸ್ಥಾನಮಾನ ನೀಡಬೇಕೆಂಬುದು ಪ್ರಧಾನವಾಗಿದ್ದಿತು. ಅದರಂತೆ ಎಡ ಪಕ್ಷಗಳು ಹಾಗೂ ಇನ್ನಿತರ ಪ್ರಾದೇಶಿಕ ಪಕ್ಷಗಳ ಸಹಕಾರದೊಂದಿಗೆ ಡಾ॥ ಮನಮೋಹನ್ ಸಿಂಗ್ ನೇತೃತ್ವದಲ್ಲಿ ಕಾಂಗ್ರೆಸ್ಸು ಸಂಯುಕ್ತ ಪ್ರಗತಿಪರ ಒಕ್ಕೂಟ (ಯುಪಿಎ) ರಚಿಸಿಕೊಂಡು ಸರ್ಕಾರ ರಚಿಸಿದ ತರುವಾಯದ ಮೊದಲ ಸಂಪುಟ ಸಭೆಯಲ್ಲೇ (೧೨.೧೦.೨೦೦೪) ತಮಿಳಿಗೆ ಶಾಸ್ತ್ರೀಯ ಭಾಷಾ ಸ್ಥಾನಮಾನ ಘೋಷಿಸಿತು. ತಮಿಳನ್ನು ಶಾಸ್ತ್ರೀಯ ಭಾಷೆ ಎಂದು ಘೋಷಿಸಿದ ಕೂಡಲೇ ಪ್ರಾಚೀನತೆ, ಸಾಹಿತ್ಯ ಸಂಪತ್ತು ಇತ್ಯಾದಿ ಎಲ್ಲ ವಿಚಾರಗಳಲ್ಲಿ ತಮಿಳಿಗೆ ಸರಿಮಿಗಿಲಾದ ಕನ್ನಡಕ್ಕೂ ಆ ಸ್ಥಾನಮಾನ ನೀಡಬೇಕೆಂದು ಕನ್ನಡ ಸಾಹಿತಿಗಳು ಹಾಗೂ ಕನ್ನಡ ಪರ ಹೋರಾಟಗಾರರು ಹಕ್ಕೊತ್ತಾಯ ಮಂಡಿಸತೊಡಗಿದರು. ತಮಿಳಿಗೆ ಶಾಸ್ತ್ರೀಯ ಸ್ಥಾನಮಾನ ನೀಡಿದ ಸಂದರ್ಭದಲ್ಲಿ ಭಾರತ ಸರ್ಕಾರ ಅನುಸರಿಸಿದ ಮಾನದಂಡ ಹೀಗಿದ್ದಿತು. ೧. ಒಂದು ಭಾಷೆಯ ಪಠ್ಯಗಳು, ದಾಖಲಾದ ಇತಿಹಾಸ ಒಂದು ಸಾವಿರ ವರ್ಷಕ್ಕೂ ಪುರಾತನದ್ದಾಗಿರಬೇಕು. ೨. ಪುರಾತನ ಸಾಹಿತ್ಯ/ ಪಠ್ಯಗಳು ತಲೆ ತಲೆಮಾರುಗಳ ಜನರಿಂದ ಅತ್ಯಂತ ಮೌಲಿಕ ಪರಂಪರೆಯೆಂದು ಪರಿಗಣಿತವಾಗಿರಬೇಕು. ೩. ಸಾಹಿತ್ಯಿಕ ಪರಂಪರೆ ಸೋಪಜ್ಞವಾಗಿದ್ದು, ಯಾವುದೇ ಬೇರೊಂದು ಭಾಷೆ/ ಸಮುದಾಯದಿಂದ ಸ್ವೀಕಾರವಾಗಿರಬಾರದು ಮತ್ತು ೪. ಶಾಸ್ತ್ರೀಯ ಭಾಷೆ ಮತ್ತು ಸಾಹಿತ್ಯ ಪ್ರಸ್ತುತ ಭಾಷೆ ಮತ್ತು ಸಾಹಿತ್ಯಕ್ಕಿಂತ ಭಿನ್ನವಾಗಿರಬೇಕು ಅಥವಾ ಇತ್ತೀಚಿನ ಸ್ವರೂಪಕ್ಕಿಂತ ಅಥವಾ ಅದರಿಂದ ಬೆಳವಣಿಗೆ ಹೊಂದಿದ ಭಾಷೆಗಳಿಗಿಂತ ಬೇರೆಯದೇ ಎನ್ನಿಸುವಹಾಗಿರಬೇಕು (ಉದಾಹರಣೆಗೆ ಲ್ಯಾಟಿನ್‌ಗಿಂತ ರೋಮನ್, ಸಂಸ್ಕೃತ ಪಾಳಿಗಿಂತ ಪ್ರಾಕೃತ ಮತ್ತು ಆಧುನಿಕ ಇಂಡೋ ಆರ್ಯನ್ ಭಾಷೆಗಳು ಭಿನ್ನವಾಗಿರುವ ಹಾಗೆ). ತಮಿಳಿಗೆ ಶಾಸ್ತ್ರೀಯ ಸ್ಥಾನಮಾನ ನೀಡುವ ಸಲುವಾಗಿಯೇ ಈ ಮೇಲಿನ ಮಾನದಂಡವನ್ನು ರೂಪಿಸಲಾಯಿತೆಂಬ ಮಾತುಗಳು ಕೇಳಿಬರುತ್ತಿವೆ. ಅಚ್ಚರಿ ಎಂದರೆ ಜಗತ್ತಿನಾದ್ಯಂತ ಅದಕ್ಕೆ ಮುಂಚಿನಿಂದಲೇ ಶಾಸ್ತ್ರೀಯ ಭಾಷೆಯೆಂಬುದಾಗಿ ಪರಿಗಣಿಸಿ ಐರೋಪ್ಯ ಹಾಗೂ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿನ ವಿಶ್ವವಿದ್ಯಾಲಯಗಳಲ್ಲಿ ಅಧ್ಯಯನಕ್ಕೆ ಅವಕಾಶ ಕಲ್ಪಿಸಲಾಗಿದ್ದ 'ಸಂಸ್ಕೃತ'ಕ್ಕೆ ಭಾರತ ಸರ್ಕಾರ ತಮಿಳಿಗೆ ಈ ಸ್ಥಾನಮಾನ ನೀಡಿದ ಸಂದರ್ಭದಲ್ಲಿ ನೀಡದೆಯೇ ಒಂದು ವರ್ಷದ ಬಳಿಕ ಘೋಷಿಸಿತು. ಇದರಿಂದಲೇ ತಮಿಳಿಗೆ ಶಾಸ್ತ್ರೀಯ ಸ್ಥಾನಮಾನ ಘೋಷಿಸಿದುದು ಭಾಷಾ ಇತಿಹಾಸದ ಪರಂಪರೆಯ ದೃಷ್ಟಿಯಿಂದಲ್ಲದೆ ಕೇವಲ ರಾಜಕೀಯ ಒತ್ತಡದಿಂದ ಎಂಬುದು ಎಲ್ಲರಿಗೂ ಮನವರಿಕೆಯಾಯಿತು. ತಮಿಳನ್ನು ಶಾಸ್ತ್ರೀಯ ಭಾಷೆ ಎಂದು ಘೋಷಿಸಿದ ತರುವಾಯ ಕನ್ನಡ ಸಾಹಿತಿಗಳು ಬುದ್ಧಿಜೀವಿಗಳು, ಕನ್ನಡ ಪರ ಸಂಘಟಣೆಗಳ ಪ್ರಮುಖರು ಕನ್ನಡ ಕಾರ್ಯಕರ್ತರಿಂದ ಕನ್ನಡಕ್ಕೂ ಶಾಸ್ತ್ರೀಯ ಭಾಷಾ ಸ್ಥಾನಮಾನ ನೀಡಬೇಕೆಂಬ ಹಕ್ಕೊತ್ತಾಯ ಮಂಡಿತವಾಯಿತು. ಕನ್ನಡದ ಹಿರಿಯ ಸಾಹಿತಿಗಳ ಸಮೂಹ ಭಾರತ ಸರ್ಕಾರ ಶಾಸ್ತ್ರೀಯ ಭಾಷಾ ಸ್ಥಾನಮಾನ ನೀಡಲು ರೂಪಿಸಿದ ಮಾನದಂಡಕ್ಕನುಗುಣವಾಗಿ ಮಾಹಿತಿಯನ್ನು ಕಲೆಹಾಕಿ ಅತ್ಯಂತ ತಾರ್ಕಿಕ ರೂಪದಲ್ಲಿ ತನ್ನ ಹಕ್ಕೊತ್ತಾಯವನ್ನು ಮಂಡಿಸಿತು. ಈ ಒತ್ತಾಯ ಬಂದೊಡನೆಯೇ ಭಾರತ ಸರ್ಕಾರ ಬೇರೆ ಬೇರೆ ಭಾರತೀಯ ಭಾಷೆಗಳಿಂದಲೂ ಈ ರೀತಿಯ ಒತ್ತಡ ಬರಬಹುದೆಂದು ಊಹಿಸಿ ತಮಿಳಿಗೆ ಘೋಷಣೆ ಮಾಡುವ ಸಂದರ್ಭದಲ್ಲಿ ರೂಪಿಸಲಾದ ಮಾನದಂಡಗಳಲ್ಲಿ ಮೊದಲನೆಯದಾದ 'ಒಂದು ಸಾವಿರ

ವರ್ಷದ' ಪ್ರಾಚೀನತೆಯ ಅವಧಿಯನ್ನು 'ಒಂದೂವರೆ ಸಾವಿರ ವರ್ಷಕ್ಕೆ' ಹೆಚ್ಚಿಸಿತು. (ಇದೂ ಸಹ ರಾಜಕೀಯ ಪ್ರೇರಿತವೆಂಬುದು ಎಲ್ಲರ ಅನಿಸಿಕೆ. ಕಾರಣ ತಮಿಳಿನ ಹೊರತು ಬೇರೆ ಯಾವ ಭಾರತೀಯ ಭಾಷೆಗೂ ಈ ಸ್ಥಾನಮಾನ ಲಭಿಸಬಾರದೆಂಬುದು ತಮಿಳು ಬುದ್ಧಿಜೀವಿಗಳ ಹಾಗೂ ರಾಜಕಾರಣಿಗಳ ಅಭಿಮತವಾಗಿದ್ದುದೇ ಆಗಿದೆ) ಭಾರತ ಸರ್ಕಾರದ ಈ ಒಂದು ಊಹೆ ದ್ರಾವಿಡ ಮೂಲದ ಇನ್ನೊಂದು ಪ್ರಾಚೀನ ಭಾಷೆಯಾದ ತೆಲುಗಿನಿಂದಲೂ ಮಂಡಿತವಾಯಿತು. ಇದೀಗ ಭಾರತ ಸರ್ಕಾರ ಕನ್ನಡದ ಜೊತೆಗೆ ತೆಲುಗಿಗೂ ಶಾಸ್ತ್ರೀಯ ಭಾಷಾ ಸ್ಥಾನಮಾನ ನೀಡಿದೆ.

ತಮಿಳು ಹಾಗೂ ಸಂಸ್ಕೃತ ಹೊರತುಪಡಿಸಿ ಬೇರೆ ಭಾಷೆಗಳಿಗೆ ಶಾಸ್ತ್ರೀಯ ಸ್ಥಾನಮಾನ ನೀಡಬಾರದೆಂಬ ತಮಿಳರ ಅಭಿಪ್ರಾಯಕ್ಕೆ ಪೂರಕವಾಗಿ ತಮಿಳುನಾಡಿನ ಹಿರಿಯ ವಕೀಲ ಆರ್. ಗಾಂಧಿ ಎಂಬುವವರು ಕನ್ನಡ ಹಾಗೂ ತೆಲುಗು ಭಾಷೆಗಳಿಗೆ ಶಾಸ್ತ್ರೀಯ ಸ್ಥಾನಮಾನ ನೀಡುವ ಸಂಬಂಧದಲ್ಲಿ ರಚಿಸಲಾಗಿರುವ ತಜ್ಞರ ಉಪಸಮಿತಿಯಲ್ಲಿ ಸದಸ್ಯರು ಕನ್ನಡ ಹಾಗೂ ತೆಲುಗು ಪಕ್ಷಪಾತಿಗಳಾಗಿದ್ದಾರೆಂಬ ಕಾರಣ ನೀಡಿ ಆ ಸಮಿತಿಯನ್ನು ರದ್ದುಗೊಳಿಸಬೇಕೆಂದು ತಮಿಳುನಾಡಿನ ಉಚ್ಚನ್ಯಾಯಾಲಯದಲ್ಲಿ ದಾವೆ ಹೂಡಿದ್ದರು. ಇದಕ್ಕೆ ಪ್ರತಿಯಾಗಿ ತಜ್ಞರ ಸಮಿತಿ ರಚಿಸಲಾಗಿರುವ ರಾಜ್ಯದ ಉಚ್ಚ ನ್ಯಾಯಾಲಯದಲ್ಲಿ ಮಾತ್ರವೇ ಅದರ ಅರ್ಹತೆಯನ್ನು ಪ್ರಶ್ನಿಸಬಹುದು ಎಂಬ ವಾದವನ್ನು ಮಂಡಿಸಿ ಆರ್. ಗಾಂಧಿಯವರ ಅರ್ಜಿಯನ್ನು ವಜಾಗೊಳಿಸಬೇಕೆಂದು ಕನ್ನಡ ಕಿರುತೆರೆಯ ನಿರೂಪಕ ದೀಪಕ್ ತಿಮ್ಮಯ್ಯ ಮಧ್ಯಂತರ ಅರ್ಜಿ ಸಲ್ಲಿಸಿಕೊಂಡಿದ್ದಾರೆ. ನ್ಯಾಯಾಲಯದ ಈ ತೂಗುಕತ್ತಿಯಡಿಯಲ್ಲಿಯೇ ಭಾರತ ಸರ್ಕಾರ ದಿಢೀರನೆ ಕನ್ನಡ ಹಾಗೂ ತೆಲುಗಿಗೆ ಶಾಸ್ತ್ರೀಯ ಸ್ಥಾನಮಾನವನ್ನು ಪ್ರಕಟಪಡಿಸಿರುವುದರ ಹಿನ್ನೆಲೆಯಲ್ಲಿಯೂ ರಾಜಕೀಯ ಉದ್ದೇಶಗಳು ಎದ್ದು ಕಾಣುತ್ತದೆ. ಕರ್ನಾಟಕದಲ್ಲಿ ಕಾಂಗ್ರೆಸ್ಸಿನ ಪ್ರಬಲ ವಿರೋಧ ಪಕ್ಷ ಭಾರತೀಯ ಜನತಾ ಪಕ್ಷ ಅಧಿಕಾರದಲ್ಲಿದ್ದು, ಅದು ಈ ವಿಷಯವನ್ನು ಮುಂದಿನ ಎಂಟು ವಿಧಾನಸಭಾ ಉಪ ಚುನಾವಣೆ ಹಾಗೂ ಮುಂಬರುವ ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೆಸ್ಸಿನ ವಿರುದ್ಧ ಪ್ರಬಲ ಅಸ್ತ್ರವಾಗಿ ಬಳಸಿಕೊಳ್ಳುವ ಸಾಧ್ಯತೆಯನ್ನು ಮನಗಂಡು ಹಾಗೂ ಇದೀಗ ಬಂದಿರುವ ಕರ್ನಾಟಕ ರಾಜ್ಯೋತ್ಸವದ ಮಾಸಾಚರಣೆ ಸಂದರ್ಭ ಬಹುತೇಕ ಕನ್ನಡಪರ ಸಂಘಟನೆಗಳು ರಾಜ್ಯೋತ್ಸವ ವೇದಿಕೆಗಳನ್ನು ಭಾರತ ಸರಕಾರವನ್ನು ಹಾಗೂ ತನ್ಮೂಲಕ ಕಾಂಗ್ರೆಸ್ ಪಕ್ಷವನ್ನು ದೂಷಿಸುವ ಸಾಧ್ಯತೆಯನ್ನು ಊಹಿಸಿ ಈ ದಿಢೀರ್ ನಿರ್ಧಾರ ಪ್ರಕಟಿಸಿರಬಹುದೆಂದು ಊಹಿಸಲಾಗಿದೆ. ಚೆನ್ನೈ ಉಚ್ಚ ನ್ಯಾಯಾಲಯದಲ್ಲಿ ಅಲ್ಲಿನ ವಕೀಲರಾದ ಗಾಂಧಿಯವರು ಸಲ್ಲಿಸಿರುವ ಮೇಲ್ಮನವಿಯನ್ನು ವಜಾ ಮಾಡಿಸುವ ನಿಟ್ಟಿನಲ್ಲಿ ಕಾನೂನು ತಜ್ಞರ ಸಲಹೆ ಪಡೆದು ಭಾರತ ಸರ್ಕಾರ ಈ ನಿರ್ಧಾರ ಘೋಷಿಸಿದೆ ಎನ್ನಲಾಗಿದೆ. ಒಟ್ಟಿನಲ್ಲಿ ೨೦೦೮ರ ರಾಜ್ಯೋತ್ಸವ ಕನ್ನಡಿಗರ ಪಾಲಿಗೆ ಸಂಭ್ರಮದ ಉತ್ಸವವಾಗಲಿದೆ. ಭಾರತ ಸರ್ಕಾರ ಇದೇ ರೀತಿಯಲ್ಲಿ ಕನ್ನಡಿಗರ ಇತರ ಬೇಡಿಕೆಗಳಿಗೂ ಕೂಡಲೇ ಸ್ಪಂದಿಸಬೇಕೆಂಬುದು 'ಬಹುಜನ ಕನ್ನಡಿಗರು' ಹಾಗೂ ಕನ್ನಡ ಪರ ಸಂಘಟನೆಗಳು ಹಕ್ಕೊತ್ತಾಯವಾಗಿದೆ. ಇವುಗಳಲ್ಲಿ ಮುಖ್ಯವಾಗಿ ರಾಷ್ಟ್ರೀಯ ಜಲನೀತಿ, ಸ್ಥಳೀಯರಿಗೆ ಆದ್ಯತೆ ದೊರಕಿಸುವ ರಾಷ್ಟ್ರೀಯ ಉದ್ಯೋಗ ನೀತಿ ಹಾಗೂ ರಾಷ್ಟ್ರೀಯ ವಲಸೆ ನೀತಿ ರೂಪಿಸಬೇಕು ಎಂಬುದು ಪ್ರಮುಖವಾಗಿವೆ. ಈ ರೀತಿ ರೂಪಿಸಲಾಗುವ ನೀತಿಗಳಲ್ಲಿ ಭಾಷಾವಾರು ರಾಜ್ಯ ರಚನೆಯ ಹಿನ್ನೆಲೆಯಲ್ಲಿ ಆಯಾಯ ರಾಜ್ಯಗಳ ಸ್ಥಳೀಯರಿಗೆ ಉದ್ಯೋಗದಲ್ಲಿ ಆದ್ಯತೆ ಹಾಗೂ ಜಲನೀತಿಯಡಿಯಲ್ಲಿ ಸೌಹಾರ್ದಯುತವಾಗಿ ನದಿ ನೀರಿನ ಹಂಚಿಕೆಯನ್ನು ಮಾಡಿಕೊಳ್ಳಬೇಕು. ಯಾವುದೇ ರಾಜಕೀಯ ಒತ್ತಡಗಳಿಗೆ ಈ ವಿಚಾರಗಳಲ್ಲಿ ಅವಕಾಶವಿರಬಾರದು.

ಇದೀಗ ಕನ್ನಡಿಗರ ಭಾವನಾತ್ಮಕ ಬಯಕೆಯಾಗಿದ್ದ ಶಾಸ್ತ್ರೀಯ ಸ್ಥಾನಮಾನದ ಹಕ್ಕೊತ್ತಾಯ ದೊರಕಿದೆ. ಇದರ ನೆಲೆಯಲ್ಲಿ ದೊರೆಯಬೇಕಾದ ಸೌಲಭ್ಯ-ಸೌಕರ್ಯಗಳನ್ನು ಬಳಸಿಕೊಂಡು ಕನ್ನಡದ ಬೆಳವಣಿಗೆಗೆ ಪ್ರಾಮಾಣಿಕ ಪ್ರಯತ್ನ ನಡೆಯಬೇಕಾಗಿದೆ. ಈಗ ಕನ್ನಡ ಭಾಷೆ ಶಾಸ್ತ್ರೀಯ ಸ್ಥಾನಮಾನ ಹೊಂದಿರುವುದರಿಂದ ಕನ್ನಡ ಭಾಷೆಯ ಅಧ್ಯಯನಕ್ಕೆ ಭಾರತ ಸರ್ಕಾರ ಒಂದು ಉನ್ನತ ಅಧ್ಯಯನ ಕೇಂದ್ರವನ್ನು ಸ್ಥಾಪಿಸಬಹುದಾಗಿದೆ. ದೇಶದ ವಿವಿಧ ವಿಶ್ವವಿದ್ಯಾಲಯಗಳಲ್ಲಿ 'ಕನ್ನಡ ಅಧ್ಯಯನ ಪೀಠ'





ಗಳನ್ನು ಸ್ಥಾಪಿಸಬಹುದಾಗಿದೆ. ಕನ್ನಡ ಭಾಷಾ ಅಭಿವೃದ್ಧಿ ಯೋಜನೆಯನ್ನು ರೂಪಿಸಿ ಅದರ ಮೂಲಕ ದೇಶ-ವಿದೇಶಗಳಲ್ಲಿನ ಕನ್ನಡಿಗರ ಆಶಯ-ಅಭಿಲಾಷೆಗಳನ್ನು ಆಧರಿಸಿ ಕನ್ನಡ ಬೋಧನೆ ಅಭಿವೃದ್ಧಿಗೆ ಅಗತ್ಯ ಕಾರ್ಯಕ್ರಮ ರೂಪಿಸಬಹುದಾಗಿದೆ. ಅಂತರರಾಷ್ಟ್ರೀಯ ರಾಷ್ಟ್ರೀಯ ಹಾಗೂ ರಾಜ್ಯಮಟ್ಟದ ಪ್ರಶಸ್ತಿ ಪುರಸ್ಕಾರಗಳನ್ನು ಸ್ಥಾಪಿಸಿ ಕನ್ನಡ ಭಾಷಾ ಬೆಳವಣಿಗೆಗೆ ಗಣನೀಯ ಕೊಡುಗೆ ನೀಡಿದ ವಿದ್ವಾಂಸರಿಗೆ ಪ್ರಶಸ್ತಿಗಳನ್ನು ನೀಡಬಹುದಾಗಿದೆ. ಕನ್ನಡ ಭಾಷೆ ಇತಿಹಾಸನ ಸಂಶೋಧನೆಗಾಗಿ ಫೆಲೋಷಿಪ್ ನೀಡುವುದಕ್ಕೂ ನೆರವಾಗಲಿದೆ. ಈ ರೀತಿಯಲ್ಲಿ ಪ್ರಾಚೀನ ಕನ್ನಡ ಭಾಷಾ ಸಂಶೋಧನೆ ವಿಚಾರವಾಗಿ ಇನ್ನಿತರ ಕಾರ್ಯಕ್ರಮ ರೂಪಿಸಬಹುದಾಗಿದೆ. ಇದಲ್ಲದಕ್ಕೂ ಭಾರತ ಸರ್ಕಾರ ತಮಿಳಿಗೆ ನೀಡುತ್ತಿರುವ ರೀತಿಯಲ್ಲಿ ಹೇರಳವಾಗಿ ಧನಸಹಾಯ ಒದಗಿಸಬೇಕಾಗಿದೆ. ಆದರೆ ಈಗ ಭಾರತ ಸರ್ಕಾರ ಮಾಡಬೇಕಿರುವ ಅಗತ್ಯ ಹೊಣೆಗಾರಿಕೆಯು ಕೆಲಸವೆಂದರೆ ಚೆನ್ನೈ ಉಚ್ಚನ್ಯಾಯಾಲಯದಲ್ಲಿರುವ ಗಾಂಧಿಯವರ ಮೇಲ್ಮನವಿಯನ್ನು ವಜಾ ಮಾಡಿಸುವ ಅಥವಾ ಅವರಿಂದಲೇ ವಾಪಸು ಪಡೆಯುವ ಕೆಲಸ. "ಸರ್ಕಾರದ ಈ ನಿರ್ಧಾರ ಚೆನ್ನೈ ಉಚ್ಚ ನ್ಯಾಯಾಲಯದಲ್ಲಿ ವಿಚಾರಣೆ ಹಂತದಲ್ಲಿರುವ ಮೇಲ್ಮನವಿಗೆ ಸಂಬಂಧಿಸಿದ ತೀರ್ಪಿಗೆ ಬದ್ಧವಾಗಿದೆ" ಎಂಬ ಷರತ್ತಿನಲ್ಲಿ ಘೋಷಿಸಲಾಗಿರುವ ಕನ್ನಡ ಹಾಗೂ ತೆಲುಗಿಗೆ ನೀಡಲಾಗಿರುವ ಶಾಸ್ತ್ರೀಯ ಸ್ಥಾನಮಾನಕ್ಕೆ ತಪ್ಪುವ ಸಾಧ್ಯತೆಯೂ ಇಲ್ಲದಿಲ್ಲ. ಆದಕಾರಣ ಮೇಲ್ಮನವಿ ತೆರವುಗೊಳಿಸುವ ಅಥವಾ ವಜಾ ಮಾಡಿಸುವ ನಿಟ್ಟಿನಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡಬೇಕೆಂದು ಭಾರತ ಸರ್ಕಾರವನ್ನು ಕನ್ನಡ ಪರ ಸಂಘಟನೆಗಳ ಪರವಾಗಿ ಬಹುಜನ ಕನ್ನಡಿಗರು ಆಗ್ರಹಿಸುತ್ತದೆ.*

* ಸೌಜನ್ಯ: ಬಹುಜನ ಕನ್ನಡಿಗರು, ಸಂಪಾದಕೀಯ, ೧.೧೧.೨೦೦೮.



# ರಾಜಕೀಯ



ಲಿಂಗದೇವರು ಹಳೆಮನೆ

# ದಾಳವಾಗಿ ಶಾಸ್ತ್ರೀಯ ಭಾಷೆ

೨೦೦೮ರ ಕನ್ನಡ ರಾಜ್ಯೋತ್ಸವಕ್ಕೆ ಬಂಪರ್ ಕೊಡುಗೆ ನೀಡುವಂತೆ ಕೇಂದ್ರ ಸರ್ಕಾರ ಕನ್ನಡ ಭಾಷೆಯನ್ನು 'ಶಾಸ್ತ್ರೀಯ ಭಾಷೆ' ಎಂದು ತರಾತುರಿಯಲ್ಲಿ ಘೋಷಿಸಿದೆ. ಮದ್ರಾಸ್ ಹೈಕೋರ್ಟ್‌ನಲ್ಲಿರುವ ಮೊಕದ್ದಮೆ ಇತ್ಯರ್ಥವಾಗುವ ಮೊದಲೇ ತರಾತುರಿಯಲ್ಲಿ ಶಾಸ್ತ್ರೀಯ ಭಾಷೆಯೆಂದು ಘೋಷಣೆ ಮಾಡುವ ಅವಶ್ಯಕತೆಯೇನಿತ್ತು ಎಂಬ ಪ್ರಶ್ನೆ ಕೆಲವರನ್ನು ಕಾಡುತ್ತಿರಬಹುದು.

ಇಡೀ ಶಾಸ್ತ್ರೀಯ ಭಾಷೆಯ ಹುಟ್ಟು, ಬೆಳವಣಿಗೆಯ ಹಿಂದೆ ಒಂದು ರೀತಿಯ 'ಭಾಷಾ ರಾಜಕೀಯ' ಇದೆ ಎಂಬುದನ್ನು ಮರೆಯಬಾರದು. ಈ ಘೋಷಣೆಯ ಹಿಂದೆ ಇರುವುದೂ ಕೂಡಾ ರಾಜಕೀಯವೇ. ಮೊದಲಿಗೆ ಕನ್ನಡ ರಾಜ್ಯೋತ್ಸವಕ್ಕೆ ಒಂದು ಉತ್ಕೃಷ್ಟ ಕೊಡುಗೆ ಕೊಟ್ಟಂತಾಗಬೇಕು. ಆದರೆ ತಕ್ಷಣ ಜಾರಿಗೊಳಿಸದಂತಿರಬೇಕು. ಆ ಮೂಲಕ ನೇರವಾಗಿ ತಮಿಳುನಾಡಿನ ಕೆಂಗಣ್ಣಿಗೆ ತುತ್ತಾಗದಂತಿರಬೇಕು. ಚುನಾವಣೆ ಹತ್ತಿರ ಬರುತ್ತಿರುವುದರಿಂದ ಮುಂದೆ ಕೇಂದ್ರ ಸರ್ಕಾರ ಮತ್ತು ಈಗಿನ ತಮಿಳುನಾಡು ಸರ್ಕಾರದ ಸಂಬಂಧಗಳು ಏನಾಗುತ್ತವೋ ಯಾರು ಬಲ್ಲರು? ಸದ್ಯಕ್ಕೆ ಬೀಸುವ ದೊಣ್ಣೆಯಿಂದ ತಲೆತಪ್ಪಿಸಿಕೊಳ್ಳಬೇಕು. ಎರಡನೆಯದಾಗಿ ಕರ್ನಾಟಕ, ಆಂಧ್ರಪ್ರದೇಶದಲ್ಲಿ ಚುನಾವಣೆ ಎದುರಿಸಬೇಕಾಗಿರುವುದರಿಂದ ಅಲ್ಲಿಯ ಜನರ ಅವಕೃಪೆಗೂ ಒಳಗಾಗಬಾರದು. ಕೇಂದ್ರ ಸರ್ಕಾರ ಮನಸ್ಸು ಮಾಡಿದ್ದರೆ, ಮೊಕದ್ದಮೆಯನ್ನು ತೆರವು ಮಾಡುವುದು ಕಷ್ಟವಾಗಿರಲಿಲ್ಲ. ಈಗಲೂ ಕಷ್ಟವಿಲ್ಲ. ಆ ಮೊಕದ್ದಮೆಯೇ ಹಾಗಿದೆ.

೨೦೦೪ರಲ್ಲಿ ದ್ರಾವಿಡ ಮುನ್ನೇತ್ರ ಕಳಗಂ ಮತ್ತು ಅದರ ಮಿತ್ರ ಪಕ್ಷಗಳೂ ಲೋಕಸಭಾ ಚುನಾವಣೆಯಲ್ಲಿ ಎಲ್ಲಾ ಸ್ಥಾನಗಳನ್ನು ಗೆದ್ದುಕೊಂಡವು. ಯುಪಿಎ ಸರ್ಕಾರದಲ್ಲಿ ಭಾಗಿಯಾದ ಡಿ.ಎಂ.ಕೆ. ಮುಂದಿಟ್ಟ ಮುಖ್ಯ ಅಜೆಂಡಾ ಎಂದರೆ, ತಮಿಳು ಭಾಷೆಯನ್ನು ಕ್ಲಾಸಿಕಲ್ ಭಾಷೆ ಎಂದು ಘೋಷಿಸಬೇಕೆಂದು. ಪಾಪ, ಸಂಸ್ಕೃತಕ್ಕೆ ಆ ರೀತಿಯ ಬೇಡಿಕೆಯ ಒತ್ತಾಯ ಸಲ್ಲಿಸುವ ಸ್ಥಿತಿಯಲ್ಲಿ ಯಾವ ರಾಜಕೀಯ ಪಕ್ಷಗಳೂ ಇರಲಿಲ್ಲ. ತಮಿಳುನಾಡಿನ ಭಾಷಾ ರಾಜಕೀಯ ಒತ್ತಡ ಎಷ್ಟು ತೀವ್ರವಾಗಿತ್ತೆಂದರೆ ಯು.ಪಿ.ಎ. ಸರ್ಕಾರ ರೂಪಿಸಿದ 'ರಾಷ್ಟ್ರೀಯ ಕನಿಷ್ಠ ಸಾಮಾನ್ಯ

ಕಾರ್ಯಕ್ರಮ' ದಲ್ಲಿ ತಮಿಳು ಭಾಷೆಯನ್ನು ಕ್ಲಾಸಿಕಲ್ ಭಾಷೆಯಾಗಿ ಘೋಷಿಸುವುದನ್ನು ಒಂದು ಕಾರ್ಯಕ್ರಮವೆಂದು ಸೇರಿಸಲಾಯಿತು.

ಅಂತಿಮವಾಗಿ ಕೇಂದ್ರ ಸರ್ಕಾರ ೨೦೦೪ನೇ ಇಸವಿ ಅಕ್ಟೋಬರ್ ೧೨ನೇ ತಾರೀಕು ತನ್ನ ಅಧಿಸೂಚನೆ ಸಂ.ಐವಿ-೧೪೦೧೪/೭/೨೦೦೪-ಎನ್ಐ-೨ ಮೂಲಕ ತಮಿಳು ಭಾಷೆಯನ್ನು ಶಾಸ್ತ್ರೀಯ ಭಾಷೆ ಎಂದು ಘೋಷಿಸಿತು. ಒಂದು ವರ್ಷದ ನಂತರ ಕೇಂದ್ರ ಸರ್ಕಾರ ಸಂಸ್ಕೃತಕ್ಕೂ ಆ ಸ್ಥಾನ ನೀಡಿತು.

ತಮಿಳಿಗೆ ಶಾಸ್ತ್ರೀಯ ಭಾಷೆಯ ಸ್ಥಾನಮಾನ ಸಿಗಬೇಕು ಎಂಬ ಒತ್ತಾಯ ಇಂದು ನಿನ್ನೆಯದಲ್ಲ. ೧೮೮೭ರಷ್ಟು ಹಿಂದೆಯೇ ಪರುಮತ್ತಿಲ್ ಕಲೈಂಗ್ನರ್ ಎಂಬ ವಿದ್ವಾಂಸರು ತಮಿಳು ಭಾಷೆಯನ್ನು ಅಧಿಕೃತವಾಗಿ ಶಾಸ್ತ್ರೀಯ ಭಾಷೆ ಎಂದು ಘೋಷಿಸಬೇಕೆಂದು ಆಗಿನ ಬ್ರಿಟಿಷ್ ಸರ್ಕಾರದ ಮುಂದೆ ಮನವಿ ಸಲ್ಲಿಸಿದ್ದರು. ೨೦೦೦ನೇ ಇಸವಿ ಏಪ್ರಿಲ್ ತಿಂಗಳಿನಲ್ಲಿ ಅಮೆರಿಕಾದ ಬರ್ಕಲಿಯ ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯದ ಸಂಸ್ಕೃತ ಮತ್ತು ತಮಿಳು ಪ್ರಾಧ್ಯಾಪಕ ಜಾರ್ಜ್ ಎಲ್. ಹಾರ್ಟ್ ಎಂಬುವರು (ಕನ್ನಡದ ವಿದ್ವಾಂಸರೊಬ್ಬರು ಅವರನ್ನು ಹರ್ಟ್ ಎಂದು ಕರೆದಿದ್ದಾರೆ). ಅಂತರ್ಜಾಲದಲ್ಲಿ ತಮಿಳು ಭಾಷೆ ಶಾಸ್ತ್ರೀಯ ಭಾಷೆಯ ಸ್ಥಾನಮಾನ ಪಡೆಯಲು ಯಾಕೆ ಅರ್ಹ? ಎಂಬ ವಿಷಯದ ಬಗ್ಗೆ ಲೇಖನವೊಂದನ್ನು ಬರೆದರು. ಅಲ್ಲಿಂದ ತಮಿಳಿಗೆ ಶಾಸ್ತ್ರೀಯ ಸ್ಥಾನಮಾನ ನೀಡಬೇಕು ಎಂಬ ರಾಜಕೀಯ ಒತ್ತಡ ಹೆಚ್ಚುತ್ತಲೇ ಹೋಯಿತು. ಆದರೆ ಅದು ಹಾರ್ಟ್ ಅವರೇ ಇಷ್ಟಪಟ್ಟು ಬರೆದ ಲೇಖನ ಅಲ್ಲ. ತಮಿಳಿನ ಕೆಲವು ವಿದ್ವಾಂಸರು ಅವರಿಗೆ ಸತತವಾಗಿ ಪತ್ರ ಬರೆದು ಮಾಡಿಕೊಂಡ ಮನವಿಯಿಂದಾಗಿ ಬರೆದದ್ದು. ಇದು ಭಾಷಾ ರಾಜಕೀಯ.

ತಮಿಳಿಗೆ ಶಾಸ್ತ್ರೀಯ ಭಾಷೆಯ ಸ್ಥಾನಮಾನ ನೀಡಬೇಕೆಂದು ನಿರ್ಧರಿಸಿದ ಮೇಲೆ ಕೇಂದ್ರ ಸರ್ಕಾರ ಅದಕ್ಕೆ ಅನುಗುಣವಾಗಿ ಲಕ್ಷಣಗಳನ್ನು ರೂಪಿಸಲು ಕೇಂದ್ರ ಸಾಹಿತ್ಯ ಅಕೆಡಮಿಯ ಅಧ್ಯಕ್ಷರಾಗಿದ್ದ ಗೋಪಿಚಂದ್ ನಾರಂಗ್ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿ ನೇಮಿಸಿತು. ಆ ಸಮಿತಿ ಸಭೆ ಸೇರಿ ಶಾಸ್ತ್ರೀಯ ಭಾಷೆಗೆ ಈ ಕೆಳಕಂಡ ಲಕ್ಷಣಗಳು ಇರಬೇಕು ಎಂದು ತಿಳಿಸಿತು.

೧. ಒಂದು ಭಾಷೆಯ ಪಠ್ಯಗಳು/ದಾಖಲಾದ ಇತಿಹಾಸ ಒಂದು ಸಾವಿರದ ಐನೂರರಿಂದ ಎರಡು ಸಾವಿರ ವರ್ಷಗಳಿಗೂ ಪುರಾತನವಾಗಿರಬೇಕು.
೨. ಪುರಾತನ ಸಾಹಿತ್ಯ / ಪಠ್ಯಗಳು ತಲೆತಲೆಮಾರುಗಳ ಜನರಿಂದ ಅತ್ಯಂತ ಮೌಲಿಕ ಪರಂಪರೆಯೆಂದು ಪರಿಗಣಿತವಾಗಿರಬೇಕು.
೩. ಸಾಹಿತ್ಯಿಕ ಪರಂಪರೆ ಸ್ವೋಪಜ್ಞವಾಗಿದ್ದು ಯಾವುದೇ ಬೇರೊಂದು ಭಾಷೆ/ಸಮುದಾಯದಿಂದ ಸ್ವೀಕಾರವಾಗಿರಬಾರದು.
೪. ಶಾಸ್ತ್ರೀಯ ಭಾಷೆ ಮತ್ತು ಸಾಹಿತ್ಯ ಪ್ರಸ್ತುತ ಭಾಷೆ ಮತ್ತು ಸಾಹಿತ್ಯಕ್ಕಿಂತ ಭಿನ್ನವಾಗಿರಬೇಕು ಅಥವಾ ಇತ್ತೀಚಿನ ಸ್ವರೂಪಕ್ಕಿಂತ ಅಥವಾ ಅದರಿಂದ ಬೆಳವಣಿಗೆ ಹೊಂದಿದ ಭಾಷೆಗಳಿಗಿಂತ ಬೇರೆಯದೇ ಎನ್ನಿಸುವ ಹಾಗಿರಬೇಕು. ಉದಾಹರಣೆಗೆ, ಲ್ಯಾಟಿನ್‌ಗಿಂತ ರೋಮನ್, ಸಂಸ್ಕೃತ ಪಾಳಿಗಿಂತ ಪ್ರಾಕೃತ ಮತ್ತು ಆಧುನಿಕ ಇಂಡೋ ಆರ್ಯನ್ ಭಾಷೆಗಳು ಭಿನ್ನವಿರುವ ಹಾಗೆ.

ಸಮಿತಿಯ ಈ ಶಿಫಾರಸು ಅಧಿಕೃತವಾಗಿ ಅಧಿಸೂಚನೆಯಲ್ಲಿ ಪ್ರಕಟವಾದಾಗ ೧೫೦೦-೨೦೦೦ ವರ್ಷದ ಅವಧಿ ಒಂದು ಸಾವಿರ ವರ್ಷ ಎಂದು ಪ್ರಕಟವಾಗಿತ್ತು. ಇದೊಂದು ಅಚಾತುರ್ಯ ಎಂದು ಈಗ ಬಣ್ಣಿಸಲಾಗುತ್ತಿದೆ. ಸಚಿವಾಲಯದ ಕಚೇರಿಯಲ್ಲಿ ಯಾವುದೋ ಹಂತದಲ್ಲಿ ಯಾವುದೋ ಒಬ್ಬ ಅಧಿಕಾರಿ ಹೀಗೆ ಮಾಡಿರಬಹುದೆಂಬ ಶಂಕೆ. ಆದರೆ ತಮಿಳು ಭಾಷೆಗೆ ಶಾಸ್ತ್ರೀಯ ಭಾಷೆಯ ಸ್ಥಾನಮಾನ ಘೋಷಣೆಯಾದಾಗ ಅಧಿಕೃತ ಅವಧಿ ಒಂದು ಸಾವಿರ ವರ್ಷ ಇದ್ದದ್ದು ನಿಜ. ಅನಂತರ ಅದನ್ನು ಒಂದು ಸಾವಿರದ ಐದುನೂರು ವರ್ಷಕ್ಕೆ ಏರಿಸಲಾಯಿತು.



## ಕನ್ನಡಿಗರ ಪ್ರತಿಭಟನೆ

ತಮಿಳು ಭಾಷೆಯನ್ನು ಶಾಸ್ತ್ರೀಯ ಭಾಷೆ ಎಂದು ಘೋಷಿಸಿದ ಕೂಡಲೆ ಅದರ ಹಿಂದಿರಬಹುದಾದ ರಾಜಕೀಯವನ್ನು ಕುರಿತಾಗಿ ಬಹುದೊಡ್ಡ ಟೀಕೆಯೇ ಕೇಳಿ ಬಂತು. ತಮಿಳಿನ ಜ್ಞಾತಿ ಭಾಷೆಯಾದ ಕನ್ನಡಕ್ಕೂ ಶಾಸ್ತ್ರೀಯ ಸ್ಥಾನಮಾನ ಅರ್ಹತೆ ಸಿಗಬೇಕು ಎಂಬ ವಾದ ಮುಖ್ಯವಾಗಿ ಕರ್ನಾಟಕದಿಂದ ಕೇಳಿ ಬರತೊಡಗಿತು. ಕರ್ನಾಟಕದ ಸಾಹಿತಿಗಳು, ಬುದ್ಧಿಜೀವಿಗಳು, ಭಾಷಾ ಹೋರಾಟಗಾರರು ತಮ್ಮ ಹಕ್ಕೊತ್ತಾಯವನ್ನು ಅತ್ಯಂತ ತಾರ್ಕಿಕವಾಗಿ ಮಂಡಿಸತೊಡಗಿದರು. ಕೆಲವು ಉಗ್ರ ಸ್ವರೂಪದ ಸಂಘಟನೆಗಳು ರೈಲು ತಡೆ, ಕೇಂದ್ರ ಸರ್ಕಾರದ ಕಚೇರಿಗಳಿಗೆ ಮುತ್ತಿಗೆ ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡವು. ಇಷ್ಟೆಲ್ಲಾ ಪ್ರತಿಭಟನೆಗಳ ನಡುವೆ ದೊಡ್ಡದಾಗಿ ಎದ್ದು ಕಾಣುತ್ತಿದ್ದುದು ರಾಜಕೀಯ ಇಚ್ಛಾಶಕ್ತಿಯ ಕೊರತೆ.

ಕರ್ನಾಟಕ ಮತ್ತು ಆಂಧ್ರ ಪ್ರದೇಶಗಳಿಂದ ಶಾಸ್ತ್ರೀಯ ಭಾಷೆಯ ಸ್ಥಾನಮಾನಕ್ಕೆ ಒತ್ತಡ ಬರತೊಡಗಿದ್ದರಿಂದ ಕೇಂದ್ರ ಸರ್ಕಾರ ಆ ಮನವಿಗಳನ್ನು ಪರಿಶೀಲಿಸಲು ಒಂದು ಸಮಿತಿಯನ್ನು ೦೧.೧೧.೨೦೦೪ರಂದು ನೇಮಿಸಿತು. ಆ ಸಮಿತಿಯಲ್ಲಿ ಅನ್ವಿತಾ ಅಬ್ಬಿ, ಕೆ.ವಿ. ಸುಬ್ಬರಾವ್, ಉದಯನಾರಾಯಣ ಸಿಂಗ್, ಬಿ.ಎನ್. ಪಟ್ನಾಯಕ್, ಭದ್ರಿರಾಜು, ಕೃಷ್ಣಮೂರ್ತಿ ಸದಸ್ಯರಾಗಿದ್ದರು. ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರು ಸಮಿತಿಯ ಅಧ್ಯಕ್ಷರು. ಆಶ್ಚರ್ಯ ಎಂದರೆ ೨೦೦೪ರಲ್ಲಿ ನೇಮಕಗೊಂಡ ಈ ಸಮಿತಿಯ ಸಭೆಯನ್ನು ಸಚಿವಾಲಯ ೨೦೦೮ರವರೆಗೆ ಕರೆಯಲೇ ಇಲ್ಲ. ಇನ್ನೂ ಆಶ್ಚರ್ಯವೆಂದರೆ ಸಮಿತಿ ನೇಮಕವಾದ ನಂತರ ಆದೇಶವೊಂದರ ಮೂಲಕ ತಮಿಳುನಾಡಿನ ಕುಳಂದೈಸಾಮಿ ಮತ್ತು ಕಣ್ಣನ್ ಎಂಬುವರನ್ನು ಸಮಿತಿಗೆ ಸೇರಿಸಿದ್ದು. ಇವರಿಬ್ಬರನ್ನು ಸಮಿತಿಗೆ ಸೇರಿಸಿದ ಉದ್ದೇಶವೇ ಸಮಿತಿಯ ಸಭೆ ನಡೆಯದ ಹಾಗೆ ನೋಡಿಕೊಳ್ಳುವುದು ಅಥವಾ ಈ ಭಾಷೆಗಳಿಗೆ ಶಾಸ್ತ್ರೀಯ ಸ್ಥಾನಮಾನ ನೀಡುವುದಕ್ಕೆ ತೊಡರುಗಾಲಾಗಿ ಇರುವುದು.

ಕರ್ನಾಟಕ ಮತ್ತು ಆಂಧ್ರಪ್ರದೇಶಗಳಿಂದ ಒತ್ತಡ ಹೆಚ್ಚುತ್ತಲೇ ಹೋಯಿತು. ಕರ್ನಾಟಕದ ಮುಖ್ಯಮಂತ್ರಿಗಳು ಒಂದು ನಿಯೋಗವನ್ನೇ ದೆಹಲಿಗೆ ಕರೆದೊಯ್ದರು. ಕಡೆಗೆ ರಾಜಘಾಟ್‌ನಲ್ಲಿ ಉಪವಾಸ ಕೂಡುವ ಬೆದರಿಕೆ ಹಾಕಿದರು. ತೆಲುಗರು ವಿಜಯವಾಡದಲ್ಲಿ ಭಾರೀ ಸಮ್ಮೇಳನ ಏರ್ಪಡಿಸಿದರು. ಇವೆಲ್ಲಕ್ಕಿಂತ ಹೆಚ್ಚಾಗಿ ಪೆಡಂಭೂತದಂತೆ ಚುನಾವಣೆ ಹತ್ತಿರ ಬರುತ್ತಿದೆ. ಇದ್ದಕಿದ್ದಂತೆ ಕೇಂದ್ರ ಸರ್ಕಾರ ಎಚ್ಚೆತ್ತುಕೊಂಡಿತು. ಮುಖ್ಯವಾಗಿ ಪರಿಶೀಲನಾ ಸಮಿತಿ ಕನ್ನಡ ಮತ್ತು ತೆಲುಗು ಭಾಷೆಗಳಿಗೆ ಶಾಸ್ತ್ರೀಯ ಸ್ಥಾನಮಾನ ಕೊಡಬಹುದು ಎಂದು ವರದಿ ಕೊಟ್ಟಿದ್ದು ಕೇಂದ್ರ ಸರ್ಕಾರಕ್ಕೆ ನುಂಗಲಾರದ ತುತ್ತಾಯಿತು. ಇದಕ್ಕೆ ಅಡ್ಡಗಾಲು ಹಾಕಿದ ಕುಳಂದೈ ಸಾಮಿಯ ವಿರುದ್ಧ ಉಗ್ರ ಪ್ರತಿಭಟನೆಗಳು ಕಂಡುಬಂದವು. ಸಮಿತಿಯ ಸದಸ್ಯರಾಗಿದ್ದ ಉದಯ ನಾರಾಯಣ ಸಿಂಗ್, ಬಿ.ಎನ್. ಪಟ್ನಾಯಕ್ ಮತ್ತು ಬಿ.ಎಚ್. ಕೃಷ್ಣಮೂರ್ತಿ ತಮ್ಮ ವಾದವನ್ನು ಅತ್ಯಂತ ಸಮರ್ಥವಾಗಿ ಮಂಡಿಸಿದ್ದರು. ಇದೆಲ್ಲದರ ಪರಿಣಾಮ ಕನ್ನಡ ಮತ್ತು ತೆಲುಗು ಭಾಷೆಗಳಿಗೆ ಶಾಸ್ತ್ರೀಯ ಸ್ಥಾನಮಾನದ ಮನ್ನಣೆ.

## ಪ್ರಯೋಜನಗಳೇನು?

ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನಮಾನ ಸಿಕ್ಕಿದೆಯೆಂದರೆ, ನಮ್ಮ ಪೂರ್ವಿಕರು ಹುಟ್ಟಿ ಹಾಕಿದ ಈ ಕನ್ನಡ ಜಗತ್ತಿಗೆ ಸಂದ ಗೌರವ ಎಂದು ತಿಳಿಯಬೇಕಾಗಿದೆ. ನಮ್ಮ ಪ್ರಾಚೀನ ಜಗತ್ತು ಸೃಷ್ಟಿಸಿದ ಸಂಸ್ಕೃತಿ, ಸಾಹಿತ್ಯ, ಜ್ಞಾನ ಪರಂಪರೆ, ಮತ್ತು ಮೌಲ್ಯಗಳು ಅತ್ಯುತ್ಕೃಷ್ಟವಾದವು ಎಂಬ ಅಧಿಕೃತ ಗೌರವ ಇದರಿಂದ ಲಭ್ಯವಾಗಿದೆ. ಜಗತ್ತಿನ ಕೆಲವೇ ಭಾಷೆಗಳು ಇಂಥ ಗೌರವಕ್ಕೆ ಪಾತ್ರವಾಗಿದೆ. ಅವುಗಳಲ್ಲಿ ಈಗ ಕನ್ನಡವೂ ಒಂದು. ಇದು ನಮಗೆಲ್ಲ ದೊರೆತ ಭಾವನಾತ್ಮಕ ಲಾಭ.



ಆರ್ಥಿಕವಾಗಿ ಶಾಸ್ತ್ರೀಯ ಭಾಷೆಯ ಅಭಿವೃದ್ಧಿ ಮತ್ತು ಬೆಳವಣಿಗೆಗೆ ಸಾಕಷ್ಟು ಹಣ ಲಭ್ಯವಾಗಲಿದೆ. ಕೇಂದ್ರ ಸರ್ಕಾರ ಇಡೀ ಯೋಜನೆಯನ್ನು 'ಕೇಂದ್ರ ಯೋಜನೆಯಡಿ', ಅನುಷ್ಠಾನಗೊಳಿಸಲಿದೆ. ಅಂದರೆ ಕೇಂದ್ರ ಸರ್ಕಾರವೇ ಸ್ಥಾಪಿಸಲಿರುವ ಒಂದು 'ಸ್ವಾಯತ್ತ ಸಂಸ್ಥೆ' ಅಥವಾ ಕೇಂದ್ರ ಸರ್ಕಾರದ ಒಂದು ಭಾಗವಾಗಿರುವ ಭಾರತೀಯ ಭಾಷಾ ಕೇಂದ್ರದ ಅಡಿಯಲ್ಲಿ ಈ ಯೋಜನೆಯನ್ನು ಪ್ರಾರಂಭಿಸಬಹುದು. ಅದಕ್ಕಾಗಿ 'ಕನ್ನಡ ಶಾಸ್ತ್ರೀಯ ಭಾಷೆಯ ಉನ್ನತ ಅಧ್ಯಯನ ಕೇಂದ್ರ'ವನ್ನು ಸ್ಥಾಪಿಸಲಿದೆ.

ಈ ಉದ್ದೇಶಿತ ಸಂಸ್ಥೆಗೆ ಕನ್ನಡದ ಪ್ರತಿಷ್ಠಿತ ವಿದ್ವಾಂಸರೊಬ್ಬರನ್ನು ಕೇಂದ್ರ ಸರ್ಕಾರವೇ ನಾಮನಿರ್ದೇಶನ ಮಾಡುತ್ತದೆ. ಅಲ್ಲದೇ ಕನ್ನಡದಲ್ಲಿ ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಕೆಲಸ ಮಾಡಿದ ಹತ್ತು ಜನ ವಿದ್ವಾಂಸರು ಅದರ ಸದಸ್ಯರಾಗಲಿದ್ದಾರೆ. ಅವರನ್ನೂ ಕೇಂದ್ರ ಸರ್ಕಾರವೇ ನಾಮನಿರ್ದೇಶನ ಮಾಡುತ್ತದೆ.

ತಮಿಳು ಭಾಷೆಯನ್ನು ಕ್ಲಾಸಿಕಲ್ ಭಾಷೆ ಎಂದು ಕೇಂದ್ರ ಸರ್ಕಾರ ಘೋಷಣೆ ಮಾಡಿದ ಮೇಲೆ ಶಾಸ್ತ್ರೀಯ ಭಾಷೆಗೆ ಒದಗಲಿರುವ ಲಾಭಗಳನ್ನು ಹೀಗೆ ಪಟ್ಟಿ ಮಾಡಿದೆ. ಅದನ್ನು ಕನ್ನಡಕ್ಕೆ ಅನ್ವಯಿಸಿ ಹೀಗೆ ಹೇಳಬಹುದು:

೧. ಪ್ರತಿವರ್ಷ ಒಂದು ಅಂತಾರಾಷ್ಟ್ರೀಯ ಪ್ರಶಸ್ತಿಯನ್ನು ಕನ್ನಡ ಶಾಸ್ತ್ರೀಯ ಭಾಷೆಯ ಬಗ್ಗೆ ಕೆಲಸ ಮಾಡಿರುವ ಶ್ರೇಷ್ಠ ವಿದ್ವಾಂಸರುಗಳಿಗೆ ನೀಡಲಾಗುವುದು.
೨. ಪ್ರತಿವರ್ಷ ಒಂದು ರಾಷ್ಟ್ರಮಟ್ಟದ ಪ್ರಶಸ್ತಿಯನ್ನು ಶ್ರೇಷ್ಠ ವಿದ್ವಾಂಸರಿಗೆ ನೀಡಲಾಗುವುದು.
೩. ಐದು ಜನ ತರುಣ ವಿದ್ವಾಂಸರುಗಳಿಗೆ ಪ್ರತಿವರ್ಷ ಪ್ರಶಸ್ತಿ ನೀಡಲಾಗುವುದು.
೪. ಕನ್ನಡ ಶಾಸ್ತ್ರೀಯ ಭಾಷೆಯ ಅಧ್ಯಯನಕ್ಕೆ ಒಂದು ಉನ್ನತ ಅಧ್ಯಯನ ಕೇಂದ್ರ ತೆರೆಯಲಾಗುವುದು.

ಕೇಂದ್ರ ಯೋಜನೆಯಡಿ ಕನ್ನಡ ಶಾಸ್ತ್ರೀಯ ಭಾಷೆಯ ಅಭಿವೃದ್ಧಿಗೆ ನೀಡುವ ಅನುದಾನ ಯೋಜನೆಯನ್ನು 'ಕನ್ನಡ ಭಾಷಾಭಿವೃದ್ಧಿ ಯೋಜನೆ' ಎಂದು ಕರೆಯಲಾಗುತ್ತದೆ. ಅದರ ಮುಖ್ಯ ಉದ್ದೇಶ, ಶಾಸ್ತ್ರೀಯ ಭಾಷೆಯ ಬಗೆಗಿನ ಅಧ್ಯಯನ ಮತ್ತು ಸಂಶೋಧನೆ.

ಇಲ್ಲಿ ಗಮನಿಸಬೇಕಾದ ಅಂಶ ಎಂದರೆ, ಇಲ್ಲಿ ನೀಡುವ ಅನುದಾನವನ್ನು ಆಧುನಿಕ ಕನ್ನಡ ಭಾಷೆಯ ಬೆಳವಣಿಗೆ ಮತ್ತು ಅಭಿವೃದ್ಧಿಗೆ ಬಳಸುವಂತಿಲ್ಲ. ಅದೇನಿದ್ದರೂ ರಾಜ್ಯ ಸರ್ಕಾರದ ಜವಾಬ್ದಾರಿ. ಶಾಸ್ತ್ರೀಯ ಭಾಷೆ ಬಗ್ಗೆ ಅಧ್ಯಯನ ಮಾಡುವಾಗ ಅಧ್ಯಯನದ ಶಿಸ್ತುಗಳ ಎಲ್ಲೆ ದಾಟಿ ಭಾಷಾ ವಿಜ್ಞಾನಿಗಳು, ಸಾಹಿತಿಗಳು, ಇತಿಹಾಸಕಾರರು, ಸಂಶೋಧಕರು, ಪುರಾತತ್ವ ಶಾಸ್ತ್ರಜ್ಞರು, ಕಲಾ ಇತಿಹಾಸಕಾರರು, ಸಂಶೋಧಕರು, ಪುರಾತತ್ವ ಶಾಸ್ತ್ರಜ್ಞರು, ಕಲಾ ಇತಿಹಾಸಕಾರರು, ಶಾಸನತಜ್ಞರು ಮುಂತಾದವರನ್ನು ಒಂದೆಡೆ ತಂದು ಶಾಸ್ತ್ರೀಯ ಕನ್ನಡದ ವಿವಿಧ ಅಂಶಗಳನ್ನು, ಆಯಾಮಗಳನ್ನು ಸಂಶೋಧಿಸಬೇಕಾಗುತ್ತದೆ. ಇದಕ್ಕೆ ಬೇಕಾದ ಎಲ್ಲಾ ಮೂಲಭೂತ ಸೌಲಭ್ಯಗಳನ್ನು, ಆರ್ಥಿಕ ಸಹಾಯವನ್ನೂ ಕೇಂದ್ರ ಸರ್ಕಾರ ನೀಡುತ್ತದೆ.

ಶಾಸ್ತ್ರೀಯ ಉನ್ನತ ಅಧ್ಯಯನ ಕೇಂದ್ರಕ್ಕೆ ಬೇಕಾಗಿರುವ ಮೂಲ ಸೌಲಭ್ಯಗಳು, ಸಿಬ್ಬಂದಿಯ ನೇಮಕ ಮತ್ತು ಅವರ ವೇತನ, ಭತ್ಯೆ ಇತ್ಯಾದಿ, ಪ್ರಶಸ್ತಿಗಳ ಹಣ, ಪಿಎಚ್‌ಡಿ ವಿದ್ಯಾರ್ಥಿಗಳ ವಿದ್ಯಾರ್ಥಿ ವೇತನ, ಕೇಂದ್ರೀಯ ವಿಶ್ವವಿದ್ಯಾಲಯಗಳಲ್ಲಿ ಕನ್ನಡ ಅಧ್ಯಯನ ಪೀಠದ ಸ್ಥಾಪನೆ ಇತ್ಯಾದಿ ಯೋಜನೆಗಳಿಗೆ ದೊಡ್ಡ ಪ್ರಮಾಣದಲ್ಲಿಯೇ ಆರ್ಥಿಕ ಅನುದಾನ ದೊರೆಯಲಿದೆ. ಹಾಗೆಂದು ಐನೂರು ಕೋಟಿ, ಸಾವಿರ ಕೋಟಿ ಎಂದು ಇಡುಗಂಟಾಗಿ ಕೇಂದ್ರ ಸರ್ಕಾರವೇನೂ ಹಣ ನೀಡುವುದಿಲ್ಲ. ಯೋಜನಾ ಅವಧಿಯಲ್ಲಿ ಕೈಗೊಳ್ಳುವ ಕೆಲಸವನ್ನು ಪರಿಶೀಲಿಸಿ ಸೂಕ್ತ ಎನಿಸಿದ್ದಕ್ಕೆ ಅದು ಆರ್ಥಿಕ ಸಹಾಯ ನೀಡಲಿದೆ. ಹಾಗಾಗಿ ಚೆಂಡು ಈಗ ಕರ್ನಾಟಕದ ಅಂಗಳದಲ್ಲಿ ಬಿದ್ದಿದೆ.

* * *

## ಯುನೆಸ್ಕೊ ವರ್ಗೀಕರಣ

ಯುನೆಸ್ಕೊ ಕೆಳಕಂಡ ಭಾಷೆಗಳನ್ನು ಕ್ಲಾಸಿಕಲ್ ಭಾಷೆಗಳೆಂದು ಗುರುತಿಸಿದೆ.



**ಇಂಡೊ ಯುರೋಪಿಯನ್ ಭಾಷೆಗಳು:**

೧. ಕ್ಲಾಸಿಕಲ್ ಗ್ರೀಕ್
೨. ಲ್ಯಾಟಿನ್
೩. ಸಂಸ್ಕೃತ
೪. ಕ್ಲಾಸಿಕಲ್ ಪರ್ಷಿಯನ್

**ಆಫ್ರೋ ಏಷಿಯಾಟಿಕ್ ಭಾಷೆಗಳು:**

೧. ಕ್ಲಾಸಿಕಲ್ ಅರೇಬಿಕ್
೨. ಹೀಬ್ರೂ

**ಸಿನೊ ಟಿಬೆಟಿಯನ್ ಭಾಷೆಗಳು:**

೧. ಕ್ಲಾಸಿಕಲ್ ಚೈನೀಸ್

ಇಲ್ಲಿ 'ಕ್ಲಾಸಿಕಲ್' ಎಂಬುದಕ್ಕೆ ಸಂವಾದಿಯಾದ ಪದ 'ಪುರಾತನ' ಎಂಬುದು. ಈ ಪುರಾತನ ಭಾಷೆಗಳು ಒಂದೋ ಈಗ ಅವಸಾನ ಹೊಂದಿವೆ ಅಥವಾ ಈಗಿನ ಬಳಕೆಯ ಭಾಷೆಗಿಂತ ಪೂರ್ಣ ಭಿನ್ನವಾಗಿವೆ ಅಥವಾ ಸ್ವತಂತ್ರ ಭಾಷೆಗಳಿಗೆ ಎಡೆಮಾಡಿಕೊಟ್ಟಿವೆ.

* * *

## ಭಾಷಾ ಕೇಂದ್ರದ ಪಾತ್ರ

ಭಾರತೀಯ ಭಾಷಾ ಕೇಂದ್ರ ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನ ಮಾನ ಸಿಗುವುದಕ್ಕೆ ಮಹತ್ವದ ಪಾತ್ರ ವಹಿಸಿದೆ. ಕನ್ನಡದ ವಿದ್ವಾಂಸರು ಮತ್ತು ಚಳವಳಿಗಾರರು ಬಹಿರಂಗವಾಗಿ ಕೇಂದ್ರ ಸರ್ಕಾರದ ಮೇಲೆ ಒತ್ತಡ ಹೇರುತ್ತಿದ್ದರೆ, ಭಾಷಾ ಕೇಂದ್ರ ತನ್ನಷ್ಟಕ್ಕೆ ತಾನು ಕೇಂದ್ರ ಸರ್ಕಾರ ಕೇಳಿದ ಎಲ್ಲಾ ಪ್ರಶ್ನೆಗಳಿಗೂ ಸೂಕ್ತ ಸಮಜಾಯಿಷಿ ನೀಡುತ್ತಾ ಬಂದಿತು. ಕಡೆಯಲ್ಲಿ ಕನ್ನಡ ಪರವಾದ ಸಮರ್ಥ ಮಂಡನೆಯನ್ನು ಮಾಡಿದ ಕೀರ್ತಿ ನಿರ್ದೇಶಕರಾದ ಉದಯ ನಾರಾಯಣ ಸಿಂಗ್ ಅವರಿಗೆ ಸಲ್ಲಬೇಕು.

ಭಾಷಾ ಕೇಂದ್ರ ಎರಡು ವರ್ಷಗಳ ಹಿಂದೆಯೇ ಸುಮಾರು ಮೂವತ್ತೈದು ಜನ ವಿದ್ವಾಂಸರನ್ನು ಆಹ್ವಾನಿಸಿ ಅವರ ಸಲಹೆ ಪಡೆದು ಶಾಸ್ತ್ರೀಯ ಕನ್ನಡದ ಬಗ್ಗೆ ಆಗಬೇಕಾದ ಕೆಲಸದ ಆದ್ಯತಾ ಪಟ್ಟಿಯೊಂದನ್ನು ತಯಾರಿಸಿದೆ. ಅಲ್ಲದೆ ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನ ಎಂದಾದರೂ ಬರಲಿ ಆದರೆ ಕನ್ನಡದ ಕೆಲಸ ನಡೆಯುತ್ತಿರಲಿ ಎಂದು ಈಗಾಗಲೇ ಶಾಸ್ತ್ರೀಯ ಕನ್ನಡದ ಡೇಟಾ ಬೇಸ್ ಮತ್ತು ವೆಬ್‌ಸೈಟ್ ನಿರ್ಮಾಣದ ಕೆಲಸ ಕೈಗೆತ್ತಿಕೊಂಡಿದೆ. ಈಗ ಕನ್ನಡದ ಹಳೆಯ ಪಠ್ಯಗಳನ್ನು ಡಿಜಿಟೈಸ್ ಮಾಡುವ ಕೆಲಸವನ್ನೂ ಪ್ರಾರಂಭಿಸಿದೆ. ಮುಂದಿನ ವರ್ಷದ ಜನವರಿ ಹೊತ್ತಿಗೆ ವೆಬ್‌ಸೈಟ್ ಕೆಲಸ ಮಾಡಲು ಆರಂಭಿಸುತ್ತದೆ.

* * *

## ಮೊಕದ್ದಮೆಯ ಆಕ್ಷೇಪ ಏನು?

ಆರ್. ಗಾಂಧಿ ಎಂಬ ತಮಿಳುನಾಡಿನ ವಕೀಲರೊಬ್ಬರು ಮದ್ರಾಸ್ ಹೈಕೋರ್ಟಿನಲ್ಲಿ ಮೊಕದ್ದಮೆಯೊಂದನ್ನು ಹಾಕಿದ್ದಾರೆ. ಅವರ ಪ್ರಕಾರ ಕೇಂದ್ರ ಸರ್ಕಾರ ಕನ್ನಡ ಮತ್ತು ತೆಲುಗಿಗೆ ಶಾಸ್ತ್ರೀಯ ಸ್ಥಾನಮಾನ ನೀಡುವುದರ ಬಗ್ಗೆ ಪರಿಶೀಲಿಸಿ ವರದಿ ನೀಡಲು ನೇಮಿಸಿರುವ ಸಮಿತಿ ಸಿಂಧುವಾದುದಲ್ಲ. ಅಲ್ಲಿಯ ಸದಸ್ಯರಿಗೆ ಅಷ್ಟೊಂದು ಅರ್ಹತೆ ಇಲ್ಲ. ಸಮಿತಿಯಲ್ಲಿ ಇಬ್ಬರು ಕರ್ನಾಟಕದವರು. ಇಬ್ಬರು ಆಂಧ್ರದವರು. ಅವರು ಆಯಾ ರಾಜ್ಯಗಳ ಒತ್ತಡ ನಿವಾರಿಸಿಕೊಂಡು ನಿಷ್ಪಕ್ಷಪಾತವಾದ ವರದಿ ನೀಡಲು ಸಾಧ್ಯವಿಲ್ಲ. ತಮಿಳಿಗೆ ಶಾಸ್ತ್ರೀಯ ಭಾಷೆ ಸ್ಥಾನಮಾನ ನೀಡುವಾಗ ತಮಿಳಿನ ಸದಸ್ಯರಾರೂ ಇರಲಿಲ್ಲ. ತಮಿಳಿಗೆ ಅದರ ನಿಜವಾದ ಅರ್ಹತೆಯ ಮೇಲೆ ಈ ಸ್ಥಾನ ದೊರಕಿದೆ. ಆದ್ದರಿಂದ ಈಗಿನ ಸಮಿತಿಯನ್ನು ತೆಗೆದು ಹಾಕಿ ಒಂದು ಹೈಕೋರ್ಟಿನ ನಿವೃತ್ತ ನ್ಯಾಯಾಧೀಶರು ಅಥವಾ ಸುಪ್ರೀಂ ಕೋರ್ಟಿನ ನಿವೃತ್ತ ನ್ಯಾಯಾಧೀಶರ ಅಧ್ಯಕ್ಷತೆಯಲ್ಲಿ ಸಮಿತಿ ರಚಿಸಬೇಕು ಆ ಸಮಿತಿ ಎಲ್ಲಾ ಪೂರ್ವಗ್ರಹಗಳಿಂದ ಮುಕ್ತವಾಗಿರಬೇಕು.

ಗಾಂಧಿಯ ಈ ವಾದದಲ್ಲಿ ಹುರುಳಿಲ್ಲ. ಮೊದಲಿಗೆ ಆ ಸಮಿತಿಯ ಸದಸ್ಯರೆಲ್ಲರೂ ರಾಷ್ಟ್ರೀಯ ಅಂತಾರಾಷ್ಟ್ರೀಯ ಖ್ಯಾತಿಯ ವಿದ್ವಾಂಸರು. ಅವರು ಹೇಳುವ ಬಿ.ಎನ್. ಪಟ್ನಾಯಿಕ್ ಮತ್ತು ಉದಯ ನಾರಾಯಣ್ ಸಿಂಗ್ ಕರ್ನಾಟಕದವರಲ್ಲ. ಕರ್ನಾಟಕದಲ್ಲಿ ವಾಸ ಇದ್ದಾರೆ ಅಷ್ಟೆ. ಬಿ.ಎಚ್. ಕೃಷ್ಣಮೂರ್ತಿ ಮತ್ತು ಸುಬ್ಬಾರಾವ್ ದ್ರಾವಿಡ ಭಾಷಾವಿಜ್ಞಾನದಲ್ಲಿ ಬಹು ದೊಡ್ಡ ವಿದ್ವಾಂಸರು. ಮದ್ರಾಸ್ ಹೈಕೋರ್ಟ್‌ಮೊಕದ್ದಮೆಯನ್ನು ದಾಖಲಿಸಿಕೊಂಡಿದ್ದು ಸರ್ಕಾರಕ್ಕೆ ನೋಟಿಸ್ ನೀಡಿದೆ.

## 'ಪಾರಂಪರಿಕ' ಪದ ಸೂಕ್ತ

ಕ್ಲಾಸಿಕಲ್ ಲ್ಯಾಂಗ್ವೇಜ್ ಎಂಬುದಕ್ಕೆ ಸಂವಾದಿಯಾಗಿ 'ಶಾಸ್ತ್ರೀಯ ಭಾಷೆ' ಎಂಬ ಪದವನ್ನು ನಾವಿಂದು ಬಳಸುತ್ತಿದ್ದೇವೆ. ಈ ಪದ ಹೇಗೆ ಬಳಕೆಗೆ ಬಂತೋ ತಿಳಿಯದು. ಕೇಂದ್ರ ಸರ್ಕಾರ ತಮಿಳಿಗೆ ಈ ಸ್ಥಾನಮಾನ ನೀಡಿದಾಗ ಹಿಂದಿಯಲ್ಲಿ ಹೊರಡಿಸಿದ ಅಧಿಸೂಚನೆಯಲ್ಲಿ 'ಶಾಸ್ತ್ರೀಯ' ಎಂಬ ಪದವನ್ನು ಕ್ಲಾಸಿಕಲ್ ಎಂಬ ಪದಕ್ಕೆ ಸಂವಾದಿಯಾಗಿ ಬಳಸಿದೆ. ಬಹುಶಃ ಅದನ್ನೇ ನಮ್ಮ ವಿದ್ವಾಂಸರುಗಳು ಮತ್ತು ಮಾಧ್ಯಮಗಳು ಬಳಸಿರಬಹುದು. ಇದಕ್ಕೆ ನಮ್ಮಲ್ಲಿಯೇ ಅಕ್ಷೇಪಗಳು ವ್ಯಕ್ತವಾಗಿವೆ. ತಮಿಳು, ಕನ್ನಡ ಶಾಸ್ತ್ರೀಯ ಭಾಷೆ ಎನ್ನುವುದಾದರೆ ಬೇರೆ ಭಾಷೆಗಳು ಅಶಾಸ್ತ್ರೀಯವೇ? ಎಂಬುದು ಅವರ ಆಕ್ಷೇಪಕ್ಕೆ ಕಾರಣ. ಇನ್ನು ಕೆಲವರು ಕುಹಕ ಮತ್ತು ಮುಗ್ಧತೆಯಿಂದ ಇದೇನಿದು ಶಾಸ್ತ್ರಿಗಳ ಭಾಷೆ? ಎಂದು ಉದ್ಗಾರ ಎತ್ತಿದ್ದಾರೆ. ಕ್ಲಾಸಿಕಲ್ ಎನ್ನುವುದಕ್ಕೆ ಅಭಿಜಾತ, ಪಾರಂಪರಿಕ ಎಂಬ ಅರ್ಥಗಳೂ ಇವೆ. ಕೆಲವು ವಿದ್ವಾಂಸರು ಶಾಸ್ತ್ರೀಯ ಪದದ ಬದಲು 'ಪಾರಂಪಾರಿಕ' ಎಂದು ಬಳಸುವುದು ಸೂಕ್ತ ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ತಮಿಳರು ಕ್ಲಾಸಿಕಲ್ ಲ್ಯಾಂಗ್ವೇಜ್‌ಗೆ ಸಂವಾದಿಯಾಗಿ 'ಚೆಮ್ಮೊಳಿ' ಎಂಬ ಪದ ಬಳಸಿದ್ದಾರೆ. 'ಚೆಮ್ಮೈ' ಎಂದರೆ ಶ್ರೇಷ್ಠ. ನಯವಾದ, ನೇರವಾದ, ಅದ್ಭುತವಾದ ಎಂಬ ಅರ್ಥಗಳಿವೆ. 'ಮೊಳಿ' ಎಂದರೆ ಭಾಷೆ. ನಮ್ಮಲ್ಲಿ 'ಚೆನ್ನುಡಿ' ಎಂಬ ಪದ ಇದೆಯಲ್ಲಾ ಹಾಗೆ. ನಮ್ಮಲ್ಲಿಯೂ ಈ ಶಾಸ್ತ್ರೀಯ ಭಾಷೆ ಎಂಬುದರ ಬದಲು ಬೇರೆ ಪದ ಬಳಸುವುದು ಸೂಕ್ತ ಎನಿಸುತ್ತದೆ. ಇದು ಹಳೆಗನ್ನಡ ಅಧ್ಯಯನವಾದ್ದರಿಂದ 'ಪಳಮೈ ಕನ್ನಡ' ಎಂದು ಬಳಸುವುದು ಸೂಕ್ತವಾದೀತೇನೊ?*

* ಸೌಜನ್ಯ: ಪ್ರಜಾವಾಣಿ, ೮.೧೧.೨೦೦೮.

# ಉತ್ಕೃಷ್ಟತೆಯತ್ತ ಹೆಜ್ಜೆ



ಅಗ್ರಹಾರ ಕೃಷ್ಣಮೂರ್ತಿ

ಕೇಂದ್ರ ಸರ್ಕಾರ ರಾಜ್ಯೋತ್ಸವದ ಕೊಡುಗೆಯೆಂಬಂತೆ 'ಶಾಸ್ತ್ರೀಯ' ಮನ್ನಣೆಯನ್ನು ಕನ್ನಡ ಭಾಷೆಗೆ ನೀಡಿದೆ. ಅಧಿಕೃತವಾಗಿ ಗೆಜೆಟ್ ನೋಟಿಫಿಕೇಶನ್ನನ್ನು ಪ್ರಕಟಿಸಿದೆ. ಅದರಲ್ಲಿ ಮದ್ರಾಸ್ ಹೈಕೋರ್ಟಿನಲ್ಲಿರುವ ಮೊಕದ್ದಮೆಯ ತೀರ್ಮಾನವನ್ನು ಅವಲಂಬಿಸಿ ಶಾಸ್ತ್ರೀಯ ಸ್ಥಾನಮಾನಗಳಿಗೆ ಸಿಗಬೇಕಾದ ಸವಲತ್ತುಗಳ ಅನುಷ್ಠಾನವನ್ನು ಕೈಗೊಳ್ಳಬೇಕೆಂದು ನಮೂದಿಸಿದೆ. ಅಲ್ಲಿಗೆ ಒಂದು ದೃಷ್ಟಿಯಿಂದ ಕೇಂದ್ರ ಸರ್ಕಾರದ ಜವಾಬ್ದಾರಿ ಮುಗಿದಂತಾಗಿದೆ. ಯಾರೂ ಅದನ್ನು ಇನ್ನು ಮುಂದೆ ದೂರುವಂತಿಲ್ಲ. ಇನ್ನು ಮುಂದೆ ಶಾಸ್ತ್ರೀಯಾಸಕ್ತರ ದೃಷ್ಟಿ ನೆರೆ ರಾಜ್ಯದ ಹೈಕೋರ್ಟಿನ ಮೇಲೇ ಇರಬೇಕಾಗುತ್ತದೆ. ಸದ್ಯದ ಕೆಲಸ ಕಾಯುತ್ತಾ ಕುಳಿತಿರುವುದಷ್ಟೆ.

ಸರ್ಕಾರದ ಮೇಲೆ ಒತ್ತಡ ತರಬಹುದು. ನ್ಯಾಯಾಲಯದ ಮೇಲೆ ಒತ್ತಡ ತರಲು ಸಾಧ್ಯವೇನು? ಇದನ್ನು ಕಾನೂನುತಜ್ಞರು ಚಿಂತಿಸಬೇಕು. ಇರಲಿ, ಈ ಅಡೆತಡೆಯೂ ಆದಷ್ಟು ಬೇಗ ನಿವಾರಣೆಯಾಗುವುದೆಂದು ಆಶಿಸೋಣ. ಅದೂ ಆದಮೇಲೆ ಮುಂದೇನು ಎಂಬುದು ಪ್ರಶ್ನೆ.

ಈ ಬಾರಿಯ ರಾಜ್ಯೋತ್ಸವದ ಆಚರಣೆಯ ಸಂದರ್ಭದಲ್ಲಿ ರಾಜ್ಯದ ಮುಖ್ಯಮಂತ್ರಿಗಳು ಕನ್ನಡಕ್ಕಾಗಿ ಇಪ್ಪತ್ತೈದು ಕೋಟಿ ರೂಪಾಯಿಗಳನ್ನು ನೀಡುವುದಾಗಿ ಆಶ್ವಾಸನೆ ನೀಡಿದ್ದಾರೆ. ವೈಯಕ್ತಿಕವಾಗಿ ನನಗೆ ಇದು ಕೇಂದ್ರ ಸರ್ಕಾರ ಘೋಷಿಸಿದ ಮನ್ನಣೆಗಿಂತಲೂ ಹೆಚ್ಚು ಮೌಲಿಕವಾಗಿ ಕಾಣಿಸುತ್ತಿದೆ. ಇಪ್ಪತ್ತೈದು ಕೋಟಿ ಕೊಡುವವರಿಗೆ ಇನ್ನೊಂದಿಪ್ಪತ್ತೈದು ಕೋಟಿ ಕೊಡುವುದು ಏನೇನೂ ಕಷ್ಟವಾಗಲಾರದು. ಕೇಂದ್ರ ಸರ್ಕಾರ ಶಾಸ್ತ್ರೀಯ ಸವಲತ್ತಾಗಿ ಕೊಡಮಾಡುವುದು ಕೂಡ ಹೆಚ್ಚು ಕಡಿಮೆ ಇಷ್ಟೇ ಮೊತ್ತವಾಗಿರುತ್ತದೆ. ತಮಿಳಿಗೆ ಶಾಸ್ತ್ರೀಯ ಮಾನ್ಯತೆ ಕೊಟ್ಟಾಗ ಕೊಟ್ಟ ಹಣದ ಮೊತ್ತ ಸುಮಾರು ನೂರು ಕೋಟಿ.

ಸರಿ, ಈ ಕೋಟಿಗಳನ್ನು ಪಡೆದು ಏನು ಮಾಡಬೇಕು? ತಮಿಳರು ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟದ ಪ್ರಶಸ್ತಿಗಳನ್ನು ಸ್ಥಾಪಿಸಿ ತಮಿಳು ಭಾಷೆಯ ಅಭಿವೃದ್ಧಿಗಾಗಿ ಕೆಲಸ ಮಾಡುವವರಿಗೆ ಕೊಡಮಾಡಬೇಕು. ತಮಿಳು ಕುರಿತ ಒಂದು ಅತ್ಯುನ್ನತ ಮತ್ತು ಅತ್ಯುತ್ತಮ ಕೇಂದ್ರವನ್ನು ಸ್ಥಾಪಿಸಬೇಕು. ಇದಕ್ಕಾಗಿ ಕೇಂದ್ರ ಸರ್ಕಾರ ನೇಮಕ ಮಾಡುವ ಉನ್ನತ ಮಟ್ಟದ ಸಮಿತಿ ನೀಡುವ ಸಲಹೆ ಸೂಚನೆಗಳಿಗೆ ಅನುಗುಣವಾಗಿ ಕಾರ್ಯಯೋಜನೆಗಳನ್ನು ರೂಪಿಸಬೇಕು. ಹೀಗೆ ರೂಪುಗೊಂಡ

ಯೋಜನೆಗಳನ್ನು ಕೇಂದ್ರೀಯ ಭಾಷಾ ಸಂಸ್ಥಾನ ಅಥವಾ ಕೇಂದ್ರ ಸಾಹಿತ್ಯ ಅಕಾಡೆಮಿಯು ಅನುಷ್ಠಾನಗೊಳಿಸಬೇಕು. ಕೇಂದ್ರ ವಿಶ್ವವಿದ್ಯಾಲಯ ಹಾಗೂ ಇನ್ನಿತರ ಆಯ್ದ ವಿಶ್ವವಿದ್ಯಾಲಯಗಳಲ್ಲಿ ಆಯಾ ಶಾಸ್ತ್ರೀಯ ಭಾಷೆಯ ಪೀಠಗಳನ್ನು ಸ್ಥಾಪಿಸುವಂತೆ ಯು.ಜಿ.ಸಿ. ಅನ್ನು ಕೇಳಿಕೊಳ್ಳಬೇಕು. ಸ್ಥೂಲವಾಗಿ ಇವು ಶಾಸ್ತ್ರೀಯ ಭಾಷೆಯೊಂದಕ್ಕೆ ಸಿಕ್ಕಲಿರುವ ಸವಲತ್ತುಗಳು.

ಸ್ವಲ್ಪ ಗಂಭೀರವಾಗಿ ಯೋಚಿಸಿ ನೋಡಿದರೆ ಈ ಮೇಲಿನ ಯಾವೊಂದೂ ಹೇಳಿಕೊಳ್ಳುವಂಥ ಸವಲತ್ತುಗಳಲ್ಲವೇ ಅಲ್ಲ. ತಮಿಳಿಗಾಗಿ ಒಂದು ವಿಶ್ವವಿದ್ಯಾಲಯ ಸ್ಥಾಪಿಸಿ ಎಷ್ಟೋ ಕಾಲವಾಯಿತು. ಅದೇ ಜಾಡು ಹಿಡಿದು ತೆಲುಗು, ಕನ್ನಡ ವಿಶ್ವವಿದ್ಯಾಲಯಗಳು ಸ್ಥಾಪನೆಯಾದವು. ಅವು ಮಾಡುತ್ತಿರುವ, ಮಾಡಬೇಕಾಗಿದ್ದ ಕೆಲಸ ಕಾರ್ಯಗಳಿಗಿಂತಲೂ ಭಿನ್ನವಾದ ಕಾರ್ಯಯೋಜನೆಗಳನ್ನು ಶಾಸ್ತ್ರೀಯ ಸಲಹಾ ಮಂಡಳಿಗಳು ನೀಡಬಲ್ಲವೇನು? ಕರ್ನಾಟಕದ ಉದಾಹರಣೆಯನ್ನೇ ತೆಗೆದುಕೊಳ್ಳೋಣ. ಕನ್ನಡ ಸಂಸ್ಕೃತಿ ಇಲಾಖೆ, ಕನ್ನಡ ವಿಶ್ವವಿದ್ಯಾಲಯ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸಾಹಿತ್ಯ, ಜಾನಪದ, ಯಕ್ಷಗಾನ, ಅನುವಾದ ಇತ್ಯಾದಿ ಇತ್ಯಾದಿ ಅಕಾಡೆಮಿಗಳಿವೆ. ಇವೆಲ್ಲ ಕನ್ನಡದ್ದೇ ಕೆಲಸಗಳನ್ನು ಮಾಡುತ್ತಿವೆ. ಪಂಪ, ಅತ್ತಿಮಬ್ಬೆ, ಪುರಂದರ, ಶಿಶುನಾಳ ಶರೀಫ್ ಇತ್ಯಾದಿ ಹತ್ತಾರು ಪ್ರಶಸ್ತಿಗಳಿಗಿಂತಲೂ ಉನ್ನತ ಪ್ರಶಸ್ತಿಗಳನ್ನು ಸ್ಥಾಪಿಸಬಹುದೇ? ಸ್ಥಾಪಿಸಿದರೂ ಅವೆಲ್ಲ ಕೇವಲ ಹೆಚ್ಚಿನ ನಗದು ಕೊಡುವುದರಿಂದ ಆದೀತೇ ವಿನಾ ಗುಣಾತ್ಮಕವಾಗಿ ಯಾವ ವ್ಯತ್ಯಾಸಗಳೂ ಕಂಡುಬರಲಾರವು. ಇದೇ ಪರಿಸ್ಥಿತಿ ತಮಿಳಿಗೂ, ತೆಲುಗಿಗೂ ಅನ್ವಯಿಸುತ್ತದೆ.

ಇನ್ನು ವಿಶ್ವವಿದ್ಯಾಲಯಗಳ ಕಡೆ ತಿರುಗೋಣ. ರಾಜ್ಯದ ಎಲ್ಲ ವಿಶ್ವವಿದ್ಯಾಲಯಗಳಲ್ಲಿರುವ ಕನ್ನಡ ವಿಭಾಗಗಳೂ, ಸಂಶೋಧನಾ ಸಂಸ್ಥೆಗಳು ಎಷ್ಟರಮಟ್ಟಿಗೆ ಸರ್ಕಾರಗಳ ಗಮನ ಸೆಳೆದಿವೆ. ಈ ವಿಭಾಗಗಳೆಲ್ಲವೂ ಆರೋಗ್ಯಪೂರ್ಣವಾಗಿವೆಯೇ? ಇದರ ಬಗ್ಗೆ ಹೆಚ್ಚಿಗೆ ಹೇಳುವ ಅರ್ಹತೆ ನನಗಿಲ್ಲ. ಬಲ್ಲವರು ಬೆಳಕು ಬೀರಬೇಕು.

ಹೊರರಾಜ್ಯಗಳಲ್ಲಿನ ವಿಶ್ವವಿದ್ಯಾಲಯಗಳಲ್ಲಿ ಪೀಠಗಳ ಸ್ಥಾಪನೆಯ ಬಗ್ಗೆ ಗಮನಹರಿಸೋಣ. ಕೇಂದ್ರೀಯ ವಿಶ್ವವಿದ್ಯಾನಿಲಯವಾದ ಬನಾರಸ್ ಹಿಂದೂ ವಿಶ್ವವಿದ್ಯಾಲಯದಲ್ಲಿ ಕರ್ನಾಟಕ ರಾಜ್ಯ ಸರ್ಕಾರ ೧೯೭೬ ಹೊತ್ತಿಗೇ ಒಂದು ಕನ್ನಡ ಪೀಠವನ್ನು ಸ್ಥಾಪಿಸಿತ್ತು. ಆ ಪೀಠ ಎಷ್ಟು ದಿನ ಉಳಿದಿತ್ತು. ಈಗ ಅದೆಲ್ಲಿದೆ? ನಾನೇ ಅಲ್ಲಿ ನಾಲ್ಕು ವರ್ಷ, ತಿಂಗಳಿಗೆ ಕೇವಲ ೪೦೦ ರೂಪಾಯಿಗಳಿಗೆ ಕೆಲಸ ಮಾಡಿ ಕೊನೆಗೂ ಅಲ್ಲಿಗೊಂದು ಅಧ್ಯಾಪಕ ಹುದ್ದೆ ಮಂಜೂರಾಗದೆ ವಾಪಸ್ಸು ಬಂದೆ. ಮೊದಲ ಪ್ರಾಧ್ಯಾಪಕರಾಗಿ ಡಾ. ಪ್ರಭುಶಂಕರ, ಆ ನಂತರ ಕೆಲಕಾಲ ಮತ್ತೊಬ್ಬ ಪ್ರಾಧ್ಯಾಪಕರಿದ್ದರು. ಮುಂದೆ ಅದರ ಕಡೆಗೆ ಸರ್ಕಾರಕ್ಕೂ ಗಮನ ಬೀಳಲಿಲ್ಲ. ಕನ್ನಡ ಕನ್ನಡವೆಂದು ಕುಣಿದಾಡುವ ನಮಗ್ಯಾರಿಗೂ ಪೀಠ ಮಾಯವಾದದ್ದು ತಿಳಿಯಲಿಲ್ಲ. ಇದೇ ಅವಸ್ಥೆ ಚಂಡೀಗಢ ವಿಶ್ವವಿದ್ಯಾಲಯದ ಪೀಠಕ್ಕೂ ಆಯಿತು. ಯಾಕೆ ಯಾವ ಪ್ರಾಧ್ಯಾಪಕರೂ ಅಲ್ಲಿಗೆ ಹೋಗಿ ಪೀಠಸ್ಥರಾಗಲಿಲ್ಲ. ಇನ್ನು ನಾವು ವಿದೇಶದ ವಿಶ್ವವಿದ್ಯಾಲಯಗಳಲ್ಲಿ ಪ್ರತಿಷ್ಠಾಪನೆಗೊಳ್ಳುವುದು ಕನಸಿನ ಮಾತು. ಅಮೆರಿಕಾದ ವಿಶ್ವವಿದ್ಯಾಲಯವೊಂದರಲ್ಲಿ ಪ್ರಾರಂಭವಾಯಿತೆನ್ನಲಾದ ಕನ್ನಡ ಪೀಠದ ಕಥೆಯೊಂದು ಕರ್ಮಕಾಂಡ!
ಗುಜರಾತಿನಲ್ಲಿ ಕೆಲ ಆಸಕ್ತರು ತಮ್ಮ ಭಾಷೆಯಲ್ಲಿ ಒಂದು ವಿಶ್ವಕೋಶವಿಲ್ಲವೆಂದೂ, ಅದನ್ನು ಸಿದ್ಧಗೊಳಿಸಬೇಕೆಂದೂ ತೀರ್ಮಾನಿಸಿ ಇಂಥ ಕೆಲಸದ ಮಾದರಿಯೊಂದನ್ನು ಅಧ್ಯಯನ ಮಾಡಿ ಪ್ರಾರಂಭಿಸುವುದು ಒಳಿತೆಂದು ನೆರೆ ಭಾಷೆಯಾದ ಮರಾಠಿ ವಿಶ್ವಕೋಶ ತಯಾರಾಗುತ್ತಿದ್ದ ಸ್ಥಳಕ್ಕೆ ಹೋಗಿ ಚರ್ಚಿಸಿ ಹಿಂತಿರುಗಿ ಬಂದು ತಮ್ಮ ಕೆಲಸ ಪ್ರಾರಂಭಿಸಿದರು. ಕೇವಲ ನಾಲ್ಕೈದು ವರ್ಷಗಳಲ್ಲಿ ಯೋಜನೆಯನ್ನು ಪೂರ್ಣಗೊಳಿಸಿ ಸುಮಾರು ೨೫ ಬೃಹತ್ ಸಂಪುಟಗಳ ವಿಶ್ವಕೋಶವನ್ನು ಬಿಡುಗಡೆ ಮಾಡಿದರು. ಅದರಿಂದ ಬಂದ ಹಣದಿಂದ 'ಗುಜರಾತಿ ವಿಶ್ವಕೋಶ ಸದನ' ಎಂಬ ಒಂದೂವರೆ ಕೋಟಿ ರೂಪಾಯಿಗಳ ಭವನವನ್ನು ಕಟ್ಟಿದರು. ಅದರ ಉದ್ಘಾಟನೆಗೆ ಬಂದ ಮುಖ್ಯಮಂತ್ರಿಗಳು ಉದ್ಘಾಟನಾ ಭಾಷಣ ಮಾಡುತ್ತ ಆ ಇಡೀ ಭವನಕ್ಕೆ ವೆಚ್ಚವಾದ ಕೋಟ್ಯಂತರ ರೂಪಾಯಿಗಳನ್ನ ಸ್ಥಳದಲ್ಲೇ

ಮಂಜೂರು ಮಾಡಿದರು. ಆ ಭವನದಿಂದ ರಸ್ತೆಗೆ 'ವಿಶ್ವಕೋಶ್ ಸಡಕ್' ಎಂದು ನಾಮಕರಣ ಮಾಡಿದರು. ವಿಶ್ವಕೋಶ ತಯಾರಿಸಿದ ಆಸಕ್ತ ಗುಜರಾತಿ ಸಾಹಿತಿಗಳು ಸರ್ಕಾರದ ಹಣದಿಂದ ಕೆಲಸ ಮಾಡಿರಲಿಲ್ಲ. ಇದು ಭಾಷೆಯ ಬಗೆಗಿನ ಪ್ರೀತಿ. ನಮ್ಮ ಕನ್ನಡ ವಿಶ್ವಕೋಶ ಯೋಜನೆ ಪ್ರಾರಂಭವಾಗಿ ನಲವತ್ತು ವರ್ಷಗಳೇ ಆಗಿರಬಹುದು. ಮುಗಿದಿದೆಯೋ ಇಲ್ಲವೋ ನನ್ನ ಬಳಿ ಮಾಹಿತಿ ಇಲ್ಲ.

ಇಷ್ಟೆಲ್ಲ ಪ್ರಸ್ತಾಪಿಸಿದ್ದು ನಿರಾಶಾವಾದವನ್ನು ತೋಡಿಕೊಳ್ಳಲು ಅಲ್ಲ. ಭಾಷೆಯನ್ನು ಬೆಳೆಸಲು, ಔನ್ನತ್ಯಕ್ಕೇರಿಸುವುದಕ್ಕೆ ಬೇಕಾಗಿರುವುದು ಹಣವಲ್ಲ, ಸಂಕಲ್ಪಶಕ್ತಿ. ನಮ್ಮಲ್ಲಿ ಅದು ಇದ್ದರೆ ಎಷ್ಟರಮಟ್ಟಿಗಿದೆ ಎಂಬುದನ್ನು ನಾವು ಪರೀಕ್ಷಿಸಿಕೊಳ್ಳುವ ಕಾಲ ಈಗ ಮತ್ತೊಮ್ಮೆ ಬಂದಿದೆ. ಅದು ಶಾಸ್ತ್ರೀಯ ಸ್ಥಾನಮಾನದ ಘೋಷಣೆಯ ಪ್ರಸ್ತುತ ಗಳಿಗೆ. ಈಗ ನಾವು ಹೊಸದೊಂದು ಹುರುಪಿನಿಂದ, ತನ್ಮಯತೆಯಿಂದ ಕನ್ನಡವನ್ನು ಕಟ್ಟುವ ಕೆಲಸ ಮಾಡಬೇಕಾಗಿದೆ. ಪ್ರಾರಂಭಕ್ಕೊಂದು ತಕರಾರಿತ್ತು. ಕನ್ನಡಕ್ಕಾಗಲಿ, ತೆಲುಗಿಗಾಗಲಿ ಸಾಹಿತ್ಯದ ಪ್ರಾಚೀನ ಪರಂಪರೆಯಿಲ್ಲವೆಂಬುದು ಆ ತಕರಾರು. ಅದರಿಂದಾಗಿ ಶಾಸ್ತ್ರೀಯ ಅರ್ಹತೆ ಇಲ್ಲವೆಂಬ ವಾದ ಅದು. ಒಂದೊಂದು ಭಾಷೆಗೆ ಒಂದೊಂದು ಪರಂಪರೆಯಿರುತ್ತದೆ. ನಮ್ಮ ಸಾಹಿತ್ಯ ೯ನೇ ಶತಮಾನದಿಂದ ಪ್ರಾರಂಭವಾದದ್ದೆಂದು ಹೇಳಿದರೆ ಸಾಲದು. ಕನ್ನಡಕ್ಕಾಗಲೀ, ಇತರ ಯಾವುದೇ ಭಾಷೆಗಾಗಲಿ ಸಾಹಿತ್ಯೇತರ ಪರಂಪರೆಗಳಿರುತ್ತವೆ. ಅದನ್ನು ಗಂಭೀರವಾಗಿ ಪರಿಗಣಿಸಬೇಕು. ನಮ್ಮಲ್ಲಿ ಒಂದು ಸುದೀರ್ಘವಾದ ರಾಜಕೀಯ ಪರಂಪರೆಯಿರಬಹುದು. ಅವೆಲ್ಲವೂ 'ಕ್ಲಾಸಿಕಲ್' ಎಂಬ ಪರಿಧಿಯೊಳಕ್ಕೆ ಸೇರುವಂಥ ವಿಚಾರಗಳು. ಈ ದೃಷ್ಟಿಯಿಂದ ಶಾಸ್ತ್ರೀಯದ ಈ ಹೊತ್ತಿನಲ್ಲಿ ಕನ್ನಡದ್ದೇ ಆದ ಒಂದು ಪರಂಪರೆಯನ್ನು, ಕನ್ನಡ ಜೀವನ ವಿಧಾನವನ್ನು, ಕನ್ನಡ ಆಹಾರ ಪದ್ಧತಿಯನ್ನು, ಕನ್ನಡ ನೈತಿಕತೆಯನ್ನು, ಕನ್ನಡ ಗುಣಸ್ವಭಾವಗಳ ಹಿರಿಮೆಯನ್ನು "ಸಾಧುಗೆ ಸಾಧು ಮಾಧುರ್ಯರಿಗೆ ಮಾಧುರ್ಯನ್, ಬಾದಿಪ್ಪ ಕಲಿಗೆ, ಕಲಿಯುಗ ವಿಪರೀತನ್" ತನವನ್ನು ಜಾಗೃತಗೊಳಿಸಿಕೊಳ್ಳಬೇಕು. ನಮ್ಮ ಕಲೆ ಯಾವುದು, ನಮ್ಮ ಸಂಗೀತ ಯಾವುದು ಎಲ್ಲವನ್ನೂ ಹುಡುಕಿಕೊಳ್ಳಬೇಕು. ನಮ್ಮ ಯಕ್ಷಗಾನ, ನಮ್ಮ ಬಯಲಾಟ, ನಮ್ಮ ಭೂತಗಳು ಮತ್ತೆ ಬಣ್ಣ ಹಚ್ಚಿಕೊಳ್ಳಬೇಕು. ಜೊತೆಜೊತೆಗೆ ಪರಿಶುದ್ಧವಾದ ಬಳಕೆಸ್ನೇಹಿ ಕಂಪ್ಯೂಟರ್ ಸಾಫ್ಟ್‌ವೇರ್‌ಗಳ ನಿರ್ಮಾಣವನ್ನು ತ್ವರಿತಗೊಳಿಸಿ ಎಲ್ಲರಿಗೂ ಕೈಗೆಟಕುವಂತೆ ಮಾಡಬೇಕು. ಈ ಕ್ಷೇತ್ರದಲ್ಲಿ ತಮಿಳು ಮತ್ತಿತರ ಭಾಷೆಗಳಿಗೆ ಹೋಲಿಸಿದರೆ ನಾವು ದಶಕಗಳಷ್ಟು ಹಿಂದೆ ಬಿದ್ದಿದ್ದೇವೆಂಬ ಸುದ್ದಿ ಖಿನ್ನರನ್ನಾಗಿಸುತ್ತದೆ. ಇದನ್ನೆಲ್ಲ ಮಾಡಿಕೊಳ್ಳುವುದಕ್ಕೆ 'ಶಾಸ್ತ್ರೀಯ' ಗರಿಯೇ ನಮ್ಮ ಮುಡಿಗೇರಬೇಕೇನು?

ನಮ್ಮಲ್ಲಿ ನಡೆಯುವ ಮದುವೆಮನೆಗಳಲ್ಲಿ ಹುಡುಗರು ಅಪ್ಪಟ ಉತ್ತರ ಭಾರತದ ಶೇರ್ವಾನಿ ದಿರಿಸು ಧರಿಸಿ ಓಡಾಡುವುನ್ನು ಕಂಡರೆ ಸ್ವಮರುಕವುಂಟಾಗುತ್ತದೆ. ಶಾಸ್ತ್ರೀಯತೆಯ ದಿಕ್ಕಿನತ್ತ ಹೆಜ್ಜೆ ಹಾಕುವುದೆಂದರೆ ಇವೆಲ್ಲವನ್ನೂ ಒಳಗೊಂಡಂತೆ ಕನ್ನಡತನವನ್ನು ಒಂದು ಉತ್ಕೃಷ್ಟ (ಕ್ಲಾಸ್)ತೆಯೆಡೆಗೆ ಕೊಂಡೊಯ್ಯುವುದೇ ಆಗಿದೆಯೇ ವಿನಾ ಕೇವಲ ಸಾಹಿತ್ಯ ಹಾಗೂ ಭಾಷೆಯ ಸಂಶೋಧನೆ, ಪಾಂಡಿತ್ಯಸಿದ್ಧಿಗಷ್ಟೇ ಸೀಮಿತಗೊಳಿಸುವುದಿಲ್ಲ.*

* ಸೌಜನ್ಯ: ಪ್ರಜಾವಾಣಿ, ೮.೧೧.೨೦೦೮.

# 'ಪಾರಂಪರಿಕ ಭಾಷೆ' ಚಾರಿತ್ರಿಕ ಅವಕಾಶ



ಡಾ|| ಕೆ.ವಿ. ನಾರಾಯಣ

**ಒಂದು ಭಾಷೆಗೆ 'ಕ್ಲಾಸಿಕಲ್' ಎಂಬ ಗುರುತನ್ನು ನೀಡುವುದು ಯಾವಾಗ?**

೧. ಅದು ಬಹು ಪ್ರಾಚೀನವಾದ ಭಾಷೆಯಾಗಿರಬೇಕು. ೨. ಅದರಲ್ಲಿ ಅಗಾಧ ಪ್ರಮಾಣದ ಬರವಣಿಗೆ ಇದ್ದು ಆ ಬರವಣಿಗೆಯಲ್ಲಿ ಮಾನವ ಜನಾಂಗಕ್ಕೆ ಬೇಕಾದ ತಿಳುವಳಿಕೆ ಸಂಗ್ರಹಗೊಂಡಿರಬೇಕು. ೩. ಆ ಭಾಷೆಗೆ ಈಗ ಸ್ವಭಾಷಿಕರು ಇರುವುದಿಲ್ಲ. ಒಂದು ವೇಳೆ ಆ ಹೆಸರಿನ ಭಾಷೆಯನ್ನು ಆಡುವವರು ಇದ್ದರೂ ಅವರು ಬಳಸುವ ಭಾಷೆ ಅದರ ಹಳೆಯ ರೂಪದಿಂದ ಗುರುತಿಸಲಾಗದಷ್ಟು ಬದಲಾಗಿರಬೇಕು. ಅರಾಬಿಕ್, ಗ್ರೀಕ್‌ನಂತಹ ಭಾಷೆಗಳನ್ನು ಈಗಲೂ ಆಡುವವರು ಇದ್ದಾರೆ. ಆದರೆ ಅವರು ಬಳಸುತ್ತಿರುವ ಅರಾಬಿಕ್ ಆಗಲೀ ಗ್ರೀಕ್ ಆಗಲೀ ಆ ಭಾಷೆಗಳ ಪ್ರಾಚೀನ ರೂಪಕ್ಕಿಂತ ಬಹಳವಾಗಿ ಭಿನ್ನವಾಗಿವೆ. ಸಂಸ್ಕೃತ, ಲ್ಯಾಟಿನ್ ಭಾಷೆಗಳಿಗಂತೂ ಸ್ವಭಾಷಿಕರು ಇಲ್ಲವೇ ಇಲ್ಲ. (ಕೆಲವರು ಸಂಸ್ಕೃತವನ್ನು ಮಾತಾಡುವವರಿಗೆ ಅದು ಮೊದಲ ಭಾಷೆಯಾಗಿರುವುದಿಲ್ಲ. ಬೇರೊಂದು ಭಾಷೆಯನ್ನು ಕಲಿತ ಮೇಲೆ ಅವರು ಸಂಸ್ಕೃತವನ್ನೂ ಕಲಿತು ಬಳಸುತ್ತಿರಬಹುದು ಅಷ್ಟೇ). ಈ ನಿಟ್ಟಿನಲ್ಲಿ ನೋಡಿದಾಗ ಈಗ ಭಾರತದಲ್ಲಿ ಜನರಾಡುವ ಯಾವ ಭಾಷೆಯೂ 'ಕ್ಲಾಸಿಕಲ್' ಅಲ್ಲ.

ಆದರೆ ಜನರು ಈಗಲೂ ಬಳಸುತ್ತಿರುವುದು ಬಹು ದೀರ್ಘ ಪರಂಪರೆಯಿರುವ ಭಾಷೆಗಳನ್ನು 'ಕ್ಲಾಸಿಕಲ್' ಎಂದು ಗುರುತಿಸಬೇಕೆಂಬ ಬೇಡಿಕೆಯ ಮೇರೆಗೆ ಕೇಂದ್ರ ಸರಕಾರ ೨೦೦೪ರಲ್ಲಿ ತಮಿಳನ್ನು ಈ ಪಟ್ಟಿಯಲ್ಲಿ ಸೇರಿಸುವ ನಿರ್ಣಯವನ್ನು ತೆಗೆದುಕೊಂಡಿತು. ಆ ಬಳಿಕವಷ್ಟೇ ಸಂಸ್ಕೃತವನ್ನೂ 'ಕ್ಲಾಸಿಕಲ್' ಭಾಷೆಗಳ ಪಟ್ಟಿಗೆ ಸೇರಿಸುವ ನಿರ್ಧಾರವನ್ನು ಮಾಡಿತು.

ಇದರಿಂದ ಗೊತ್ತಾಗುವುದಿಷ್ಟು ಒಂದು ಭಾಷೆ 'ಕ್ಲಾಸಿಕಲ್' ಹೌದೋ ಅಲ್ಲವೋ ಎಂಬುದು ತಂತಾನೇ ತೀರ್ಮಾನವಾಗುವ ವಿಷಯವಾಗಿ ಉಳಿದಿಲ್ಲ. ಕೇಂದ್ರ ಸರಕಾರ ತೆಗೆದುಕೊಳ್ಳುವ ಬಹುಮಟ್ಟಿಗೆ ರಾಜಕೀಯ ಲೇಪಿತ ನಿರ್ಣಯದ ಮೇರೆಗೆ ಈ ಗುರುತನ್ನು ಭಾಷೆಗಳು ಪಡೆದುಕೊಳ್ಳುತ್ತಿವೆ. ಈಗ ಕನ್ನಡ ಮತ್ತು ತೆಲುಗು ಈ ಪಟ್ಟಿಗೆ ಸೇರಿಕೊಂಡಿವೆ.

'ಕ್ಲಾಸಿಕಲ್' ಎಂಬ ಇಂಗ್ಲಿಷ್ ಪದಕ್ಕೆ ಸಮ ಎಂಬಂತೆ ಕನ್ನಡ ವಾರ್ತಾ ಮಾಧ್ಯಮಗಳು ಮತ್ತು ವಿದ್ವದ್ವಲಯ 'ಶಾಸ್ತ್ರೀಯ' ಮತ್ತು 'ಅಭಿಜಾತ' ಎಂಬ ಎರಡು ಪದಗಳನ್ನು ಬಳಸುತ್ತಿವೆ. 'ಶಾಸ್ತ್ರೀಯ' ಎಂಬ ಪದಕ್ಕೆ 'ಕಟ್ಟುನಿಟ್ಟಾದ

ನಿಯಮಗಳಿಗೆ ಬದ್ಧವಾದ' ಎಂಬ ಅರ್ಥವಿರುವುದು ಗೊತ್ತಾಗುತ್ತದೆ. 'ಶಾಸ್ತ್ರೀಯ ಸಂಗೀತ' ಎಂಬ ಮಾತಿಗೆ ಇದೇ ಅರ್ಥ ತಾನೇ? ಈ ನಿಟ್ಟಿನಲ್ಲಿ ನೋಡಿದಾಗ ಎಲ್ಲ ಭಾಷೆಗಳೂ ಶಾಸ್ತ್ರೀಯವೇ. ಯಾಕೆಂದರೆ, ನಿಯಮಗಳನ್ನು ಮೀರುವ ಭಾಷೆ ಜಗತ್ತಿನಲ್ಲಿ ಯಾವುದೂ ಇಲ್ಲ. ಎಲ್ಲ ಭಾಷೆಗಳಿಗೂ ಅವುಗಳದ್ದೇ ಆದ ನಿಯಮಾವಳಿಗಳು ಇದ್ದೇ ಇರುತ್ತವೆ. ಹಾಗಾಗಿ ಕೆಲವು ಭಾಷೆಗಳನ್ನು ಮಾತ್ರ ಶಾಸ್ತ್ರೀಯ ಎಂದು ಕರೆಯಲು ಬರುವುದಿಲ್ಲ. 'ಅಭಿಜಾತ' ಎಂಬ ಪದವೂ ಕೂಡ ಹೆಚ್ಚು ಸಾಹಿತ್ಯಿಕವಾದ ನೆಲೆಯನ್ನು ಹೊಂದಿದೆ. ಸರ್ವಶ್ರೇಷ್ಠವಾದ ಮತ್ತು ಕಾಲದ ಪರೀಕ್ಷೆಯನ್ನು ಗೆದ್ದು ನಿಂತ ಕೃತಿಗಳನ್ನು 'ಕ್ಲಾಸಿಕ್' ಎಂದು ಗುರುತಿಸುವುದುಂಟು. ಇವುಗಳನ್ನು 'ಅಭಿಜಾತ' ಕೃತಿಗಳೆಂದು ಕನ್ನಡದಲ್ಲಿ ಕರೆಯಲಾಗುತ್ತಿದೆ. ಇದೂ ಒಂದು ಭಾಷೆಯ ವಿಶಿಷ್ಟ ಲಕ್ಷಣವನ್ನು ಹೇಳಲು ಸಾಧ್ಯವಿರುವ ಪದವೆನಿಸುವುದಿಲ್ಲ.

**ಹಾಗಿದ್ದರೆ ಯಾವುದು ಸರಿಯಾದ ಪದವಾಗಬಹುದು?**

ಭಾಷೆಗಳ ಬಗ್ಗೆ ಚಿಂತಿಸುತ್ತಿರುವವರು ಜಗತ್ತಿನ ಭಾಷೆಗಳಲ್ಲಿ ಬಹುದೀರ್ಘ ಕಾಲದಿಂದಲೂ ಜನಬಳಕೆಯಲ್ಲಿದ್ದು ಈಗಲೂ ಜನಬಳಕೆಯ ಭಾಷೆಗಳಾಗಿಯೇ ಉಳಿದಿರುವ ಭಾಷೆಗಳನ್ನು 'ಪಾರಂಪರಿಕ ಭಾಷೆ' (ಹೆರಿಟೇಜ್ ಲ್ಯಾಂಗ್ವೆಜ್)ಗಳೆಂದು ಗುರುತಿಸುತ್ತಿದ್ದಾರೆ. ಇಂತಹ ಭಾಷೆಗಳನ್ನು ಎರಡನೆಯ ಭಾಷೆಯಾಗಿ ಕಲಿಯಲು ಉತ್ತೇಜಿಸಲಾಗುತ್ತಿದೆ. ಕನ್ನಡದಂತಹ ಭಾಷೆಗಳು ನಿಜವಾಗಿ ಈ ಪಟ್ಟಿಗೆ ಸೇರುತ್ತವೆ ಎಂದು ತೋರುತ್ತದೆ. ಆದ್ದರಿಂದ ಕನ್ನಡವನ್ನು 'ಪಾರಂಪರಿಕ ಭಾಷೆ' ಎಂದು ಕರೆಯುವುದು ಹೆಚ್ಚು ಸರಿಯಾಗುತ್ತದೆ.

ಇದೂ ಅಲ್ಲದೆ ಇನ್ನೂ ಒಂದು ಕಾರಣದಿಂದ ಹೊಸ ಹೆಸರೊಂದು ಅಗತ್ಯವಾಗಿದೆ. 'ಕ್ಲಾಸಿಕಲ್' ಎಂದು ಗುರುತಿಸಲಾದ ಭಾಷೆಗಳಲ್ಲಿ ಈಗ ಜನ ಬಳಸುತ್ತಿರುವ ಆ ಭಾಷೆಯ ರೂಪವನ್ನು 'ಕ್ಲಾಸಿಕಲ್' ಎನ್ನುವುದಿಲ್ಲ. ಆ ಭಾಷೆಯ ಒಂದು ಚಾರಿತ್ರಿಕ ಅವಧಿಯ ಭಾಷೆಯನ್ನು ಹಾಗೆ ಗುರುತಿಸಲಾಗುತ್ತದೆ. ತಮಿಳಿನ ಮಟ್ಟಿಗೆ ಹೇಳುವುದಾದರೆ ಕ್ರಿ.ಶ. ೬೫೦ರ ವರೆಗಿನ ತಮಿಳನ್ನು 'ಕ್ಲಾಸಿಕಲ್' ಎಂದು ಗುರುತಿಸಿಕೊಂಡಿದ್ದಾರೆ. ಕನ್ನಡದಂತಹ ಭಾಷೆಗಳಿಗೆ ನಿರಂತರತೆಯೇ ಒಂದು ಮುಖ್ಯ ಲಕ್ಷಣವಾಗಿರುವುದರಿಂದ ಈ ಭಾಷೆಗಳ ಇಂದಿನ ಜನಬಳಕೆಯ ರೂಪಗಳನ್ನು 'ಕ್ಲಾಸಿಕಲ್' ರೂಪದಿಂದ ಬೇರೆಯಾಗಿ ಇರಿಸುವುದು ಸರಿಯಾಗದು. ಆದ್ದರಿಂದ ಹಿಂದಿನ ರೂಪದ ಮುಂದುವರಿಕೆಯೇ ಇಂದಿನ ರೂಪ ಎಂಬ ತಿಳುವಳಿಕೆಯನ್ನು ಆಧರಿಸಿ ಈ ಭಾಷೆಗಳನ್ನು 'ಪಾರಂಪರಿಕ ಭಾಷೆ'ಗಳೆಂದು ಕರೆಯುವುದೇ ಹೆಚ್ಚು ಸೂಕ್ತವಾದುದು.

**ಯಾಕೆ ಗುರುತಿನ ತವಕ?**

ತಮಿಳನ್ನು 'ಕ್ಲಾಸಿಕಲ್' ಭಾಷೆಯೆಂದು ಗುರುತಿಸಬೇಕೆಂಬ ಕೋರಿಕೆ ೧೯ನೆಯ ಶತಮಾನದ ಕೊನೆಯಲ್ಲೇ ಮಂಡಿತವಾದಂತೆ ತೋರುತ್ತದೆ. ಇದು ಬಲಗೊಂಡು ಎನ್‌ಡಿಎ ಸರಕಾರವಿದ್ದಾಗ ಈ ಬೇಡಿಕೆ ತೀವ್ರವಾಯಿತು. ಉತ್ತರ ಅಮೆರಿಕಾದ ತಮಿಳು ಮತ್ತು ಸಂಸ್ಕೃತ ವಿದ್ವಾಂಸ ಜಾರ್ಜ್ ಎಲ್. ಹಾರ್ಟ್ ಈ ಬೇಡಿಕೆಯನ್ನು ಸಮರ್ಥಿಸಿ ೨೦೦೦ನೆಯ ವರ್ಷದಲ್ಲಿ ನೀಡಿದ ಹೇಳಿಕೆಯೊಂದು ಚಲಾವಣೆ ಪಡೆಯಿತು. ಬಹುಮಟ್ಟಿಗೆ ಭಾರತೀಯ ಭಾಷೆಗಳಲ್ಲಿ ಯಾವುದನ್ನು 'ಕ್ಲಾಸಿಕಲ್' ಎಂದು ಕರೆಯಬೇಕೆಂಬ ಚೌಕಟ್ಟನ್ನು ರೂಪಿಸುವಾಗ ಹಾರ್ಟ್ ನೀಡಿದ ಚೌಕಟ್ಟನ್ನೇ ಪಾಲಿಸಿರುವುದನ್ನು ನೋಡಬಹುದು. ಕೊನೆಗೆ ೨೦೦೪ರಲ್ಲಿ ತಮಿಳು 'ಕ್ಲಾಸಿಕಲ್' ಎಂಬ ಗುರುತನ್ನು ಪಡೆದುಕೊಂಡಿತು. ಈ ಗುರುತು ತಮಗೂ ಬೇಕೆಂಬ ಬೇಡಿಕೆಯನ್ನು ಕನ್ನಡ ಮತ್ತು ತೆಲುಗು ಭಾಷೆಗಳ ವಿದ್ವಾಂಸರು ಮತ್ತು ಅವರ ಮಾತನ್ನು ಬೆಂಬಲಿಸಿದ ರಾಜಕಾರಣಿಗಳು ಮಂಡಿಸಿದರು. ಈಗ, ಮೂರೂವರೆ ವರ್ಷಗಳ ಬಳಿಕ ಕನ್ನಡಕ್ಕೆ ಈ ಗುರುತು ಲಭಿಸಿದೆ.

**ನಮ್ಮ ಭಾಷೆಗೆ 'ಕ್ಲಾಸಿಕಲ್' ಎಂಬ ಗುರುತನ್ನು ಪಡೆದುಕೊಳ್ಳಲು ಯಾಕಿಷ್ಟು ತವಕ?**

ನಮ್ಮ ನೆರೆಯ ರಾಜ್ಯದ ಭಾಷೆಗೆ ಆ ಮನ್ನಣೆ ದೊರಕಿದ್ದರಿಂದ ನಮ್ಮ ಭಾಷೆಗೂ ಆ ಗುರುತು ದೊರಕಲೆಂದು ಬಯಸಿದ್ದು ಒಂದು ಕಾರಣ. ಇದಲ್ಲದೆ ಈ ಗುರುತು ಪಡೆದುಕೊಂಡ ಭಾಷೆಗಳ ಅಭಿವೃದ್ಧಿಗೆ ಕೇಂದ್ರ ಸರಕಾರ ಹೆಚ್ಚಿನ ಪ್ರಮಾಣದ ಅನುದಾನವನ್ನು ನೀಡುತ್ತದೆ; ಆ ಅನುದಾನ ಕನ್ನಡಕ್ಕೂ ದೊರಕಲಿ ಎಂಬ ಬಯಕೆ ಇನ್ನೊಂದು ಕಾರಣ.

ಈಗ ಭಾಷೆಯ ಅಭಿವೃದ್ಧಿ ಎಂದರೇನು – ಎಂಬ ಪ್ರಶ್ನೆಯನ್ನು ನಾವು ಕೇಳಿಕೊಳ್ಳಬೇಕಾಗಿದೆ. ಇಲ್ಲದಿದ್ದರೆ ಅನುದಾನ ಒಂದು ಮರೀಚಿಕೆ ಆಗಬಹುದು, ಇಲ್ಲವೇ ಅಪವ್ಯಯದ ಒಂದು ಹಾದಿಯಾಗಲೂಬಹುದು.

ಈವರೆಗೆ ಕನ್ನಡವನ್ನು ಅಭಿವೃದ್ಧಿಪಡಿಸಲು, ಬೆಳೆಸಲು ಮಾಡಿರುವ ಪ್ರಯತ್ನಗಳನ್ನು ನೋಡಿದರೆ ನಾವು ಸರಿಯಾದ ದಿಕ್ಕಿನಲ್ಲಿ ಹೆಜ್ಜೆಗಳನ್ನು ಇಟ್ಟಿಲ್ಲವೆಂಬುದು ತಿಳಿಯುತ್ತದೆ.

ಭಾಷೆಯ ಅಭಿವೃದ್ಧಿ ಎಂದರೆ ಆ ಭಾಷೆಯನ್ನು ಎಲ್ಲ ವಲಯಗಳಲ್ಲೂ ಹೊಸ ಜಗತ್ತಿನ ಅಗತ್ಯಗಳಿಗೆ ತಕ್ಕಂತೆ ಬಳಸಲು ಸಿದ್ಧಗೊಳಿಸುವುದು ಎಂದರ್ಥ. ಎಲ್ಲ ವಲಯಗಳಲ್ಲೂ ಬಳಸಬೇಕು ಎಂದು ತೀರ್ಮಾನಿಸಿದರೆ ಹಾಗೆ ಹೇಳುವ ಸರಕಾರಿ ಆದೇಶಗಳನ್ನು ಹೊರಡಿಸಿದರೆ ಎಲ್ಲ ಸಮಸ್ಯೆಗಳೂ ಪರಿಹಾರವಾದಂತಲ್ಲ. ಭಾಷೆಯ ಬಳಕೆಗೆ ಅನುಕೂಲವಾಗುವಂತಹ ಭಾಷಾನೀತಿಯನ್ನು ರೂಪಿಸಬೇಕು; ಆ ಭಾಷಾನೀತಿಯನ್ನು ಜಾರಿಗೆ ತರಲು ನೆರವಾಗುವ ಭಾಷಾಯೋಜನೆಗಳನ್ನು ಜಾರಿಗೆ ತರಬೇಕು. ಇದರಿಂದ ದೂರಗಾಮಿಯಾದ ಪರಿಣಾಮಗಳನ್ನು ನಿರೀಕ್ಷಿಸಬಹುದೇ ಹೊರತು ಕೇವಲ ಅಪೇಕ್ಷೆಗಳನ್ನು ಮುಂದಿಡುವುದರಿಂದಲ್ಲ.

ಕರ್ನಾಟಕವೆಂಬ ಈ ರಾಜ್ಯವನ್ನು ರೂಪಿಸಿ ೫೦ ವರ್ಷಗಳು ಕಳೆದರೂ ನಾಡಿನ ಮುಖ್ಯವಾಹಿನಿಯಲ್ಲಿ ಕನ್ನಡದ ಸ್ಥಾನವೇನೆಂಬುದನ್ನು ಖಚಿತಗೊಳಿಸಲು ಇನ್ನೂ ಸಾಧ್ಯವಾಗಿಲ್ಲ. ಇದಕ್ಕೆ ಯುಕ್ತ ಭಾಷಾನೀತಿ ಮತ್ತು ಭಾಷಾ ಯೋಜನೆಗಳು ಇಲ್ಲದಿರುವುದೂ ಒಂದು ಮುಖ್ಯ ಕಾರಣ. ಕನ್ನಡಕ್ಕೆ 'ಕ್ಲಾಸಿಕಲ್ ಭಾಷೆ' ಎಂಬ ಗುರುತು ದೊರಕಿರುವ ಸಂದರ್ಭದಲ್ಲಾದರೂ ಈ ಕೊರತೆಯನ್ನೂ ನೀಗಿಕೊಳ್ಳಲು ಮುಂದಾಗಬೇಕಿದೆ.

**ಕನ್ನಡ ಎಷ್ಟು ಹಳೆಯದು?**

ನಾವೀಗ ದಿನವೂ ಮಾತಾಡಲು ಬಳಸುತ್ತಿರುವ ಕನ್ನಡವೆಂಬ ಭಾಷೆ ಎರಡು ಸಾವಿರ ವರ್ಷಕ್ಕೂ ಮಿಕ್ಕಿದಷ್ಟು ಹಳೆಯದು. ಈಗ ತಮಿಳು, ತೆಲುಗು, ಕನ್ನಡ, ತುಳು, ಮಲೆಯಾಳಂ, ಕೊಡಗು, ತೊದವ ಎಂದು ಬೇರೆಬೇರೆಯಾಗಿರುವ ಭಾಷೆಗಳೆಲ್ಲವೂ ಒಂದು ಕಾಲಕ್ಕೆ ಒಂದೇ ಆಗಿದ್ದವು. ಅಂದರೆ ಈ ಭಾಷೆಗಳನ್ನಾಡುವ ಪ್ರದೇಶಗಳಲ್ಲಿದ್ದ ಜನರು ಒಂದೇ ಭಾಷೆಯನ್ನಾಡುತ್ತಿದ್ದರು. ಆ ಭಾಷೆಯೇ ವಿವಿಧ ಬಗೆಗಳಾಗಿ ಕವಲೊಡೆದು ಹೀಗೆ ಹಲವು ಭಾಷೆಗಳು ಬಳಕೆಗೆ ಬಂದಿವೆ.

ಇದೆಲ್ಲವೂ ನಡೆದದ್ದು ಏಕೆ ಮತ್ತು ಯಾವಾಗ ಎಂಬುದನ್ನು ನಿಖರವಾಗಿ ಹೇಳಲು ಆಗುವುದಿಲ್ಲ. ಆದರೂ ಕೆಲವು ಪುರಾವೆಗಳನ್ನು ಆಧರಿಸಿ ಈ ಭಾಷೆಗಳೆಲ್ಲವೂ ಸ್ವತಂತ್ರ ಭಾಷೆಗಳಾದುದು ಯಾವಾಗ ಎಂದು ಹೇಳಲು ಸಾಧ್ಯವಿದೆ.

ವಿದ್ವಾಂಸರು ಈ ಕುರಿತು ಕಳೆದ ಒಂದು ಶತಮಾನದಿಂದ ಸಾಕಷ್ಟು ಸಂಗತಿಗಳನ್ನು ಮಂಡಿಸಿದ್ದಾರೆ. ಇಂತಹ ಪುರಾವೆಗಳು ಕೆಲವೊಮ್ಮೆ ನೇರವಾಗಿ ಕನ್ನಡದ ಮಾಹಿತಿಯನ್ನೇ ನೀಡುತ್ತಿರಬಹುದು. ಮತ್ತೆ ಕೆಲವೊಮ್ಮೆ ಈ ಪುರಾವೆಗಳು ಪರೋಕ್ಷವಾಗಿ ಕನ್ನಡದ ಅಸ್ತಿತ್ವವನ್ನು ನಮಗೆ ತೋರಿಸುತ್ತಿರಬಹುದು.

ಈಗ ಬಹುಮಟ್ಟಿಗೆ ಎಲ್ಲರೂ ಕನ್ನಡ ಬರವಣಿಗೆಯ ಮೊದಲ ದಾಖಲೆ ಎಂದು ಹಾಸನ ಜಿಲ್ಲೆಯ ಹಲ್ಮಿಡಿ (= ಹನ್ಮಿಡಿ) ಎಂಬ ಊರಿನಲ್ಲಿ ದೊರಕಿರುವ ಕ್ರಿ.ಶ. ೪೫೦ರ ಕದಂಬ ರಾಜರ ಕಾಲದ ಶಾಸನವನ್ನು ಗುರುತಿಸಿದ್ದಾರೆ. ಈ ಶಾಸನದಲ್ಲಿ ಕನ್ನಡ ಬರವಣಿಗೆಗೆ ಬೇಕಾದ ಲಿಪಿ ವ್ಯವಸ್ಥೆಯನ್ನು ರೂಪಿಸಿಕೊಂಡದ್ದೂ ಗೊತ್ತಾಗುತ್ತಿದೆ.

ಕೆಲವು ವಿದ್ವಾಂಸರು ಇದಕ್ಕಿಂತಲೂ ಮೊದಲಿನ ಕೆಲವು ಕನ್ನಡ ಶಾಸನಗಳಿವೆಯೆಂದು ಗುರುತಿಸಿದ್ದಾರಾದರೂ ಎಲ್ಲರೂ ಆ ಬಗೆಗೆ ಸಹಮತವನ್ನು ಹೊಂದಿಲ್ಲ. ಗಂಗರಾಜ ಕೊಂಗುಣಿವರ್ಮನ ಎರಡು ಶಾಸನಗಳು ಹಲ್ಮಿಡಿ ಶಾಸನಕ್ಕಿಂತಲೂ ಹಳೆಯವು ಎಂಬ ವಾದವೂ ಇದೆ. ಆದರೆ ಅವು ಕೂಟ ಶಾಸನಗಳೆಂದು ವಿದ್ವಾಂಸರು ವಾದಿಸುತ್ತಾರೆ.

ಕೂಟ ಶಾಸನಗಳೆಂದರೇನು? ಹಾಗೆಂದರೆ, ಸುಳ್ಳು ದಾಖಲೆಗಳೆಂದು ಸರಳವಾಗಿ ಹೇಳಬಹುದು. ಅಂದರೆ ದಾನದತ್ತಿಗಳನ್ನು ಕುರಿತು ಹೇಳುವ ನಕಲಿ ಶಾಸನಗಳನ್ನು ಸೃಷ್ಟಿಸುವ ಪದ್ಧತಿ ಇತ್ತೆಂದು ವಿದ್ವಾಂಸರು ವಾದಿಸುತ್ತಾರೆ. ಅಂದರೆ ಆ ಶಾಸನಗಳು ಬೇಕೆಂದೇ ಹಳೆಯ ಕಾಲದವೆಂಬ ಸೋಗನ್ನು ಹಾಕುತ್ತವೆ ಎಂದು ವಾದಿಸಲಾಗಿದೆ.

ಆದರೆ ಈ ವಾದ ಯಾವಾಗಲೂ ನಿಜವಾಗಿರಬೇಕಿಲ್ಲ. ಯಾಕೆಂದರೆ, ದಾನ ನೀಡಿದ ಶಾಸನ ಯಾವುದೋ ಕಾರಣದಿಂದ ಹಾಳಾಗುವಂತಿದ್ದರೆ ಮುಂದೆ ಯಾರೋ ಒಬ್ಬರು ಆ ಶಾಸನದ ಪಾಠವನ್ನು ತಮ್ಮ ಕಾಲದ ಬರವಣಿಗೆಯ ರೀತಿಯಲ್ಲಿ ನಕಲು ಮಾಡಿಕೊಳ್ಳುತ್ತಿದ್ದರು. ಹೀಗಾಗಿ ಬೇರೆ ಕಾಲದ ಶಾಸನಗಳೆಂದು ನಾವು ತಿಳಿದಿರುವ ಕೆಲವು ಶಾಸನಗಳಾದರೂ ಹಿಂದೆ ಇದ್ದ ನಿಜವಾದ ಶಾಸನಗಳ ಪ್ರತಿಗಳಾಗಿರಬೇಕು. ಹೀಗಾಗಿ ಹಲ್ಮಿಡಿ ಶಾಸನಕ್ಕಿಂತಲೂ ಹಿಂದಿನ ಅವಧಿಯವು ಎಂದು ಹೇಳಲಾಗಿರುವ ಕನ್ನಡ ಶಾಸನಗಳನ್ನು ಮತ್ತೆ ನಾವು ಪರಿಶೀಲಿಸಬೇಕಾಗಿದೆ. ಅವು ನಿಜವಾಗಿಯೂ ಹಳೆಯವೇ ಆತರಬಹುದು.

ಇದಲ್ಲದೆ ಕನ್ನಡ ಬರವಣಿಗೆಯ ದಾಖಲೆಗಳಲ್ಲದಿದ್ದರೂ ಈ ಭಾಷೆಯನ್ನು ಆಡುತ್ತಿದ್ದ ಜನರ ಬಗೆಗೆ ಮಾಹಿತಿಗಳು ನಮಗೆ ದೊರಕುತ್ತವೆ; ಅಲ್ಲದೆ ಕನ್ನಡ ಮಾತಿನ ಉಲ್ಲೇಖಗಳು ಕೂಡ ಅಲ್ಲಲ್ಲಿ ಸಿಗುತ್ತವೆ. ತಮಿಳಿನ ಸಂಗಂ ಸಾಹಿತ್ಯದಲ್ಲಿ ಕೃತಿ ರಚನೆ ಮಾಡಿದ ಎಷ್ಟೋ ಕವಿಗಳು ತಮಿಳು ಭಾಷಾ ಪ್ರದೇಶಕ್ಕೆ ಸೇರಿದವರಾಗಿರಲಿಲ್ಲವೆಂದೂ ಅವರಲ್ಲಿ ಕೆಲವರಾದರೂ ಕನ್ನಡ ಮಾತಾಡುತ್ತಿದ್ದ ಪ್ರದೇಶಗಳಿಂದ ಹೋದವರೆಂದೂ ಪ್ರೊ. ಷ. ಶೆಟ್ಟರ್ ತೋರಿಸಿಕೊಟ್ಟಿದ್ದಾರೆ. ಈ ಕವಿಗಳೆಲ್ಲ ತಮಿಳಿನಲ್ಲಿ ಕಾವ್ಯವನ್ನು ರಚನೆ ಮಾಡಿದ್ದರೂ ಅವರು ಆಡುತ್ತಿದ್ದ ಭಾಷೆ ಕನ್ನಡವೇ ಆಗಿದ್ದಿರಬೇಕು ಎಂದು ವಾದಿಸಲು ಬರುತ್ತದೆ. ಅದೂ ಅಲ್ಲದೆ ಸಂಗಂ ಕಾವ್ಯದಲ್ಲಿ ಕಾಣಬರುವ ಹಲವು ತಮಿಳು ರೂಪಗಳು ಇಂದಿನ ತಮಿಳಿನಲ್ಲಿ ಕಾಣಿಸುವುದಿಲ್ಲ. ಆದರೆ ಅಂತಹ ರೂಪಗಳಲ್ಲಿ ಕೆಲವು ಕನ್ನಡದಲ್ಲಿ ಇವೆ. ಇದರಿಂದಲೂ ಕನ್ನಡವು ತಮಿಳು ಸಂಗಂ ಸಾಹಿತ್ಯ ರಚನೆಯ ಕಾಲದಲ್ಲಿ ಒಂದು ಸ್ವತಂತ್ರ ಭಾಷೆಯಾಗಿ ಬಳಕೆಯಲ್ಲಿತ್ತು ಎಂದು ಹೇಳಲು ಸಾಧ್ಯವಿದೆ.

ಇಂತಹ ಹಲವಾರು ಮಾಹಿತಿಗಳನ್ನು ಈಗಾಗಲೇ ಬೇರೆ ಬೇರೆ ಕಡೆಗಳಲ್ಲಿ ಪಟ್ಟಿ ಮಾಡಿಕೊಡಲಾಗಿದೆ. ಅಶೋಕನ ಬ್ರಹ್ಮಗಿರಿಯ ಶಾಸನದಲ್ಲಿ ಬರುವ 'ಇಸಿಲ' ಎಂಬ ಪದ. ಗ್ರೀಕ್ ಪ್ರವಾಸಿ ಟಾಲೆಮಿ ತನ್ನ ಪ್ರವಾಸ ಕಥನದಲ್ಲಿ ಹೆಸರಿಸುವ ಕನ್ನಡ ನಾಡಿನ ಊರಿನ ಹೆಸರುಗಳು, ಗ್ರೀಕ್ ನಾಟಕವೊಂದರಲ್ಲಿ

ಬರುವ ಕನ್ನಡ ಮಾತುಗಳು, ತಮಿಳುನಾಡಿನ ಸಿತ್ತಿನವಾಸಲ್ ಎಂಬಲ್ಲಿ ದೊರಕಿದ ಶಾಸನದಲ್ಲಿ ಕಂಡುಬರುವ ಕನ್ನಡ ಪದಗಳು, ಹಾಲ ರಾಜ ಎಂಬಾತ ಬರೆದ ಪ್ರಾಕೃತ ಭಾಷೆಯ 'ಗಾಥಾ ಸಪ್ತಶತಿ' ಎಂಬ ಕೃತಿಯಲ್ಲಿ ಇರುವ ಕನ್ನಡ ಪದಗಳು – ಹೀಗೆ ಈ ಪಟ್ಟಿ ಬೆಳೆಯುತ್ತಲೇ ಹೋಗುತ್ತದೆ. ಇವೆಲ್ಲವೂ ಕ್ರಿಸ್ತಪೂರ್ವ ಎರಡನೆಯ ಶತಮಾನದಿಂದ ಮೂರನೆಯ ಶತಮಾನದ ಅವಧಿಗೆ ಸೇರಿದ ದಾಖಲೆಗಳು ಎನ್ನುವುದನ್ನು ಗಮನದಲ್ಲಿಡಬೇಕು. ಅಂದರೆ ಈ ಕಾಲಾವಧಿಯ ಹೊತ್ತಿಗೆ ಕನ್ನಡ ಜನರ ಆಡುಭಾಷೆಯಾಗಿ ಬಳಕೆಯಲ್ಲಿತ್ತು ಮತ್ತು ಬರೆಯಲು ಅನುಕೂಲವಾದ ಲಿಪಿ ವ್ಯವಸ್ಥೆಯೊಂದನ್ನು ರೂಪಿಸಿಕೊಂಡಿತ್ತು ಎಂದು ತಿಳಿಯಬಹುದಾಗಿದೆ.

ಬರವಣಿಗೆಗೆ ಸಂಬಂಧಿಸಿದಂತೆ ಹೇಳುವುದಾದರೆ ತಮಿಳಿಗಿಂತ ಕನ್ನಡ ಒಂದು ಹೆಜ್ಜೆ ಮುಂದೆ ಹೋದಂತೆ ತೋರುತ್ತದೆ. ತಮಿಳು ತನ್ನ 'ಕ್ಲಾಸಿಕಲ್ ಸಾಹಿತ್ಯ' ಎಂದು ಕರೆದುಕೊಳ್ಳುತ್ತಿರುವ ಸಂಗಂ ಕಾಲದ ರಚನೆಗಳು ಬರಹ ರೂಪದಲ್ಲಿರಲಿಲ್ಲ. ಅವು ಬಾಯ್ದೆರೆಯ ರಚನೆಗಳಾಗಿದ್ದವು. ಅವುಗಳು ಲಿಪಿ ರೂಪಕ್ಕೆ ಬಂದದ್ದೇ ಕ್ರಿಸ್ತಶಕ ಆರು – ಏಳನೆಯ ಶತಮಾನದ ಬಳಿಕ. ಆ ಕಾಲದ ಶಾಸ್ತ್ರಸಾಹಿತ್ಯ ಕೃತಿಯೆಂದು ಗುರುತಿಸಲಾಗಿರುವ 'ತೊಲ್‌ಕಾಪ್ಪಿಯಂ' ಕೂಡ ಹೀಗೆ ಬಾಯ್ದೆರೆಯಲ್ಲೇ ಇದ್ದು, ಅನಂತರ ಲಿಖಿತ ರೂಪವನ್ನು ಪಡೆದುಕೊಂಡಂತಿದೆ.

ಈ ಕಾವ್ಯಕೃತಿಗಳು ರಚನೆಯಾಗುತ್ತಿದ್ದ ಅವಧಿಯಲ್ಲಿ ತಮಿಳಿಗೆ ಒಂದು ಬರವಣಿಗೆಯ ವ್ಯವಸ್ಥೆ ಇದ್ದಿತಾದರೂ ಅದು ಸಮರ್ಥವಾಗಿದ್ದಂತೆ ತೋರುವುದಿಲ್ಲ. ಈ ಅವಧಿಯ ಶಾಸನಗಳೆಲ್ಲ ಕೆಲವೇ ಅಕ್ಷರಗಳನ್ನು ಹೊಂದಿರುವಂಥವು. ಅತಿ ಉದ್ದದ ಶಾಸನದಲ್ಲಿ ೫೨ ಅಕ್ಷರಗಳಿವೆ. ಹಾಗೆ ನೋಡಿದರೆ ತಮಿಳಿಗೆ ಸುವ್ಯವಸ್ಥಿತವಾದ ಬರವಣಿಗೆಯ ಚೌಕಟ್ಟನ್ನು ನೀಡಿದ ವಟ್ಟೆಳತ್ತು ಎಂಬ ಬರವಣಿಗೆಯ ಬಗೆ ಅಲ್ಲಿ ನೆಲೆಗೊಂಡದ್ದೇ ಕ್ರಿಸ್ತಶಕ ಆರನೆಯ ಶತಮಾನದ ಬಳಿಕ. ಅದೂ ಕನ್ನಡ ಮಾತಾಡುವ ಪ್ರದೇಶದಿಂದ ಹೋದವರೆನ್ನಲಾದ ಕಳಭ್ರ ಅರಸರು ಈ ಲಿಪಿ ವ್ಯವಸ್ಥೆಯನ್ನು ತಮಿಳಿಗೆ ಒದಗಿಸಿದರು ಎಂದು ಹೇಳಲಾಗಿದೆ.

## ಕನ್ನಡ ಪ್ರಭೇದಗಳ ಅಧ್ಯಯನ

ಇಷ್ಟು ಹಳೆಯದಾದ ಕನ್ನಡ ಮುಂದೆ ಜನರ ಮಾತಿನಲ್ಲಿ, ಬರವಣಿಗೆಯಲ್ಲಿ ನೆಲೆಗೊಂಡು ಈಗ ೨೧ನೆಯ ಶತಮಾನದ ಸವಾಲುಗಳನ್ನು ಎದುರಿಸಲು ಸಿದ್ಧಗೊಳ್ಳುತ್ತಿದೆ. ಈ ಅವಧಿಯಲ್ಲಿ ಕನ್ನಡದ ರಚನೆಯಲ್ಲಿ ಹಲವು ಬದಲಾವಣೆಗಳಾಗಿವೆ.

ಚಾರಿತ್ರಿಕವಾಗಿ ಕನ್ನಡದ ನಾಲ್ಕು ಪ್ರಭೇದಗಳನ್ನು ಗುರುತಿಸುತ್ತಾರೆ. ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಎಂಬುವೇ ಈ ನಾಲ್ಕು ಚಾರಿತ್ರಿಕ ಪ್ರಭೇದಗಳು. ಇವುಗಳಲ್ಲಿ ಹೊಸಗನ್ನಡವನ್ನು ಬಿಟ್ಟು ಉಳಿದ ಮೂರೂ ಪ್ರಭೇದಗಳನ್ನು 'ಕ್ಲಾಸಿಕಲ್ ಕನ್ನಡದ ಮಾದರಿ'ಗಳೆಂದು ತಿಳಿಯುವ ದಿಕ್ಕಿನಲ್ಲಿ ಚಿಂತನೆಗಳು ಹರಿಯುತ್ತಿವೆ. ಇದು ಸರಿಯಾದುದಲ್ಲ. ಕನ್ನಡ ಈಗಲೂ ಜನ ಬಳಸುತ್ತಿರುವ ಭಾಷೆ. ಹಾಗಾಗಿ ಈಗ ನಾವು ಬಳಸುವ ಕನ್ನಡವನ್ನೂ ಈ ವ್ಯಾಖ್ಯಾನದೊಳಗೆ ಸೇರಿಸುವುದು ಸೂಕ್ತ. ಆಗ ಮಾತ್ರ 'ಕ್ಲಾಸಿಕಲ್' ಎಂಬ ಗುರುತಿಗೆ ಹೆಚ್ಚಿನ ಮಹತ್ತ್ವ ಬರುತ್ತದೆ.

ಕನ್ನಡದ ಹಿಂದಿನ ಪ್ರಭೇದಗಳನ್ನು ಈಗ ಏಕೆ ಅಧ್ಯಯನ ಮಾಡಬೇಕು? ಪೂರ್ವದ ಹಳಗನ್ನಡವನ್ನು ಕಲಿತು ಅದನ್ನು ಬಳಸಲು ಸಾಧ್ಯವೇ? ಈ ಪ್ರಶ್ನೆಗಳು ಈಗ ಕನ್ನಡವನ್ನು ಬಳಸುತ್ತಿರುವವರನ್ನು ಕಾಡಿಸಬಹುದು. ಆದರೆ ಈ ಸಮಸ್ಯೆಯನ್ನು ಬೇರೊಂದು ಬಗೆಯಲ್ಲಿ ನೋಡೋಣ.



ಕನ್ನಡ ಜನಭಾಷೆಯಾಗಿ ಬೆಳೆದುಬಂದಿದೆ. ಜನರ ನಿಡುಗಾಲದ ಜೀವನ ಕ್ರಮದಿಂದ ಕೂಡಿಕೊಂಡ ತಿಳುವಳಿಕೆ ಈ ಭಾಷೆಯಲ್ಲಿ ಅಡಕಗೊಂಡಿರುತ್ತದೆ. ಅಂದರೆ ಜನರು ಬದುಕುವ ಕ್ರಮಕ್ಕೂ ಅವರಾಡುವ ಭಾಷೆಗೂ ನಿಕಟ ಸಂಬಂಧವಿದೆಯೆಂದು ನಾವು ತಿಳಿದರೆ ಆಗ ನಿರಂತರವಾಗಿ ಬಳಕೆಯಾಗುತ್ತಿರುವ ಕನ್ನಡದ ಸ್ವರೂಪವನ್ನು ತಿಳಿಯುವುದಕ್ಕೆ ಅರ್ಥವಿರುತ್ತದೆ. ಕನ್ನಡ ಮನಸ್ಸುಗಳು ಹೇಗೆ ಚಿಂತಿಸಿದವು ಎಂಬುದನ್ನು ತಿಳಿಯುವುದರಿಂದ ಈಗ ನಮಗೂ ನಮ್ಮ ಕನ್ನಡಕ್ಕೂ ಇರುವ ಸಂಬಂಧದ ನೆಲೆಗಳನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ. ಹಾಗಾಗಿ ಕನ್ನಡದ ಹಳೆಯ ರೂಪಗಳನ್ನು ಕುರಿತು ಅಧ್ಯಯನ ಮಾಡುವುದು ಕೇವಲ ಪಾಂಡಿತ್ಯದ ಆಸಕ್ತಿ ಮಾತ್ರವಾಗಿ ಉಳಿಯಲಾರದು; ಉಳಿಯಬಾರದು.

**ಬಿಕ್ಕಟ್ಟು – ಪರಿಹಾರವೇನು?**

ಹೊಸಗನ್ನಡ ಎದುರಿಸುತ್ತಿರುವ ಬಿಕ್ಕಟ್ಟುಗಳನ್ನು ಪರಿಹರಿಸಲು ನಾವೀಗ ಸನ್ನದ್ಧವಾಗಬೇಕಿದೆ. ಆಧುನಿಕಗೊಳ್ಳುವ ಹಂಬಲದಲ್ಲಿ ನಾವು ಕನ್ನಡವನ್ನು 'ತೆಗೆದುಕೊಳ್ಳುವ' ಭಾಷೆಯಾಗಿ ರೂಪಿಸಿಕೊಂಡಿದ್ದೇವೆ. ಜಗತ್ತಿನಲ್ಲಿರುವ ಎಲ್ಲವೂ ಕನ್ನಡಕ್ಕೆ ಹರಿದು ಬರಲಿ ಎಂಬುದನ್ನು ಧ್ಯೇಯವಾಕ್ಯವೆಂಬಂತೆ ಆಚರಿಸುತ್ತಿದ್ದೇವೆ. ಇದರಿಂದ 'ಕನ್ನಡಿಗರ ತಿಳಿವಳಿಕೆ' ಹೆಚ್ಚಿದೆ ಎನ್ನುವುದೇನೋ ನಿಜ. ಆದರೆ ಅದು 'ಕನ್ನಡದ ತಿಳಿವಳಿಕೆ'ಯಾಗಿಲ್ಲ. ಹೊರ ಮೂಲಗಳಿಂದ ಹರಿದು ಬಂದದ್ದನ್ನು ನಮ್ಮದೆಂದು ತಿಳಿದು ನಡೆಯುತ್ತಿದ್ದೇವೆ. ಇದು ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳ ಮುಖಾಮುಖಿಯಲ್ಲಿ ಸಿದ್ಧಗೊಂಡಿರುವ ನೆಲೆಯಾಗಿದೆ. ಇಂಗ್ಲಿಷ್ 'ಕೊಡುವ ಭಾಷೆ'ಯಾಗಿಯೂ ಕನ್ನಡ 'ತೆಗೆದುಕೊಳ್ಳುವ ಭಾಷೆ'ಯಾಗಿಯೂ ಪಾತ್ರವನ್ನು ಹಂಚಿಕೊಂಡಿವೆ. ತೆಗೆದುಕೊಳ್ಳುವ ಭಾಷೆಯಾಗಿರುವ ಕನ್ನಡ ಅದಕ್ಕೆ ತಕ್ಕಂತೆ ತನ್ನ ರಚನೆಗಳನ್ನು, ನುಡಿಗಟ್ಟುಗಳನ್ನು ರೂಪಿಸಿಕೊಂಡಿದೆ. ದುಃಖದ ಮಾತೆಂದರೆ ಇದೊಂದು ಅಪಾಯಕಾರಿ ಸ್ಥಿತಿ ಎಂದು ನಮಗೆ ಅನ್ನಿಸುತ್ತಲೇ ಇಲ್ಲ. ಕನ್ನಡ ತನಗೆ ವಹಿಸಲಾಗಿರುವ ಈ ಪಾತ್ರದ ಇಕ್ಕಟ್ಟಿನಿಂದ ಹೊರಬಂದು ತಾನೂ ಕೊಡುವ ಭಾಷೆಯಾಗಿ ಹೊಸಹುಟ್ಟನ್ನು ಪಡೆದುಕೊಳ್ಳಬೇಕಿದೆ.

**ಹಾಗಿದ್ದರೆ ಏನು ಮಾಡಬೇಕು?**

ಕನ್ನಡದಲ್ಲಿ ಸ್ವತಂತ್ರ ಚಿಂತನೆಗಳು ಮೂಡುವುದು ಅಸಾಧ್ಯವೆಂಬ ನೆಲೆಯಲ್ಲಿ ನಿಂತಿರುವುದನ್ನು ಮೊದಲು ನಮ್ಮ ಅರಿವಿನ ಪರಿಧಿಗೆ ತಂದುಕೊಳ್ಳಬೇಕು; ಬಳಿಕ ಸ್ವತಂತ್ರ ಚಿಂತನೆಗಳು ಕನ್ನಡದಲ್ಲೂ ಮೂಡಿಬರಲು ಸಾಧ್ಯ ಎನ್ನುವುದನ್ನು ನಂಬಬೇಕು. ಹಾಗೆ ಮೂಡಲು ಅನುಕೂಲವಾಗುವ ತೆರದಲ್ಲಿ ನಮ್ಮ ಭಾಷೆಯನ್ನು ಬೆಳೆಸಬೇಕು. ಅದರ ನುಡಿಕಟ್ಟುಗಳನ್ನು ತಿದ್ದಬೇಕು. ಈ ನಿಟ್ಟಿನಲ್ಲಿ ನಮಗೆ ಕನ್ನಡದ ಹಿಂದಿನ ಪ್ರಭೇದಗಳಿಂದ ಪಡೆದುಕೊಳ್ಳುವುದು ಬೇಕಾದಷ್ಟಿದೆ. ಜೊತೆಗೆ ಕನ್ನಡದ ಇಂದಿನ ಪ್ರಭೇದಗಳಲ್ಲೂ ನಮಗೆ ಬೇಕಾದ ಸಾಮಗ್ರಿ ಅಡಕವಾಗಿದೆ. ಅದನ್ನು ಮರುಮನನ ಮಾಡುವತ್ತ ಯೋಜನೆಗಳನ್ನು ರೂಪಿಸಿಕೊಳ್ಳಬೇಕು. ನಾವಿನ್ನೂ ಕನ್ನಡದ ಅಂಚಿನ ಭಾಷೆಗಳಾದ ಸೋಲಿಗ, ಜೇನುಕುರುಬ, ಬಡಗ, ಆಲುಕುರುಂಬ, ಕಾಡು ಕುರುಂಬ, ಇರುಳ ಮುಂತಾದ ನುಡಿಗಳನ್ನು ಸರಿಯಾಗಿ ಅಧ್ಯಯನ ಮಾಡಿಲ್ಲ. ಈ ನುಡಿಗಳಲ್ಲಿ ಅಡಕಗೊಂಡಿರುವ ಲೋಕದೃಷ್ಟಿಯನ್ನು ಅನಾವರಣಗೊಳಿಸಿಕೊಂಡಿಲ್ಲ. ಇವೆಲ್ಲವನ್ನೂ ಈಗ ಕೈಗೆತ್ತಿಕೊಳ್ಳಬೇಕು.

ಆಗ ಕನ್ನಡಕ್ಕೆ ಸ್ವಾಯತ್ತತೆ ಎನ್ನುವುದು ಸಹಜವಾಗಿಯೇ ಸಾಧ್ಯವಾಗುತ್ತದೆ. ಕನ್ನಡಕ್ಕೆ ಸಿಕ್ಕ ಈ ಹೊಸ ಗುರುತು ಈ ದಿಕ್ಕಿನತ್ತ ಕನ್ನಡವನ್ನು ಕರೆದೊಯ್ಯಬೇಕಿದೆ. ಇದೊಂದು ಚಾರಿತ್ರಿಕ ಅವಕಾಶ. ಇದರ ಸದುಪಯೋಗ ಆಗದಿದ್ದರೆ, ಈ ಅವಕಾಶವನ್ನು ಬಳಸಿ ಕನ್ನಡವನ್ನು ೨೧ನೆಯ ಶತಮಾನದ ಭಾಷೆಯನ್ನಾಗಿ ಕನ್ನಡಿಗರಿಗೆ ರೂಪಿಸಿಕೊಡದಿದ್ದರೆ ಈ ಗುರುತು ಕೇವಲ ಸಾಂಕೇತಿಕವಾಗಿಬಿಡುವ ಅಪಾಯವಿದೆ.*

ತರಂಗ, ೨೦.೧೦.೨೦೦೫



# ಶಾಸ್ತ್ರೀಯ ಭಾಷೆ ಸ್ಥಾನಮಾನ: ಮುಂದೇನು?



ಪ್ರೊ. ಟಿ.ವಿ. ವೆಂಕಟಾಚಲ ಶಾಸ್ತ್ರೀ

ಕನ್ನಡಕ್ಕೆ 'ಶಾಸ್ತ್ರೀಯ ಭಾಷೆ'ಯ ಸ್ಥಾನಮಾನಗಳು ದೊರೆತವು ಎನ್ನುವುದು ಆ ಸಂಬಂಧವಾಗಿ ನಡೆದ ಹೋರಾಟಗಳ ದೃಷ್ಟಿಯಿಂದ ನೆಮ್ಮದಿಯ ಸಂಗತಿ. ಕೇಂದ್ರ ಸರಕಾರದಿಂದ ಅಧಿಕೃತವಾದ ಆದೇಶ ಇನ್ನೂ ಬರಬೇಕಾಗಿದೆ. ಅದು ಬಂದ ಮೇಲ್ಲೆ, ಈಗಾಗಲೇ ತಮಿಳು ಭಾಷೆಗೆ ಹಾಕಿಕೊಂಡಿರುವ ಯೋಜನೆಗಳ ರೂಪುರೇಷೆಗಳು ಮತ್ತು ಕೈಗೊಂಡಿರುವ ಕಾರ್ಯಕ್ರಮಗಳನ್ನು ವಿವರವಾಗಿ ಪರಿಶೀಲಿಸಿ, ನಮ್ಮ ಅಗತ್ಯ ಅವಕಾಶ ಆದ್ಯತೆಗಳಿಗೆ ಅನುಸಾರವಾಗಿ ನಾವು ಸ್ವತಂತ್ರವಾಗಿ ವಿಚಾರ ಮಾಡಿ ನಮ್ಮ ಯೋಜನೆಗಳ ಸ್ವರೂಪವನ್ನು ಗೊತ್ತುಮಾಡಿಕೊಳ್ಳಬಹುದು, ಕಾರ್ಯಕ್ರಮಗಳನ್ನು ಕೈಗೊಳ್ಳಬಹುದು. ಈ ಸಂಬಂಧದಲ್ಲಿ ಕರ್ನಾಟಕದಲ್ಲಿ, ಭಾಷೆ, ಸಾಹಿತ್ಯಗಳು, ಸಂಸ್ಕೃತಿ, ಇತಿಹಾಸಗಳು ಇವುಗಳ ಸಂವರ್ಧನೆಗೆ ಕೆಲಸ ಮಾಡುತ್ತಿರುವ ವಿಶ್ವವಿದ್ಯಾನಿಲಯಗಳೂ ಸೇರಿದಂತೆ ಎಲ್ಲಾ ಸರಕಾರಿ, ಅರೆಸರಕಾರಿ ಮತ್ತು ಖಾಸಗಿ ಸಂಘ-ಸಂಸ್ಥೆಗಳು ಅವುಗಳ ಶಕ್ತಿ, ಅರ್ಹತೆಗಳ ಮೇಲೆ ಅನುದಾನ ಪಡೆದು ಕನ್ನಡದ ಮುನ್ನಡೆಗೆ ಶ್ರಮಿಸಬಹುದಾಗಿದೆ. ಹೀಗೆ ಶ್ರಮಿಸುವಾಗ ಕೆಲಸಗಳು ಕಳಪೆಯಾಗದಂತೆ, ಪುನರಾವೃತ್ತಿ ಮಾಡುವ ಕೆಲಸಗಳಲ್ಲಿ ಅನುದಾನದ ಅಪವ್ಯಯವಾಗದಂತೆ ನೋಡಿಕೊಳ್ಳಬೇಕಾದದ್ದು ಸಂಬಂಧಪಟ್ಟವರ ಜವಾಬ್ದಾರಿ.

'ಶಾಸ್ತ್ರೀಯ ಭಾಷೆ'ಯ ಸಂಬಂಧದಲ್ಲಿ ಈಗಾಗಲೇ ಆಗಿರುವ ಕೆಲಸಕ್ಕಿಂತ ಆಗಬೇಕಾಗಿರುವ ಕೆಲಸವೇ ಹೆಚ್ಚು ಕನಿಷ್ಠ ಪಕ್ಷ ೧೦೦-೧೫೦ ವರ್ಷಗಳಿಗೆ ಸಾಕಾಗುವಷ್ಟು ಕೆಲಸ ಯೋಜಕರಿಗಾಗಿ, ಸಂಶೋಧಕ ವಿದ್ವಾಂಸರಿಗಾಗಿ ಕಾಯುತ್ತಿದೆ. ಶಾಸ್ತ್ರೀಯಭಾಷೆ-ಸಾಹಿತ್ಯ ಎಂಬ ಮಾತುಗಳು ನಮ್ಮ ಹಳೆಯ ಭಾಷೆ-ಸಾಹಿತ್ಯಗಳ ಸತ್ತ್ವ ಸ್ವರೂಪಗಳನ್ನು ಸಮರ್ಪಕವಾಗಿ ಇಂಗಿತಗೊಳಿಸುವುದಿಲ್ಲ ಎಂದು ಭಾವಿಸಿ, ಈಚೆಗೆ ಬೇರೆ ಬೇರೆ ಸಲಹೆಗಳು ಸೂಚಿತವಾಗುತ್ತಿವೆ. ಇವುಗಳಲ್ಲಿ ಕೆಲವು ಹಳೆಯ ಅಂಗೀಕೃತ ಗ್ರಹಿಕೆಗಳನ್ನು ಪುನರುಜ್ಜೀವಿಸುವಂಥವು, ಇನ್ನು ಕೆಲವು ಹೊಸದಾಗಿ ಕಲ್ಪಿಸಬಹುದಾದಂಥವು. ಈ ಎರಡರಲ್ಲಿಯೂ ಅವ್ಯಾಪ್ತಿ, ಅತಿವ್ಯಾಪ್ತಿ, ಅನ್ಯಥಾ ವ್ಯಾಪ್ತಿಗಳಿಗೆ ಅವಕಾಶವುಂಟೆಂದು ಯಾರಾದರೂ ವಾದಿಸಬಹುದು. ಉದಾ: ಪ್ರಚಾರದಲ್ಲಿರುವ 'ಶಾಸ್ತ್ರೀಯ ಭಾಷೆ' ಎಂಬ ಮಾತನ್ನೇ ತೆಗೆದುಕೊಳ್ಳೋಣ. ನೃತ್ಯ, ಸಂಗೀತಗಳು ಅವುಗಳ ಶಾಸ್ತ್ರಗ್ರಂಥಗಳಲ್ಲಿ ಉಕ್ತವಾದ ಲಕ್ಷಣಗಳಿಗೆ ಅನುಸಾರವಾಗಿದ್ದಾಗ ಶಾಸ್ತ್ರೀಯ ನೃತ್ಯ, ಶಾಸ್ತ್ರೀಯ ಸಂಗೀತ ಎಂದಾಗುತ್ತವೆ. ಆದರೆ ಶಾಸ್ತ್ರೀಯ ಭಾಷೆಯ,

*Lexicons:*

The earliest of these is one attributed to Ranna and named *Rannakanda*. *Sabdasara*, *Karnataka-Nighantu*, *Chaturasya-Nighantu*, *Karnataka-Sabdamanjari*, *Kabbigara-Kaipidi*, *Kavi-Kanthahara*, *Karnataka-Sanjivana* and others explain the meaning of Halagannada words; while *Vastukósa*, *Nanabhidhana*, *Nanartha-Ratnakara* and other works give Kannada synonyms for Sanskrit words. Besides, there are commentaries on the Sanskrit lexicons of Amara, Halayudha, etc., and on lexicons bearing on medicine.

ಸಾಹಿತ್ಯದ ವಿಷಯದಲ್ಲಿ ಅದು ಹಾಗಲ್ಲ. ಇಲ್ಲಿ ವ್ಯಾಕರಣಾದಿ ಶಾಸ್ತ್ರಗಳ ಲಕ್ಷಣಾಂಶಗಳ ವಿವಕ್ಷೆಗಿಂತ ಬೇರೆ ಕಾವ್ಯಗುಣಗಳು, ಸತ್ತ್ವ ಸ್ವರೂಪಗಳು ಮುಖ್ಯವಾದವು. ಇನ್ನು ಪರಂಪರೆ ಮೂಲವಾಗಿ ಕಲ್ಪಿಸಲಾಗುವ ಪಾರಂಪರಿಕ ಭಾಷೆ, ಸಾಹಿತ್ಯ ಎಂಬ ಮಾತುಗಳು. ಪರಂಪರೆ ಎನ್ನುವುದು tradition/heritage ಎಂಬ ಅರ್ಥವುಳ್ಳದ್ದು, ಕ್ಲಾಸಿಕಲ್ ಎಂಬ ಅರ್ಥವುಳ್ಳದ್ದಲ್ಲ ಎಂಬುದಾಗಿ ಯಾರಾದರೂ ವಾದಿಸಬಹುದು. ಹಳಗನ್ನಡ ಭಾಷೆಯಲ್ಲಿರುವ ಪ್ರಾಚೀನ ಕನ್ನಡ ಸಾಹಿತ್ಯ ಕೃತಿಗಳ ಸಮುಚ್ಚಯವನ್ನು ಮಾರ್ಗ ಸಾಹಿತ್ಯ, ಅಭಿಜಾತ ಸಾಹಿತ್ಯ ಎಂಬುದಾಗಿ ಕರೆಯುವ ರೂಢಿ ಎಂದಿನಿಂದಲೂ ಇದೆ. ಇವೆರಡೂ ಸಮಾನ ಆಶಯಗಳುಳ್ಳವು. ಮುಖ್ಯವಾಗಿ ಶ್ರೇಷ್ಠತೆ, ಘನತೆ, ಸೌಂದರ್ಯ, ಪ್ರೌಢಿಮೆ ಮೊದಲಾದ ಲಕ್ಷಣಗಳು ಯಾವ ಹಳೆಯ ಸಾಹಿತ್ಯದಲ್ಲಿ ಸೃಷ್ಟಿಮೂಲದಲ್ಲಿಯೇ ಕಂಡುಬರುತ್ತದೆಯೋ, ಸಂಪದ್ಯುಕ್ತವಾಗಿ ವ್ಯಾಪಿಸಿದೆಯೋ ಆ ಸಾಹಿತ್ಯ ಮಾರ್ಗಸಾಹಿತ್ಯ, ಅಭಿಜಾತ ಸಾಹಿತ್ಯ ಎನಿಸುತ್ತದೆ ಎಂದು ಹೇಳಬಹುದಾಗಿದೆ. ಆದರೆ ಈಗ ಈ ಎರಡೂ ಪದಗಳು ಅಂಥ ಪ್ರಚಾರದಲ್ಲಿಲ್ಲ. ಅಲ್ಲದೆ, ಅವು ಪಂಡಿತ ಪ್ರಯೋಗದಂತೆ ಕಾಣುತ್ತವೆ. ಕನ್ನಡದ ಶಾಸನಸಾಹಿತ್ಯವನ್ನೂ ಒಳಗೊಂಡ ಹಾಗೆ, ಈಗ ವರ್ತಮಾನ ಸನ್ನಿವೇಶದಲ್ಲಿ ಆಧುನಿಕ–ಪೂರ್ವಕಾಲದ ಕನ್ನಡ ಸಾಹಿತ್ಯವನ್ನು 'ಪ್ರಾಚೀನ ಸಾಹಿತ್ಯ' ಎಂಬುದಾಗಿ ಎಲ್ಲರಿಗೂ ತಿಳಿಯುವ ಹಾಗೆ ಕರೆದು, ನಮ್ಮ ಯೋಜನೆಗಳನ್ನು 'ಪ್ರಾಚೀನ ಕನ್ನಡ ಭಾಷೆ ಸಾಹಿತ್ಯ, ಸಂಸ್ಕೃತಿ ಅಧ್ಯಯನಗಳು' ಎಂಬುದಾಗಿ ನಿರ್ದೇಶಿಸಬಹುದಲ್ಲವೆ?

ನಮ್ಮ ಅಧ್ಯಯನ ಸಂಶೋಧನೆಗಳ ವ್ಯಾಪ್ತಿ ಸುಲಭವಾಗಿ ಕ್ರಿ.ಶ. ದ ಆರಂಭದಿಂದ (ಅಥವಾ ಕ್ರಿ.ಶ. ೪೫೦ ಹಲ್ಮಿಡಿ ಶಾಸನ ಕಾಲದಿಂದ) ಕ್ರಿ.ಶ. ೧೭೫೦ರವರೆಗೆ (ಸು. ೧೫೦೦ ವರ್ಷ). ಎಂದರೆ ಎಲ್ಲಿಯವರೆಗೆ ಹಳಗನ್ನಡದ ಚಂಪೂಕಾವ್ಯಗಳೂ ನಡುಗನ್ನಡದ ಷಟ್ಪದಿ ಮತ್ತು ಸಾಂಗತ್ಯ ಕಾವ್ಯಗಳೂ ಅವಿರತಧಾರೆಯಾಗಿ ರಚಿತವಾಗತೊಡಗಿದವೋ ಅಲ್ಲಿಯವರೆಗೆ, ವಿಸ್ತಾರಗೊಳ್ಳಲು ಅವಕಾಶವಾಗುತ್ತದೆ. ವಾಸ್ತವವಾಗಿ, ಕರ್ನಾಟಕ ಕವಿಚರಿತೆಕಾರರು ಮೊದಲುಗೊಂಡು ಈಚಿನ ಸಾಹಿತ್ಯ ಚರಿತ್ರಕಾರರೆಲ್ಲ ಪ್ರಾಚೀನ ಕನ್ನಡ ಸಾಹಿತ್ಯದ ಗಡಿರೇಖೆಯನ್ನು ಸು. ೧೭೫೦ ಎಂಬುದಾಗಿ ಗುರುತಿಸುವ ಸಾಮಾನ್ಯವಾದ ಪರಿಪಾಠವಿದೆ. ಕನ್ನಡ ಭಾಷೆ ಸಾಹಿತ್ಯಗಳ ವ್ಯವಸಾಯದಲ್ಲಿಯೂ ಅಧ್ಯಯನಗಳಲ್ಲಿಯೂ ಇನ್ನೂ ಐರೋಪ್ಯ ಪ್ರಭಾವ, ವಿಶೇಷವಾಗಿ ಇಂಗ್ಲಿಷ್ ಭಾಷೆ ಸಾಹಿತ್ಯಗಳ ಪ್ರಭಾವ, ಕಾಣದಿರುವ ಅವಧಿ ಅದು.

ಹೀಗೆ ಅಧ್ಯಯನ ಶೋಧನೆಗಳಿಗೆ ಕಾಲಘಟ್ಟವನ್ನು ಗುರುತಿಸಿಕೊಳ್ಳುವುದರಲ್ಲಿ ವಿಶೇಷವಾದ ಅನುಕೂಲಗಳಿವೆ. ಪ್ರಯೋಜನಗಳೂ ಇವೆ. ಇದರಿಂದ ನಡುಗನ್ನಡ ಕಾಲದ ವಚನಕಾರರೂ, ಹರಿದಾಸರೂ, ಕುಮಾರವ್ಯಾಸ ಮೊದಲಾದ ಭಾಗವತ ಕವಿಗಳೂ ರತ್ನಾಕರವರ್ಣಿ, ನಂಜುಂಡಕವಿ, ಮಂಗರಸರಂಥ ಪ್ರಸಿದ್ಧ ಸಾಂಗತ್ಯಕಾರರೂ ಸೇರ್ಪಡೆಯಾಗುತ್ತಾರೆ. ಪ್ರಾಚೀನ ಕನ್ನಡ ಸಾಹಿತ್ಯದ ಮಹಾಕವಿಗಳ ಪಂಕ್ತಿಯಲ್ಲಿ ಪಂಪ, ಕುಮಾರವ್ಯಾಸರೊಂದಿಗೆ ರತ್ನಾಕರವರ್ಣಿ, ನಂಜುಂಡ ಕವಿಗಳನ್ನೂ ಸೇರಿಸುವ ರೂಢಿಯಿದೆಯೆಂಬುದನ್ನಿಲ್ಲಿ ವಿಶೇಷವಾಗಿ ನೆನೆಯಬೇಕು. ಈ ಕವಿಗಳ ಸಂಬಂಧವಾಗಿ ಕೆಲಸಗಳು ಹೆಚ್ಚಾಗಿ ನಡೆದಿಲ್ಲ.

ಪ್ರಾಚೀನ ಕನ್ನಡ ಸಾಹಿತ್ಯವೂ ಚಂಪೂಕಾವ್ಯಗಳ ಉತ್ಕರ್ಷೆಯೂ ಮುಗಿದುಹೋಯಿತೆಂಬ ೧೪ನೆಯ ಶತಮಾನಕ್ಕೆ ಅವಧಿ ಸೀಮಿತಗೊಂಡರೆ, ಆ

Cookery

The earliest work bearing on this subject i; the one written by Jayabandhunandana. Mangarasa and others have also written on the subject.

ಮುಂದಿನ ಅವಧಿಯಲ್ಲಿ ರಚಿತವಾಗಿ ಇನ್ನೂ ಹಸ್ತಪ್ರತಿಗಳಲ್ಲಿಯೇ ಹುದುಗಿ ಕುಳಿತಿರುವ ನೂರಾರು ಅಪ್ರಕಟಿತ, ಅಸಂಶೋಧಿತ ಶ್ರೇಷ್ಠ ಗ್ರಂಥಗಳು ಶಾಶ್ವತವಾಗಿ ಅಪರಿಚಿತವಾಗಿಯೇ ಉಳಿದುಹೋಗಿ ಉಪೇಕ್ಷೆಗೆ ಗುರಿಯಾಗುವ ಅಪಾಯವಿದೆ. ಆಗ ಸಾವಿರ ಸಾವಿರಗಟ್ಟಲೆ ಪದ್ಯಗಳಿರುವ ಎಷ್ಟೋ ಚಂಪೂಕಾವ್ಯಗಳೂ, ಷಟ್ಪದಿ ಮತ್ತು ಸಾಂಗತ್ಯ ಕಾವ್ಯಗಳೂ, ಸಾವಿರಗಟ್ಟಲೆ ಸಾಲುಗಳಿರುವ ಪ್ರಾಚೀನ ಗದ್ಯ ಗ್ರಂಥಗಳೂ ಬೆಳಕು ಕಾಣದೆ ಹೋಗುತ್ತವೆ. ಉದಾ: ಚಿಕದೇವರಾಜ ಒಡೆಯರ (೧೬೭೨-೧೭೦೪) ಆಳಿಕೆಯ ಅವಧಿಯಲ್ಲಿ ಸುಮಾರು ಇಪ್ಪತ್ತಾದರೂ ದೊಡ್ಡ ಪ್ರಮಾಣದ ಚಂಪೂ ಕಾವ್ಯಗಳು ರಚಿತವಾಗಿದ್ದು, ಇವುಗಳಲ್ಲಿ ಎಲ್ಲವೂ ಪ್ರಕಟವಾಗಿರುವಂತೆ ತೋರುವುದಿಲ್ಲ. ಹಾಗೆಯೇ ಉಳಿದ ಪ್ರಕಾರದವು ಕೂಡ.

ಅಗತ್ಯವಾಗಿ, ತುರ್ತಾಗಿ ಬೆಳಕುಕಾಣಬೇಕಾಗಿರುವ, ಅಧ್ಯಯನಗಳು ನಡೆಯಬೇಕಾಗಿರುವ ಗ್ರಂಥರಾಶಿಯಲ್ಲಿ ಕಾವ್ಯಗಳೂ ಪುರಾಣಗಳೂ ಇರುವ ವಿಚಾರವಿರುವ ಕ್ಷೇತ್ರದ ಮಹಾತ್ಮ್ಯಗಳಿವೆ, ರಾಜ್ಯಗಳ ಇತಿಹಾಸ ಗ್ರಂಥಗಳಿವೆ, ಭಾಷಾವಿಷಯಕ, ಚಮತ್ಕಾರ ಗ್ರಂಥಗಳಿವೆ. ಲೋಕೋಪಕಾರಕಗಳಾದ ಗಣಿತಶಾಸ್ತ್ರ, ಖಡ್ಗಶಾಸ್ತ್ರ, ರತ್ನ ಶಾಸ್ತ್ರ, ವೈದ್ಯಶಾಸ್ತ್ರ, ವೃಷ್ಟಿಶಾಸ್ತ್ರ, ರಸವೈದ್ಯ, ಸೂಪವಿದ್ಯೆ ಮೊದಲಾದ ಶಾಸ್ತ್ರವಿಷಯದ ಅಮೂಲ್ಯವಾದ ರಚನೆಗಳಿವೆ. ದಿಟವಾಗಿ ಈ ಶಾಸ್ತ್ರಗ್ರಂಥಗಳು ಸರಳವಾದ ಹೊಸಗನ್ನಡದಲ್ಲಿ ಇಂಗ್ಲಿಷ್ ಭಾಷಾಂತರಗಳಲ್ಲಿ ಈಗ ಪ್ರಚಾರಕ್ಕೆ ಬರಬೇಕಾಗಿವೆ. ಇವೆಲ್ಲ ಕರ್ನಾಟಕದ ಸಮಾಜ, ಸಂಸ್ಕೃತಿಗಳ, ಧರ್ಮ ಇತಿಹಾಸಗಳ ಹೆಚ್ಚಿನ ತಿಳಿವಳಿಕೆಗೆ ಸಹಾಯ ಮಾಡುವಂಥವು. ತಪ್ಪು ತಡೆಗಳನ್ನು ಕಳೆಯುವಂಥವು. ಇನ್ನು ಪ್ರಾಚೀನ ಗದ್ಯದ ಸ್ವರೂಪವಂತೂ ಅಪ್ರಕಟಿತ ಗದ್ಯಗ್ರಂಥಗಳು ಪೂರ್ಣವಾಗಿ ಪ್ರಕಟಗೊಂಡಿಲ್ಲದೆ, ಅಧ್ಯಯನಗಳಿಗೆ ಒಳಪಟ್ಟಿಲ್ಲದೆ ವಿಶದವಾಗುವಂತಿಲ್ಲ, ಹಳೆಯ ಶಾಸನಗಳ, ಹಸ್ತಪ್ರತಿಗಳ ಲಿಪಿಗಳನ್ನು ಪರಿಚಯಿಸಿದಲ್ಲದೆ ಇದು ಶಕ್ಯವಿಲ್ಲ.

ನಾಡು ನುಡಿಗಳ ಚರಿತ್ರೆಗೆ ಶಾಸನಗಳೇ ಮೂಲ ಸಾಮಗ್ರಿ. ಇವುಗಳ ಅಭ್ಯಾಸ ವಿವಿಧ ಮುಖಗಳಲ್ಲಿ, ವ್ಯವಸ್ಥಿತ ಕ್ರಮಗಳಲ್ಲಿ ಇನ್ನೂ ನಡೆಯಬೇಕಾದ್ದು. ಈಗಾಗಲೇ ಮೂಲ ಪಠ್ಯಗಳು ಶಿಲೆಯಿಂದ, ಲೋಹಪಟಗಳಿಂದ ಕಾಗದಕ್ಕೆ ಇಳಿದು ಆಗಿದೆ. ಇವು ಈಗಿನ 'ಕಚ್ಚಾರೂಪ'ದಲ್ಲಿ ಅಲ್ಲದೆ, ಕವಿಲಿಖಿತವಾದ ಶುದ್ಧ, ಛಂದೋಬದ್ಧ ರೂಪಗಳಿಗೆ ಪರಿವರ್ತಿತವಾಗಿ ಅಭ್ಯಾಸಕ್ಕೆ ಒದಗಬೇಕಾಗಿದೆ. ಇತಿಹಾಸ, ಸಮಾಜ, ಸಂಸ್ಕೃತಿಗಳ ಪುನಾರಚನೆಗೆ ಅವುಗಳ ಪ್ರಯೋಜನ ಪಡೆಯುವುದು ಹಾಗಿರಲಿ, ಅವುಗಳ ಭಾಷೆ, ಶೈಲಿ, ಛಂದಸ್ಸು, ಕವಿಗಳು, ವಿಶಿಷ್ಟ ಶಬ್ದಗಳು, ಸಂದರ್ಭಗಳು ಅಭ್ಯಾಸಕ್ಕೆ ಕಾದುಕೊಂಡಿವೆ. ಸಂಕಲನಗ್ರಂಥಗಳು ರಾಜಮನೆತನಗಳಿಗೆ ಸಂಬಂಧಿಸಿದ ಹಾಗೆ Corpus ರೂಪದಲ್ಲಿ ಶುದ್ಧವಾಗಿ ಸಂಪಾದಿತವಾಗಿ ಬರಬೇಕಾಗಿವೆ. ನಾಡು ನುಡಿಗಳ ಪರಂಪರೆಗೆ ಅವುಗಳ ಕೊಡುಗೆ ಇನ್ನೂ ಸ್ಪಷ್ಟಪಡಬೇಕಾಗಿದೆ. ಶಾಸನ ಪಾಠಗಳ ಹೊಸಗನ್ನಡ ರೂಪಗಳೂ, ಇಂಗ್ಲಿಷ್ ಭಾಷಾಂತರಗಳೂ ಬರಬೇಕಾಗಿವೆ. ಉಲ್ಲೇಖಗೊಂಡ ಸ್ಥಳನಾಮ ವ್ಯಕ್ತಿನಾಮಗಳ ವಿಶ್ಲೇಷಣೆಗಳಾಗಬೇಕಾಗಿದೆ.

*Astrology, Meteorology*

The earliest work on astrology is the *Jātakatilaka* of Sridharāchārya. Other works bearing on it and allied subjects are *Lōkōpakāra*, *Raṭṭamata*, *Raṭṭama-Jātaka*, *Narapingali*, *Mārkaṇḍēya-purāṇa*, *Sakunaprapancha*, etc. There are likewise commentaries on *Sūryasiddhānta* and other Sanskrit works on Astronomy.

*Mathematics*

Under this head there are works treating of Arithmetic, Algebra and Geometry written by Rājāditya, Bhāskara, Timmarasa, Bālavaidyada-Cheluva, and others. There are also commentaries on Mahāvīrāchārya's *Gaṇitasārasangraha*, and other mathematical works. Mahāvīrāchārya's work was translated into Telugu by Pāvalūri Mallaṇṇa in about 1200.

ಅಳಿದ ಮೇಲೆ, ಈಗ ಉಳಿದುಕೊಂಡಿರುವ ಹಸ್ತಪ್ರತಿಗಳ ಸಂಗ್ರಹ, ಸಂರಕ್ಷಣೆ, ಕ್ರೋಡೀಕೃತ ಸೂಚಿನಿರ್ಮಾಣ ಇವು ತ್ವರಿತಗೊಂಡು ಮುಗಿಯುತ್ತಿದ್ದ ಹಾಗೆಯೇ ಒಂದೊಂದೂ ಗ್ರಂಥದ ಸುಸಂಪಾದಿತ ಕೃತಿ ಸಿದ್ಧವಾಗಿ ಪ್ರಕಟವಾಗಬೇಕಾಗಿದೆ. ಇನ್ನೂ ಪ್ರಕಟವಾಗಿರದ ನೂರಾರು ಹಸ್ತಪ್ರತಿಗಳಿವೆ. ಪ್ರಾಚೀನ ಕನ್ನಡ ಸಾಹಿತ್ಯದ ಸಮಗ್ರ ವಿವರಣಾತ್ಮಕ ಸೂಚಿ ಹಲವು ಸಂಪುಟಗಳಲ್ಲಿ ಸಿದ್ಧವಾಗಬೇಕಾಗಿದೆ. ಇವುಗಳಲ್ಲಿ ಮುದ್ರಿತ, ಅಮುದ್ರಿತ ಮತ್ತು ಹಸ್ತಪ್ರತಿ ಲಭ್ಯತೆ ಇವುಗಳ ಮಾಹಿತಿ ಇರಬೇಕಾಗುವುದು. ಆದ್ಯತೆಯೊಂದಿಗೆ ಆಗಬೇಕಾಗಿರುವ ಕೆಲಸವೆಂದರೆ ಲೋಕೋಪಕಾರಕಗಳಾದ ಶಾಸ್ತ್ರಗ್ರಂಥಗಳ ಸಂಪಾದನೆ ಮತ್ತು ಅವಕ್ಕೆ ಹೊಸಗನ್ನಡ ಮತ್ತು ಇಂಗ್ಲಿಷ್ ಅನುವಾದಗಳು. ಪ್ರಸಿದ್ಧವಾದ ಪ್ರಾಚೀನ ಸಾಹಿತ್ಯಕೃತಿಗಳ (ಉದಾ: ಪಂಪಭಾರತ, ಕುಮಾರವ್ಯಾಸ ಭಾರತ, ಜೈಮಿನಿಭಾರತ, ಕವಿರಾಜಮಾರ್ಗ, ಶಬ್ದಮಣಿದರ್ಪಣ, ಛಂದೋಂಬುಧಿ ಇ.) ಸವಿಮರ್ಶ ಪರಿಷ್ಕರಣಗಳ ಸಿದ್ಧತೆ. ಶತಶತಮಾನಗಳ ಕನ್ನಡ ಭಾಷೆಯ ಬೆಳವಣಿಗೆಯನ್ನು ವರ್ಣನಾತ್ಮಕ, ಐತಿಹಾಸಿಕ ಹಾಗೂ ತುಲನಾತ್ಮಕ ನೆಲೆಗಳಲ್ಲಿ ವಿವರವಾಗಿ ನಿರೂಪಿಸುವುದು; ಎಂದರೆ ಕನ್ನಡ ಭಾಷೆಯ ಸಮಗ್ರ ಚರಿತ್ರೆ. ಗ್ರಂಥಸ್ಥ ಸ್ಥಳನಾಮ. ವ್ಯಕ್ತಿನಾಮಗಳ ಭಾಷಿಕ ಮತ್ತು ಸಾಂಸ್ಕೃತಿಕ ವಿಶ್ಲೇಷಣೆ. ಶಾಸನ ಸಾಹಿತ್ಯ ಮತ್ತು ಪ್ರಾಚೀನ ಕನ್ನಡ ಸಾಹಿತ್ಯ ಇವನ್ನು ಆಧರಿಸಿ ಒಂದು ವಿಸ್ತೃತ ಪ್ರಮಾಣದ ಸಾಂಸ್ಕೃತಿಕ ಪದಕೋಶವನ್ನು ೨ ಅಥವಾ ೩ ಸಂಪುಟಗಳಲ್ಲಿ ಸಿದ್ಧ ಮಾಡಬೇಕು, ಅದು ವಿಶ್ವಕೋಶವೂ ಆಗಬಹುದು.

ಶಾಸನಗಳು ಮತ್ತು ಪ್ರಾಚೀನ ಕನ್ನಡ ಸಾಹಿತ್ಯಗಳನ್ನು ಆಧರಿಸಿ ಗಾದೆಗಳು, ಒಗಟುಗಳು, ಜನಪದರ ಆಚಾರ-ವಿಚಾರಗಳು ಮೊದಲಾದವುಗಳ ನಿರೂಪಣೆ. ಪ್ರಾಚೀನ ಕನ್ನಡ ಸಾಹಿತ್ಯದ ಚಳವಳಿಗಳು ಮತ್ತು ಕರ್ನಾಟಕ ಸಂಸ್ಕೃತಿಯ ಚಲನವಲನಗಳು. ಸಾಹಿತ್ಯಿಕವಾಗಿ ಸಂಸ್ಕೃತ ಪ್ರಾಕೃತ ಅಪಭ್ರಂಶ ಭಾಷೆಗಳೊಂದಿಗೆ ಕನ್ನಡದ, ಅನ್ಯ ದ್ರಾವಿಡಭಾಷೆಗಳೊಂದಿಗೆ ಕನ್ನಡದ ತುಲನಾತ್ಮಕ ಅಧ್ಯಯನ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಧಾರ್ಮಿಕ ಪಂಗಡಗಳ, ಸಂಪ್ರದಾಯಗಳ ಒಳಪ್ರವಾಹಗಳು, ವಿವರಗಳು. ಕನ್ನಡ ಭಾಷೆ ಸಾಹಿತ್ಯಗಳ ಪ್ರಾಚೀನತೆಯ ಇತಿಹಾಸದ ವಿಸ್ತೃತ ವಿವೇಚನೆ. ಶಾಸನ ಸಾಹಿತ್ಯ ಪ್ರಾಚೀನ ಸಾಹಿತ್ಯಗಳ ಕ್ಷೇತ್ರದಲ್ಲಿ ಕೆಲಸ ಮಾಡಿದ ಗಣ್ಯ ವಿದ್ವಾಂಸರ, ಸಂಶೋಧಕರ ಜೀವನಚರಿತ್ರೆಗಳು ಮತ್ತು ಸಾಧನೆಯ ಇತಿಹಾಸ.

ಈಚೆಗೆ ವಿಶ್ವವಿದ್ಯಾನಿಲಯಗಳೂ ಸಾಹಿತ್ಯ ಪರಿಷತ್ತು, ಅಕಾಡೆಮಿಗಳೂ ಅಭಿಜಾತ ಸಾಹಿತ್ಯದ ಅಧ್ಯಯನಗಳಿಗೆ ಪೋಷಕವಾದ ಪ್ರೋತ್ಸಾಹಕವಾದ ವಾತಾವರಣವನ್ನು ನಿರ್ಮಿಸುತ್ತಿಲ್ಲ ಎಂಬ ಮಾತು ಕೇಳಿಬರುತ್ತಿದೆ. ಹೀಗಾಗಿ ನಮ್ಮ ಭಾಷೆಗೆ ಹೆಮ್ಮೆಯ ಕೋಡು ಮೂಡಿಸಿದ ಪಂಪ, ರನ್ನರ, ಜನ್ನ, ನೇಮಿಚಂದ್ರರ, ಕುಮಾರವ್ಯಾಸ, ಲಕ್ಷ್ಮೀಶರ ಕೃತಿಗಳನ್ನು ಧೀರಗಂಭೀರವಾದ ದನಿಯಲ್ಲಿ ವಾಚಿಸುವ,

ರಸಸ್ಥಾನಗಳನ್ನು ಹಿಡಿದು ವ್ಯಾಖ್ಯಾನಿಸುವ, ಭಾಷಾಶೈಲಿಗಳ ಗತಿ, ಗಮಕಗಳ ಸೂಕ್ಷ್ಮತೆಗಳನ್ನು ವಿಶ್ಲೇಷಿಸುವ ಯುವ ಪೀಳಿಗೆಯೇ ಕಣ್ಮರೆಯಾಗುತ್ತಿರುವಂತೆ ಭಾಸವಾಗುತ್ತಿದೆ. ಈ ದಿಕ್ಕಿನಲ್ಲಿ ಸಾಹಿತ್ಯಾಸಕ್ತ ಯುವಕ–ಯುವತಿಯರಿಗೆ ಪ್ರೋತ್ಸಾಹದಾಯಕ ಯೋಜನೆಗಳು ಏರ್ಪಡಬೇಕು. ಮಾರ್ಗದರ್ಶನ ಶಿಕ್ಷಣಗಳು ದೊರೆಯಬೇಕು.

ವಿದೇಶದ ವಿಶ್ವವಿದ್ಯಾನಿಲಯಗಳಲ್ಲಿ Professor of Classics ಎಂಬ ಹುದ್ದೆಯೇ ಇರುತ್ತಿದ್ದುದನ್ನು ನಾನು ಗಮನಿಸಿದ್ದೇನೆ. ಮುಂದೆ ಕನ್ನಡ ಭಾಷೆಗೆ ದೊರೆಯಲಿರುವ ಅಭಿಜಾತ ಸಾಹಿತ್ಯದ ಸ್ಥಾನಮಾನಗಳಲ್ಲಿ ಈ ತೆರನ ಹುದ್ದೆ ಅಥವಾ ಹುದ್ದೆಗಳನ್ನು ಕಲ್ಪಿಸಿಕೊಳ್ಳಬಹುದಾಗಿದೆ. ಈ ಹುದ್ದೆಗಳು ವ್ಯಾಕರಣ, ಛಂದಸ್ಸು, ಗ್ರಂಥ ಸಂಪಾದನೆ, ಶಾಸನಾಧ್ಯಯನ, ಸಾಹಿತ್ಯಚರಿತ್ರೆ, ಭಾಷಾವಿಜ್ಞಾನ, ನಿಘಂಟುಶಾಸ್ತ್ರ ಮೊದಲಾದ ಬೇರೆ ಬೇರೆ ಶಾಖೆಗಳಿಗೆ ಕೂಡ ಏರ್ಪಡಬಹುದಾಗಿದೆ. ಆಗ ಆಯಾ ಕ್ಷೇತ್ರಗಳಲ್ಲಿ ಕೆಲಸ ಮಾಡುವವರು ಜ್ಞಾನಕ್ಷೇತ್ರದ ದಿಗಂತಗಳನ್ನು ಇನ್ನಷ್ಟು ವಿಸ್ತರಿಸಲು ಸಾಧ್ಯವಾದೀತು. 'ಕಾವ್ಯಕ್ಕೆ ಸಮರ್ಥನೆ' ಎಂಬ ಕಾಲ ತನ್ನ ಗುರಿ ಸಾಧಿಸಿ ಆಗಿದೆ; ಇನ್ನು ಮೇಲೆ 'ಪಾಂಡಿತ್ಯಕ್ಕೆ ಸಮರ್ಥನೆ' ಎನ್ನುವ ಕಾಲ ಬರಬೇಕಾಗಿದೆ. ಆಗ ನಮ್ಮ ಸಂಪದ್ಯುಕ್ತವಾದ ಪ್ರಾಚೀನ ಸಾಹಿತ್ಯ ತನ್ನೆಲ್ಲ ವೈಭವ ವಿಲಾಸಗಳನ್ನೂ ಪ್ರಕಟಗೊಳಿಸಿ ಸಮಾಜವನ್ನು ಸಂಸ್ಕೃತಿ ಸಂಪನ್ನವಾದ, ರಸವಂತವಾದ ಬದುಕಿನೊಡನೆ ವಿಲೀನಗೊಳಿಸಿ ಸಾರ್ಥಕತೆಯ ಶಿಖರವನ್ನು ಮುಟ್ಟಬಲ್ಲುದಾಗಿದೆ.*

* ಸೌಜನ್ಯ: ವಿಜಯ ಕರ್ನಾಟಕ, ೧೬.೧೨.೨೦೦೮.

# ಅಭಿಜಾತ ಭಾಷೆಯಾಗಿ ಕನ್ನಡ ಈಚಿನ ಬೆಳವಣಿಗೆಗಳು

–ಡಾ॥ ಎಂ. ಚಿದಾನಂದಮೂರ್ತಿ

ಐದು ವರ್ಷಗಳ ಹಿಂದೆ ತಮಿಳು ಭಾಷೆಯನ್ನು ಕೇಂದ್ರ ಸರ್ಕಾರವು ಅಭಿಜಾತ (ಕ್ಲಾಸಿಕಲ್) ಭಾಷೆಯಾಗಿ ಘೋಷಿಸಿದ ಬಳಿಕ ಅಷ್ಟೇ ಪ್ರಾಚೀನವೂ ಅಷ್ಟೇ ಸಮೃದ್ಧವೂ ಆದ ಭಾಷೆ, ಸಾಹಿತ್ಯಗಳನ್ನು ಪಡೆದಿರುವ ಕನ್ನಡವನ್ನು ಅಭಿಜಾತ ಭಾಷೆಯೆಂದು ಘೋಷಿಸಲು ಕೇಂದ್ರ ಸರ್ಕಾರಕ್ಕೆ ಒತ್ತಾಯಿಸಿ ಪತ್ರ ಬರೆಯಲು ನಿರ್ಧರಿಸಿ ಕರ್ನಾಟಕ ಸರ್ಕಾರವು ಆ ಬಗ್ಗೆ ವರದಿ ತಯಾರಿಸಲು ನಾನೂ ಸೇರಿದಂತೆ ನಾಲ್ವರು ಸದಸ್ಯರ ಸಮಿತಿಯನ್ನು ನೇಮಕ ಮಾಡಿತು. (ಪ್ರೊ. ಎಲ್.ಎಸ್. ಶೇಷಗಿರಿರಾವ್, ಡಾ. ಬಿ.ಬಿ. ರಾಜಪುರೋಹಿತ, ಡಾ. ಎನ್.ಎಸ್. ತಾರಾನಾಥ ಇವರು ಉಳಿದ ಮೂವರು ಸದಸ್ಯರು). ಆ ಸಮಿತಿಯ ಸದಸ್ಯರು ಆರು ತಿಂಗಳು ಮಾಹಿತಿ ಸಂಗ್ರಹಿಸಿ, ಹಲವುಬಾರಿ ಸಭೆ ಸೇರಿ ಅಂತಿಮವಾಗಿ ವರದಿಯನ್ನು ಸಿದ್ಧಪಡಿಸಿ ಆ ಮಾಹಿತಿಗೆ ಮೂಲವಾದ ಅನೇಕ ವಿದ್ವಾಂಸರ ಇಂಗ್ಲಿಷ್ ಬರಹಗಳ ಮೂವತ್ತೊಂದು ಅನುಬಂಧಗಳ ನೆರಳಚ್ಚು ಪ್ರತಿಗಳ ದಾಖಲೆಗಳೊಂದಿಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಒಪ್ಪಿಸಿತು. ಆ ವರದಿಯು ಕರ್ನಾಟಕ ಸರ್ಕಾರದಿಂದ ೧೮-೫-೦೫ರಂದು ಕೇಂದ್ರ ಸರ್ಕಾರಕ್ಕೆ ಹೋಗಿದೆ. ಆ ಇಂಗ್ಲಿಷ್ ವರದಿಯ ಸಾರಾಂಶ ಹೀಗಿದೆ. (ಕ್ಲಾಸಿಕಲ್ ಪದಕ್ಕೆ ಅಭಿಜಾತ ಎಂಬುದು ಸರಿಯಾದ ಸಂವಾದಿ ಪದ ಹೌದೇ ಅಲ್ಲವೇ ಎಂಬುದರ ಚರ್ಚೆ ಈ ಲೇಖನಕ್ಕೆ ಹೊರಗಾದುದು).

ಕೇಂದ್ರ ಸರ್ಕಾರವು ಒಂದು ಭಾಷೆಯನ್ನು ಕ್ಲಾಸಿಕಲ್ ಎಂದು ಘೋಷಿಸಲು ನಾಲ್ಕು ಮಾನದಂಡಗಳನ್ನು ನಿಗದಿಪಡಿಸಿತ್ತು.

**ಮಾನದಂಡ ೧:** ಭಾಷೆಯ ದಾಖಲಿತ ಚರಿತ್ರೆ ಅಥವಾ ಪ್ರಾಚೀನ ದಾಖಲೆಗಳು ಸಾವಿರ ವರ್ಷಗಳಿಗೂ ಹಿಂದಿನದಾಗಿರಬೇಕು. (ಇದು ೧೫೦೦ ಆಯಿತು. ಮುಂದೆ ನೋಡಿ.) ಕನ್ನಡ ಭಾಷೆಯ ಅತ್ಯಂತ ಪ್ರಾಚೀನ ಲಿಖಿತ ದಾಖಲೆ ಡಿ.ಎಲ್. ನರಸಿಂಹಾಚಾರ್ ಗುರುತಿಸಿರುವಂತೆ ಕ್ರಿ.ಪೂ. ೨೫೨ರ ಅಶೋಕನ ಬ್ರಹ್ಮಗಿರಿ ಶಾಸನದ 'ಇಸಿಲ' ಎಂಬ ಕನ್ನಡ ಸ್ಥಳನಾಮ, 'ಕರ್ನಾಟಕ' ಎಂಬ ಹೆಸರು ಅದಕ್ಕಿಂತ ಹಿಂದಿನ ಸಂಸ್ಕೃತ ಮಹಾಭಾರತದಲ್ಲಿಯೇ ದಾಖಲಾಗಿದೆ. (ಇದರ ಕಾಲ ಅನಿರ್ದಿಷ್ಟ). ಕ್ರಿ.ಶ. ೧-೨ನೇ ಶತಮಾನಗಳಿಗೆ ಸೇರಿದ ಈಜಿಪ್ಟ್‌ನಲ್ಲಿ ದೊರೆತ ಆಕ್ಸಿರಿಂಖಸ್ ಪಪೈರಿ ಎಂದೇ ಹೆಸರಾದ ಗ್ರೀಕ್ ಪ್ರಹಸನ ನಾಟಕಗಳಲ್ಲಿ ಕನ್ನಡ ಭಾಷೆಯ ಸಂಭಾಷಣೆಗಳು ದಾಖಲಾಗಿವೆ. ಆ

ನಾಟಕಗಳ ವಸ್ತು ಹಡಗಿನ ಅಪಘಾತದಿಂದ ಪಾರಾದ ಗ್ರೀಕ್ ಜನರ ಕರಾವಳಿಯ ಮಲ್ಪೆ ಬಂದರಿನ ಅನುಭವ. ಈ ಬಗ್ಗೆ ಎಂ. ಗೋವಿಂದ ಪೈ, ಸ್ಪಾನ್‌ಫರ್ಡ್ ಬಿ. ಸ್ಟೀವರ್, ತೀ.ನಂ. ಶ್ರೀಕಂಠಯ್ಯನವರು ದಾಖಲಿಸಿರುವಂತೆ ಕನ್ನಡ ಭಾಷೆಯ ಪ್ರಾಚೀನತೆ ಕ್ರಿ.ಪೂ.ದಷ್ಟು ಹಿಂದಕ್ಕೆ ಹೋಗುತ್ತದೆಯೆಂಬುದು ವಿವಾದಾತೀತ.

ಕನ್ನಡದ ಮೊದಲನೆಯ ಪೂರ್ಣಪ್ರಮಾಣದ ದಾಖಲೆ ಕ್ರಿ.ಶ. ೪೫೦ರ ಹನ್ಮಿಡಿ ಕನ್ನಡ ಶಾಸನ (ಇದೇ ನಿಜವಾದ ರೂಪ; 'ಹಲ್ಮಿಡಿ' ಅಲ್ಲ). ಎಂ.ಎಚ್. ಕೃಷ್ಣರವರು ಆ ಶಾಸನವು ಕ್ರಿ.ಶ. ಐದನೆಯ ಶತಮಾನದ್ದು ಎಂದು ಹೇಳಿರುವುದನ್ನು ಒಟ್ಟಾರೆ ಎಲ್ಲ ಶ್ರೇಷ್ಠ ವಿದ್ವಾಂಸರು, ಭಾಷಾವಿಜ್ಞಾನಿಗಳು ಒಪ್ಪಿದ್ದಾರೆ. ಸುಮಾರು ಕ್ರಿ.ಶ. ೫೦೦ರ 'ಬಿಣಮಣಿ ಅಂತು ಭೋಗಿ' ಎಂದು ಆರಂಭವಾಗುವ ಚಿತ್ರದುರ್ಗ ಜಿಲ್ಲೆಯ ಶಾಸನವನ್ನು ಬಿ.ಎಲ್. ರೈಸ್ ಪ್ರಕಟಿಸಿದ್ದಾರೆ. ಸುಮಾರು ಕ್ರಿ.ಶ. ೭೦೦ರ ಶ್ರವಣಬೆಳಗೊಳದ ಶಾಸನಗಳ ಪದ್ಯಗಳು ಬಹು ಕಾವ್ಯಮಯವಾಗಿವೆ. ಜೆ.ಎಸ್. ಫ್ಲೀಟ್ ಪ್ರಕಟಿಸಿರುವ ಏಳನೇಶತಮಾನದ ಕಪ್ಪೆ ಅರಭಟ್ಟನ ಬಾದಾಮಿ ಶಾಸನವು ದೇಸಿ ಛಂದಸ್ಸಾದ ತ್ರಿಪದಿಯಲ್ಲಿದೆ. ಒಂದು ಸಾವಿರದ ಐದುನೂರು ಐವತ್ತು ವರ್ಷಗಳಿಗೂ ಹಿಂದೆಯೇ ಕನ್ನಡವು ಕದಂಬರ ಆಡಳಿತ ಭಾಷೆಯಾಗಿದ್ದದ್ದು ಅದು ಬಾದಾಮಿ ಚಾಲುಕ್ಯರ (೬ನೇ ಶ.) ಕಾಲದಲ್ಲಿ ಸಾಹಿತ್ಯಕ ಅಥವಾ ಕಾವ್ಯಭಾಷೆಯಾಗಿ ವಿಕಾಸಹೊಂದಿತು.

ಕನ್ನಡವು ತಮಿಳಿನಷ್ಟೇ ಪ್ರಾಚೀನವಾದುದು ಎಂಬುದನ್ನು ಡಾ. ಪಿ.ಎಸ್. ಸುಬ್ರಹ್ಮಣ್ಯಂ ಸ್ಪಷ್ಟಪಡಿಸಿದ್ದಾರೆ. ಆ ಭಾಷಾ ವಿಜ್ಞಾನಿಯ ಪ್ರಕಾರ ಮೂಲ ದ್ರಾವಿಡದಿಂದ ಮೊದಲು ಮೂಲದಕ್ಷಿಣ ದ್ರಾವಿಡ ಭಾಷೆಯು ಕವಲೊಡೆದು ಆ ಮೂಲ ದಕ್ಷಿಣ ದ್ರಾವಿಡ ಭಾಷೆಯಿಂದ ಕನ್ನಡ ಮತ್ತು ತಮಿಳುಗಳು ಬೇರೆಯಾದವು. ಅವು ಕ್ರಮೇಣ ಸ್ವತಂತ್ರ ಭಾಷೆಗಳಾದವು. ಅವರ ಕೃತಿ "ದ್ರಾವಿಡಿಯನ್ ವರ್ಬ್ ಮಾರ್ಫಾಲಜಿ" ನೀಡಿರುವ ದ್ರಾವಿಡ ಭಾಷಾ ವಂಶವೃಕ್ಷ ಸ್ಪಷ್ಟ ಚಿತ್ರವನ್ನು ನೀಡುತ್ತದೆ. ಪ್ರಾಚೀನತೆಯಲ್ಲಿ ಎರಡೂ ಸಮಾನ. ದಾಖಲಿತ ಭಾಷೆಯಾಗಿ ತಮಿಳು ಕನ್ನಡಕ್ಕಿಂತ ಸ್ವಲ್ಪ ಇಂದಿನದಾಗಿರಬಹುದು ಅಷ್ಟೆ.

**ಮಾನದಂಡ ೨:** "ಆ ಭಾಷಿಕ ಜನರು ಮೌಲಿಕವೆಂದು ಭಾವಿಸುವ ಪ್ರಾಚೀನ ಸಾಹಿತ್ಯ ಅಥವಾ ಗ್ರಂಥಗಳು ಆ ಭಾಷೆಯಲ್ಲಿರಬೇಕು."

ಕನ್ನಡದ ಮೊತ್ತಮೊದಲ ಲಭ್ಯ ಕೃತಿ 'ಕವಿರಾಜಮಾರ್ಗ'ವು (ಕಾಲ ಕ್ರಿ.ಶ. ೮೫೦) ಅಲಂಕಾರ ಶಾಸ್ತ್ರದ ಕೃತಿಯಾಗಿದ್ದು ಅದರಲ್ಲಿ ಶ್ರೀವಿಜಯ, ಕವೀಶ್ವರ, ಲೋಕಪಾಲ ಇವರೇ ಮೊದಲಾದ ಗದ್ಯಪದ್ಯ ಕವಿಗಳನ್ನು ಹೆಸರಿಸಲಾಗಿದೆ. ಅನುಮಾನವೇ ಇಲ್ಲ. ಕನ್ನಡ ಸಾಹಿತ್ಯವು ಒಂಬತ್ತನೇ ಶತಮಾನಕ್ಕಿಂತಲೂ ಸಾಕಷ್ಟು ಹಿಂದಿನದಾಗಿದೆ. ಆರನೇ ಶತಮಾನದಲ್ಲಿದ್ದನೆಂದು ಗೋವಿಂದ ಪೈ ತರ್ಕಿಸಿರುವ 'ಚೂಡಾಮಣಿ' ಎಂಬ ಕೃತಿಯ ಕರ್ತೃ ಶ್ರೀವರ್ಧದೇವ. ಇಡೀ ಭಾರತದಲ್ಲಿ ಸಾಹಿತ್ಯದ ಪ್ರಾಚೀನತೆ ದೃಷ್ಟಿಯಿಂದ ಕನ್ನಡವು ಮಾತ್ರ ಸಂಸ್ಕೃತ, ಪ್ರಾಕೃತಗಳಿಗಿಂತ ಈಚಿನದಾಗಿದ್ದು, ಉಳಿದ ಭಾರತೀಯ ಸಾಹಿತ್ಯಗಳಿಗಿಂತ ಹಿಂದಿನ ಹಳೆಯ ಸಾಹಿತ್ಯವನ್ನು ಹೊಂದಿದೆ. (ಬಹುಶಃ ತಮಿಳನ್ನು ಹೊರತುಪಡಿಸಿ) ಒಂಬತ್ತನೇ ಶತಮಾನದಿಂದ ಮುಂದೆ ಕನ್ನಡ ಸಾಹಿತ್ಯದ ಸುವರ್ಣ ಯುಗವೇ ಆರಂಭಗೊಂಡು ಪಂಪ, ರನ್ನ, ಪೊನ್ನ, ನಾಗವರ್ಮ, ದುರ್ಗಸಿಂಹ, ನಯಸೇನ ಇಂತಹ ಮಹಾಕವಿಗಳನ್ನು ಸೃಷ್ಟಿಸಿತು, ಪಂಪನು ತನ್ನ 'ಆದಿಪುರಾಣ'ವನ್ನು ಕ್ರಿ.ಶ. ೯೪೧-೨ರಲ್ಲಿ ರಚಿಸಿರುವುದಾಗಿ ಖಚಿತ ತೇದಿ ನೀಡಿದ್ದಾನೆ. ಅವನನ್ನು ಆ ಕಾಲ ನಾಡೋಜ (ನ್ಯಾಷನಲ್ ಟೀಚರ್) ಎಂದು ಗುರುತಿಸಿದೆ. ಕನ್ನಡದಲ್ಲಿ ಶಾಸ್ತ್ರ ಅಥವಾ ವಿಜ್ಞಾನ ವಾಙ್ಮಯಕ್ಕೆ ಒಂಬತ್ತನೇ ಶತಮಾನದಿಂದ ಮುಂದೆ ದೊಡ್ಡ ಚರಿತ್ರೆಯೇ ಇದೆ.

ಸುಮಾರು ಕ್ರಿ.ಶ. ೧೫೦೦ರಲ್ಲಿ ರಚಿತವಾದ ನಿಜಗುಣ ಶಿವಯೋಗಿಗಳ 'ವಿವೇಕ ಚಿಂತಾಮಣಿ'ಯು ೫೯೨ ವಿಷಯಗಳನ್ನು ತಿಳಿಸುತ್ತಿದ್ದು ಕನ್ನಡದ ಪ್ರಪ್ರಥಮ ವಿಶ್ವಕೋಶವೆನ್ನಿಸಿದೆ. ಪಂಪ, ರನ್ನ, ರಾಘವಾಂಕ, ಕುಮಾರವ್ಯಾಸ, ಚಾಮರಸ, ಲಕ್ಷ್ಮೀಶ ಇವರೇ ಮೊದಲಾದ ನೂರಾರು ಕವಿಗಳ ಕಾವ್ಯಗಳು ಜನರ ಮನಸ್ಸನ್ನು ಉದ್ದಕ್ಕೂ ಸೂರೆಗೊಂಡಿವೆ.

**ಮಾನದಂಡ ೩:** "ಸಾಹಿತ್ಯ ಸಂಪ್ರದಾಯವು ಮೌಲಿಕ ಅಥವಾ ಸ್ವಂತದ್ದಾಗಿದ್ದು ಯಾವುದೇ ಇನ್ನೊಂದು ಭಾಷೆಯಿಂದ ಸ್ವೀಕರಿಸಿರುವಂತಹುದಾಗಿರಬಾರದು" ಎಂದರೆ ಸ್ವತಂತ್ರ ಸಾಹಿತ್ಯವಿರಬೇಕು.



ಕನ್ನಡ ಸಾಹಿತ್ಯದ ಶ್ರೇಷ್ಠ ಪರಂಪರೆ ಹತ್ತನೇ ಶತಮಾನದ ಪಂಪನಿಂದ ಆರಂಭವಾಗಿದ್ದು ತನ್ನದೇ ವೈಶಿಷ್ಟ್ಯಗಳನ್ನು ಹೊಂದಿದೆ. ಹಿಂದೂ, ಜೈನ ಸಂಪ್ರದಾಯಗಳ ಕತೆಗಳನ್ನಿಟ್ಟುಕೊಂಡು ಎರಡೆರಡು ಮಹಾಕಾವ್ಯ ಬರೆಯುವುದು (ಉದಾ: ಪಂಪ, ಪೊನ್ನ, ರನ್ನ), ಸಾಂಪ್ರದಾಯಕ ಮತ್ತು ದೇಸಿ ಶೈಲಿಗಳ ಸಮಸ್ಯೆ (ಇದು ವೀರಶೈವ, ಬ್ರಾಹ್ಮಣ ಕವಿಗಳಿಗೂ ಅನ್ವಯವಾಗುತ್ತದೆ). ಕಾವ್ಯಗಳಲ್ಲಿ ವೃತ್ತ, ಕಂದ, ರಗಳೆ ಮುಂತಾದ ಸಂಸ್ಕೃತ, ಪ್ರಾಕೃತ ಮೂಲಕ ಛಂದೋರೂಪಗಳಲ್ಲದೆ ತ್ರಿಪದಿ ಇತ್ಯಾದಿ ದೇಸಿ ಛಂದೋರೂಪಗಳ ಬಳಕೆ ಇವು ಗಮನಾರ್ಹ ಅಂಶಗಳು. ಪೌರಾಣಿಕ ಮತ್ತು ಐತಿಹಾಸಿಕ ವ್ಯಕ್ತಿಗಳನ್ನು ಸಮೀಕರಿಸಿ ಕಾವ್ಯ ರಚನೆ ಕನ್ನಡದಲ್ಲಿ ಆಗಿದೆ. (ಉದಾ: ಅರ್ಜುನ–ಅರಿಕೇಸರಿ) ಪಂಪ ಮಹಾಕವಿಯಂತೂ ತನ್ನ ಪಂಪ ಭಾರತದಲ್ಲಿ ವ್ಯಾಸ ಭಾರತದ ಕತೆಯ ನೆಪದಲ್ಲಿ ತನ್ನ ಕಾಲದ (೧೦ ಶ.ದ.) ಕರ್ನಾಟಕದ ಯುಗಧರ್ಮವನ್ನು (ಇಥೋಸ್) ನಿರೂಪಿಸಿದ್ದಾನೆ. ಅವನ ಕೃತಿಯ ಮೂಲಕ ಕರ್ನಾಟಕದ ಅಂದಿನ ಯುಗಧರ್ಮ ಅಭಿವ್ಯಕ್ತಗೊಂಡಿದೆ. ಅವನ ಕಾಲದ ಬದುಕಿನ ಮೌಲ್ಯಗಳು ಅವನ ನೆಪಮಾತ್ರದ ಭಾರತ ಕಥಾವಸ್ತುವಿನ ಮೂಲಕ ಸಾಕಾರಗೊಂಡಿವೆ.

ಹನ್ನೆರಡನೆಯ ಶತಮಾನದ ಉತ್ತರಾರ್ಧದ ಕವಿ ಹರಿಹರನು ನೂರಿಪ್ಪತ್ತು ಶಿವಶರಣರ ಕತೆಗಳನ್ನು ಸಮಕಾಲೀನ ಭಾಷೆಯಲ್ಲಿ ರಗಳೆ ಛಂದಸ್ಸಿನಲ್ಲಿ ನಿರೂಪಿಸಿದ್ದಾನೆ. ಅವನ ಕಥಾವಸ್ತುವೊಂದು ದಲಿತ ವರ್ಗದ ಅಸ್ಪೃಶ್ಯ ಮಾದಾರ ಚನ್ನಯ್ಯನಿಗೆ ಸಂಬಂಧಿಸಿದ್ದು. ಅವನ ಕಥಾಶೈಲಿ, ಛಂದೋಪ್ರಕಾರ, ನಿರೂಪಣೆ ಇವು ಸಂಪೂರ್ಣ ಸ್ವತಂತ್ರವಾದುವು.

ಅದೇ ಶತಮಾನದ ಮಧ್ಯಭಾಗದಲ್ಲಿ ನಡೆದ ವಚನ ಚಳವಳಿಯು ಇಡೀ ವಿಶ್ವ ಸಾಹಿತ್ಯಕ್ಕೆ ವಿನೂತನ ಎನ್ನಬಹುದಾದಸಾಹಿತ್ಯ ಪ್ರಕಾರವನ್ನು ಕನ್ನಡಕ್ಕೆ ತಂದುಕೊಟ್ಟಿತು. ಮೇಲ್ವರ್ಗದವರು, ದಲಿತರು, ಸ್ತ್ರೀಯರು, ದಲಿತ ಸ್ತ್ರೀಯರು, ಮಂತ್ರಿ ಭಂಡಾರಿಗಳಲ್ಲದೆ ದನಕಾಯುವವರು, ಅಂಬಿಗರು, ನೇಕಾರರು, ಚಪ್ಪಲಿ ಹೊಲೆಯುವವರು, ವೇಶ್ಯೆಯರು, ಸಾಹಿತ್ಯ ಸೃಷ್ಟಿ ಮಾಡಿದರು. 'ನಿರ್ಲಜ್ಜೇಶ್ವರ' ಅಂಕಿತದ ಸೂಳೆಸಂಕವ್ವೆ ಒಬ್ಬ ವಚನಗಾರ್ತಿ. ಶರಣ ಚಳವಳಿಯು 'ಸೂಳೆ'ಯರಲ್ಲೂ ಆತ್ಮವಿಶ್ವಾಸ ತುಂಬಿ ಸಾಹಿತಿಗಳನ್ನಾಗಿ ರೂಪಿಸಿತು. ಇದೊಂದು ವಿಶ್ವದಲ್ಲೇ ಅಪೂರ್ವ ಘಟನೆ. 'ವಚನ' ಎಂಬುದು ಗದ್ಯವೂ ಅಲ್ಲದ ಪದ್ಯವೂ ಅಲ್ಲದ ಒಂದು ವಿಶಿಷ್ಟ ಸಾಹಿತ್ಯ ಪ್ರಕಾರ. ಅದು ಯಾವುದೇ ರೀತಿಯಲ್ಲೂ ಇತರ ಭಾಷೆಗಳ ಸಾಹಿತ್ಯದಿಂದ ಪ್ರಭಾವಿತಗೊಳ್ಳದೆ ಜನಸಾಮಾನ್ಯರಿಂದ ಅವರ ಭಾಷೆಯಲ್ಲಿ ಅವರು ಹುಟ್ಟಿ ಬೆಳೆದ ಮಣ್ಣಿನಿಂದ ಮೂಡಿ ಬಂದುದಾಗಿದೆ. ಆ ಚಳವಳಿಯ ನೇತಾರ ಬಸವಣ್ಣನವರು ಭಾರತ ಕಂಡ ಅತ್ಯಂತ ಶ್ರೇಷ್ಠ ಸಮಾಜ ಸುಧಾರಕರಲ್ಲಿ ಒಬ್ಬರು.

ಆ ಚಳವಳಿಯ ಬಳಿಕ ಬಂದ ಹರಿದಾಸ ಸಾಹಿತ್ಯ ಚಳವಳಿಯು ಭಗವದ್ ಭಕ್ತಿಯನ್ನು ಹಾಡುಗಳ ಮೂಲಕ ಮನೆಮನೆಗೆ ಮುಟ್ಟಿಸಿತು. ದಾಕ್ಷಿಣಾತ್ಯ ಸಂಗೀತ ಶೈಲಿಗೆ ಇನ್ನೊಂದು ಹೆಸರಾದ 'ಕರ್ನಾಟಕ ಸಂಗೀತ'ಕ್ಕೆ ಅವರೇ ಮೂಲ. ಅದೇ ಚಳವಳಿಯ ಕೆಳವರ್ಗಕ್ಕೆ ಸೇರಿದ ಕನಕದಾಸರ "ರಾಮಧಾನ್ಯ ಚರಿತೆ"ಯು ಭತ್ತ, ರಾಗಿಗಳ ಮಧ್ಯೆ ನಡೆದ ಸಂಘರ್ಷದ ಕತೆಯಾದರೂ ಅದು ಶ್ರೀಮಂತ, ಬಡವರ ಮಧ್ಯದ ವರ್ಗ ಸಂಘರ್ಷದ ಸಾಂಕೇತಿಕ ಕಾವ್ಯವಾಗಿದ್ದು ಅಂತಿಮವಾಗಿ ಶೋಷಿತರ ಗೆಲುವೇ ವಾಸ್ತವವೆಂಬುದನ್ನು ಸಾಂಕೇತಿಕವಾಗಿ ನಿರೂಪಿಸುತ್ತದೆ. ವಸ್ತುವಿನ ದೃಷ್ಟಿಯಿಂದ ಇದು ಭಾರತೀಯ ಸಾಹಿತ್ಯಕ್ಕೆ ಕನ್ನಡವು ಕೊಟ್ಟಿರುವ ಕೊಡುಗೆಯೂ ಹೌದು.

**ಮಾನದಂಡ ೪:** "ಕ್ಲಾಸಿಕಲ್ ಭಾಷೆಯು ಅದರ ಮುಂದಿನ ರೂಪದಿಂದ ಭಿನ್ನವಾಗಿರಬಹುದು ಅಥವಾ ಅದರ ಬೆಳವಣಿಗೆ ಸ್ಥಗಿತಗೊಂಡಿರಬಹುದು." ಕನ್ನಡ ಭಾಷೆಗೆ, ಕನಿಷ್ಠ ಎರಡು ಸಾವಿರದ ಮುನ್ನೂರು ವರ್ಷಗಳ ನಿರಂತರ ಇತಿಹಾಸವಿದ್ದು, ಅದರ ಚರಿತ್ರೆಯಲ್ಲಿ ಪೂರ್ವದ ಹಳೆಗನ್ನಡ, ನಡುಗನ್ನಡ, ಆಧುನಿಕ ಕನ್ನಡ ಎಂಬ ಪ್ರಭೇದಗಳನ್ನು ಗುರುತಿಸಬಹುದಾದರೂ ಅದರ ಬೆಳವಣಿಗೆ ನಿರಂತರವಾಗಿದೆ. ಪೂರ್ವದ ಹಳೆಗನ್ನಡಕ್ಕೂ ಹೊಸಗನ್ನಡಕ್ಕೂ ಹೊರ ರೂಪದಲ್ಲಿ ವ್ಯತ್ಯಾಸವಿದ್ದರೂ ಒಳಗೆ ಇರುವ ಸಾಮ್ಯವು ಸ್ಪಷ್ಟವಾದುದಷ್ಟೇ ಅಲ್ಲ ದಟ್ಟವಾದುದು.

ಇಪ್ಪತ್ತನೇ ಶತಮಾನದಲ್ಲಿ ಸಮೃದ್ಧವಾಗಿ ವಿಕಾಸಗೊಂಡಿರುವ ಆಧುನಿಕ ಕನ್ನಡ ಸಾಹಿತ್ಯಕ್ಕೆ ಏಳು ಜ್ಞಾನಪೀಠ ಪ್ರಶಸ್ತಿಗಳು ಲಭ್ಯವಾಗಿವೆ. ಆ ವಿಷಯದಲ್ಲಿ ಅದು ಭಾರತಕ್ಕೇ ಅಗ್ರಗಣ್ಯ.

## ಎರಡನೆಯ ವರದಿ

ಮೇಲ್ಕಂಡ ವರದಿಯು ಕೇಂದ್ರ ಸರ್ಕಾರವನ್ನು ತಲುಪಿದ ಮೇಲೆ, ಕೇಂದ್ರ ಸರ್ಕಾರವು ಸಂಸ್ಕೃತವನ್ನು ಶಾಸ್ತ್ರೀಯ ಭಾಷೆಯೆಂದು ಘೋಷಿಸಿ, ಅಂತಹ ಭಾಷೆಯೆಂದು ಘೋಷಿಸಬೇಕಾದರೆ ಮೊದಲಿದ್ದ ಒಂದು ಸಾವಿರ ವರ್ಷಗಳಷ್ಟು ಪ್ರಾಚೀನತೆಯ ಇತಿಹಾಸವನ್ನು ಒಂದೂವರೆ-ಎರಡು ಸಾವಿರ ವರ್ಷಗಳಿಗೆ ಏರಿಸುವ ತನ್ನ ಅಭಿಪ್ರಾಯವನ್ನು ಘೋಷಿಸಿತು. ಸಂಸ್ಕೃತದ ಜೊತೆಗೆ ಕನ್ನಡವನ್ನೂ ಶಾಸ್ತ್ರೀಯ ಭಾಷೆಯೆಂದು ಘೋಷಿಸದೆ ಕೇಂದ್ರ ಸರ್ಕಾರವು ತಪ್ಪು ಮಾಡಿದೆಯೆಂಬಲ್ಲಿ ಅನುಮಾನವಿಲ್ಲ. (ಸಂಸ್ಕೃತವನ್ನು ತಮಿಳಿಗಿಂತ ಮೊದಲೇ ಕ್ಲಾಸಿಕಲ್ ಭಾಷೆಯೆಂದು ಘೋಷಿಸಬೇಕಿತ್ತು; ತಮಿಳಿಗಿರುವ ರಾಜಕೀಯ ಬೆಂಬಲ ಅದಕ್ಕಿಲ್ಲ!) ಹೊಸ ಮಾನದಂಡದ ಪ್ರಕಾರವೂ ಕರ್ನಾಟಕ ಸರ್ಕಾರದ ಮೊದಲನೆಯ ಮನವಿಯು ಕನ್ನಡಕ್ಕೆ ಶಾಸ್ತ್ರೀಯ ಭಾಷಾ ಸ್ಥಾನವನ್ನು ನೀಡಲು ಸಾಕಾಗಿತ್ತು.

ಆದರೂ ಸಮಿತಿಯು ಕರ್ನಾಟಕ ಸರ್ಕಾರಕ್ಕೆ ಎರಡನೆಯ ವರದಿ ನೀಡಿದ್ದು ಅದನ್ನೂ ೨೫-೧೧-೦೫ರಂದು ಕೇಂದ್ರಕ್ಕೆ ಕಳುಹಿಸಲಾಗಿದೆ. (ಏಳು ಅನುಬಂಧಗಳ ಈ ಎರಡನೆಯ ವರದಿ ಮೊದಲನೆಯ ವರದಿಗೆ ಉಪಷ್ಟಂಬಕ ಅಥವಾ ಪೋಷಕ) ಆ ಇಂಗ್ಲಿಷ್ ವರದಿಯ ಸಾರಾಂಶ ಇಚಿತಿದೆ:

ಡಾ. ಐರಾವತಂ ಮಹಾದೇವನ್ ಕ್ರಿ.ಪೂ. ೨-೧ನೇ ಶತಮಾನಗಳಿಗೆ ಸೇರಿದ ತಮಿಳು ಶಾಸನಗಳಲ್ಲಿ ತಮಿಳು ಭಾಷೆಯು ಕನ್ನಡದಿಂದ ಹಲವು ಕನ್ನಡ ಪದಗಳನ್ನು ಸ್ವೀಕರಿಸಿರುವುದನ್ನು ತೋರಿಸಿದ್ದಾರೆ. ಕ್ರಿ.ಶ. ೧೧೫ರ ಟಾಲೆಮಿಯು ತನ್ನ ಪ್ರಾಚೀನ ಭಾರತದ ಭೂಗೋಳದ ವರ್ಣನೆಯಲ್ಲಿ ಕರ್ನಾಟಕದ ಹಲವು ಸ್ಥಳನಾಮಗಳನ್ನು ಹೆಸರಿಸಿದ್ದಾನೆ.

## ಅಂತಿಮ ವರದಿ

ಅದೆಲ್ಲವನ್ನೂ ಕ್ರೋಢೀಕರಿಸಿ ಹೊಸ ಮಾಹಿತಿಯೊಡನೆ ತಜ್ಞರ ಸಮಿತಿಯು ೨೦೦೬ ಮಾರ್ಚ್–ಏಪ್ರಿಲ್‌ನಲ್ಲಿ ಅಂತಿಮ ವರದಿ ತಯಾರಿಸಿ ಕರ್ನಾಟಕ ಸರ್ಕಾರಕ್ಕೆ ನೀಡಿದ್ದು ಅದು ಕೇಂದ್ರ ಸರ್ಕಾರಕ್ಕೆ ಹೋಗಿದೆ. ಅದರ ಆರಂಭದಲ್ಲಿ ಮೂವತ್ತು ಪುಟಗಳ ವರದಿಯ ಸಾರಾಂಶವಿದ್ದು, ವರದಿಯ ಒಂದೊಂದು ಭಾಗಕ್ಕೂ ಮೂವತ್ತೇಳು ಅನುಬಂಧಗಳ ಇಂಗ್ಲಿಷ್ ಆಧಾರಗಳನ್ನು ಉಲ್ಲೇಖಿಸಿ ಎಲ್ಲ ಲೇಖನಗಳ ಜೆರಾಕ್ಸ್ ಪ್ರತಿಗಳನ್ನು ಹಾಗೇ ಯಥಾವತ್ತಾಗಿ ಮುದ್ರಿಸಿ ನೀಡಿದೆ; ಒಟ್ಟು ವರದಿ ಇನ್ನೂರತೊಂಬತ್ತೈದು ಪುಟದ್ದಾಗಿದೆ. ಯಾವುದೇ ದೃಷ್ಟಿಯಿಂದ ನೋಡಿದರೂ ಎಲ್ಲ ಮಾನದಂಡಗಳನ್ನು ಕನ್ನಡವು ಪೂರೈಸುತ್ತದೆ; ೧೫೦೦ ವರ್ಷಗಳಷ್ಟು ಒಂದು ಭಾಷೆಗೆ ಲಿಖಿತ ಇತಿಹಾಸ ಸಾಕು; ಕನ್ನಡವು ಕನಿಷ್ಠ ೨೩೦೦ ವರ್ಷಗಳಷ್ಟು ಹಳೆಯದು. (ಅದು ದಾಖಲಿತ ಇತಿಹಾಸ. ದಾಖಲಾಗದ ಇತಿಹಾಸ ಇನ್ನೂ ದೀರ್ಘವಾಗಿದೆ).

## ಆಮೇಲಿನ ಬೆಳವಣಿಗೆ

ಶಾಸ್ತ್ರೀಯ ಭಾಷೆಯ ಸ್ಥಾನ ನೀಡಲು ಕರ್ನಾಟಕ ಸರ್ಕಾರವು ಎರಡೂವರೆ ಮೂರು ವರ್ಷಗಳಷ್ಟು ಹಿಂದೆಯೇ ಅಂತಿಮ ವರದಿ ಸಲ್ಲಿಸಿತಾದರೂ ಕೇಂದ್ರ ಸರ್ಕಾರವು ನೇಮಿಸಿದ್ದ ತಜ್ಞರ ಸಮಿತಿ ಸಭೆ ಸೇರದೇ ಇರುವಂತೆ ಮಾಡುವಲ್ಲಿ ತಮಿಳು ಸರ್ಕಾರ ಯಶಸ್ವಿಯಾಯಿತು. ಕರ್ನಾಟಕದಿಂದ ಒತ್ತಡ ಹೆಚ್ಚಿ, ಸಭೆ ಸೇರುವುದು ಅನಿವಾರ್ಯವೆಂದು ಗೊತ್ತಾದ ತಕ್ಷಣ ಕೆಲವು ತಿಂಗಳ ಹಿಂದೆ ತಮಿಳು ಸರ್ಕಾರವು ಕುತಂತ್ರದಿಂದ ಡಾ. ಕುಳಂದೈಸ್ವಾಮಿ ಕಣ್ಣನ್ ಎಂಬುವರು ಸಮಿತಿ ಸದಸ್ಯರಾಗುವಂತೆ ಮಾಡಿತು. ಒಂದು ತಿಂಗಳ ಹಿಂದೆ ಆ ಸಮಿತಿಯ ಸಭೆ ಸೇರಿದಾಗ, ಡಾ. ಕುಳಂದೈ ಸ್ವಾಮಿ ಕನ್ನಡಕ್ಕೆ ಶಾಸ್ತ್ರೀಯ ಭಾಷಾಸ್ಥಾನ ಕೊಡದಂತೆ ಪ್ರಬಲವಾಗಿ ವಿರೋಧಿಸಿ "ತಮಿಳು ಭೂಮಿ ಹುಟ್ಟುವ ಮೊದಲೇ ಇದ್ದ ಭಾಷೆ–ಕನ್ನಡಕ್ಕೆ ಆ ಅರ್ಹತೆ ಇಲ್ಲ" ಎಂಬ ಹಾಸ್ಯಾಸ್ಪದ ವಾದ ಮುಂದಿಟ್ಟರು. ಅದೇ ಸಮಿತಿಯಲ್ಲಿದ್ದ ಮೈಸೂರಿನ ಭಾರತೀಯ ಭಾಷಾ ಸಂಸ್ಥೆಯ ನಿರ್ದೇಶಕರಾದ (ಸಿಐಐಎಲ್) ಡಾ. ಉದಯನಾರಾಯಣ ಸಿಂಗ್ ಆ ಮೊದಲೇ ಪ್ರಧಾನಿಗಳಿಗೆ ಕನ್ನಡಕ್ಕೆ ಶಾಸ್ತ್ರೀಯ ಭಾಷೆಯಾಗುವ ಎಲ್ಲ ಅರ್ಹತೆ ಇದೆಯೆಂದು ಪತ್ರ ಬರೆದಿದ್ದರು. ಅವರು ಆ ಪ್ರಥಮ ಸಭೆಯಲ್ಲಿ ಕನ್ನಡದ ಪರವಾಗಿ ಸಮರ್ಥ ವಾದ ಮಂಡಿಸಿದ್ದಾರೆ. ಇನ್ನೊಬ್ಬ ಸದಸ್ಯ ಡಾ. ಭ. ಕೃಷ್ಣಮೂರ್ತಿಯವರು ಅದನ್ನು ಬೆಂಬಲಿಸಿ ತೆಲುಗಿಗೂ ಆ ಸ್ಥಾನ ನೀಡಲು ಒತ್ತಾಯಿಸಿದ್ದಾರೆ. ಒಟ್ಟಾರೆ ಸಮಿತಿಯಲ್ಲಿ ಕನ್ನಡ ಪರವಾದ ವಾತಾವರಣವಿದ್ದಿತೆಂದು ತಿಳಿದು ಬಂದಿದೆ. ಕನ್ನಡದ ಜೊತೆ ತೆಲುಗಿಗೂ ಕೊಟ್ಟರೆ ಕನ್ನಡಿಗರು ತಮಿಳಿನವರಂತೆ ಖಂಡಿತ ವಿರೋಧಿಸುವುದಿಲ್ಲ.

## ತೀರ ಈಚೆಗೆ

ಇದೇ ಜುಲೈ ೨–೩ನೇ ತಾರೀಕು ಕರ್ನಾಟಕ ಸರ್ಕಾರದ ನಿಯೋಗದ ಭಾಗವಾಗಿ ದೆಹಲಿಗೆ ಹೋಗಿ ನಾವು ಅಲ್ಲಿ ರಾಷ್ಟ್ರಪತಿ ಶ್ರೀಮತಿ ಪ್ರತಿಭಾ ಪಾಟೀಲ್, ಶಿವರಾಜ ಪಾಟೀಲ್, ಎಲ್.ಕೆ. ಅದ್ವಾನಿ ಅವರನ್ನು ಭೇಟಿಯಾಗಿ ಎಲ್ಲ ಮಾಹಿತಿ ನೀಡಿದೆವು. ಶಿವರಾಜ ಪಾಟೀಲರ ಕ್ಷೇತ್ರವಾದ ದಕ್ಷಿಣ ಮಹಾರಾಷ್ಟ್ರದ ಲಾತೂರ್ ಎಂಬುದು

ರಾಷ್ಟ್ರಕೂಟರ ಮೊದಲ ರಾಜಧಾನಿ 'ಲತ್ತಲೂರ್' ಆಗಿದ್ದುದನ್ನು ಆ ಇಡೀ ಪ್ರದೇಶ ಹಿಂದೆ ಸಂಪೂರ್ಣ ಕನ್ನಡನಾಡೇ ಆಗಿದ್ದುದನ್ನು ಅವರ ಗಮನಕ್ಕೆ ತಂದು, ವಿಶೇಷವಾಗಿ ಶರಣ ಚಳವಳಿಯ ವೈಶಿಷ್ಟ್ಯವನ್ನು ಅವರಿಗೆ ತಿಳಿಸಿದೆವು. (ಅವರು ಹುಟ್ಟಿನಿಂದ ವೀರಶೈವರು). ರಾಷ್ಟ್ರಪತಿಯವರನ್ನು ಭೇಟಿ ಮಾಡಿದಾಗ, ಒಬ್ಬ ಮಹಿಳೆ ರಾಷ್ಟ್ರಪತಿಯಾದುದಕ್ಕೆ ಕರ್ನಾಟಕಕ್ಕೆ ವಿಶೇಷ ಸಂತೋಷವಾಗಿದೆಯೆಂದೂ ಪುರುಷ-ಸ್ತ್ರೀಯರಿಗೆ ಸಮಾನ ಸ್ಥಾನವನ್ನು ನೀಡಿದ ಶರಣ ಚಳವಳಿಯ ಕೇಂದ್ರವು ಕರ್ನಾಟಕವೆಂದೂ, ಆ ಚಳವಳಿಯಲ್ಲಿ ಅಕ್ಕಮಹಾದೇವಿಯಂತಹ ಶ್ರೇಷ್ಠ ಅನುಭಾವಿ-ಸಾಹಿತಿ ಮಾತ್ರವಲ್ಲದೆ, ಕಾಳವ್ವೆಯಂಥ ಅಸ್ಪೃಶ್ಯ ಹೆಣ್ಣುಮಗಳು, ಸಂಕವ್ವೆಯಂತಹ 'ಸೂಳೆ' ವಚನಗಳನ್ನು ಬರೆದಿರುವುದನ್ನು ಅವರ ಗಮನಕ್ಕೆ ತಂದು, ಅಸ್ಪೃಶ್ಯ ಮಹಿಳೆಯರೂ ವೇದಾಭ್ಯಾಸ ಮಾಡಿದ್ದುದನ್ನು ಸೂಳೆಸಂಕವ್ವೆಯ ಅಂಕಿತ 'ನಿರ್ಲಜ್ಜೇಶ್ವರ' ಎಂಬುದನ್ನು ಹೇಳಿದಾಗ ಅವರ ಕಣ್ಣು ಸೂಕ್ಷ್ಮವಾಗಿ ಹನಿಗಟ್ಟಿತು ಎಂಬುದನ್ನು ನಾನು ಗುರುತಿಸಿದೆ. ಅದ್ವಾನಿಯವರ ಗಮನಕ್ಕೂ ಕನ್ನಡದ ಅರ್ಹತೆಯನ್ನು ಸಮಸ್ತವಾಗಿ ಆದರೆ ಸಂಕ್ಷಿಪ್ತವಾಗಿ ಮನದಟ್ಟು ಮಾಡಿಕೊಡಲಾಯ್ತು. ಅವರೆಲ್ಲರೂ ನಾವು ನೀಡಿದ ಮನವಿಯನ್ನು ಮಾಹಿತಿಯನ್ನು ಸಂಬಂಧಪಟ್ಟವರ ಗಮನಕ್ಕೆ ತರುವುದಾಗಿ ಭರವಸೆ ನೀಡಿದರು. ಅದಕ್ಕಿಂತ ಅವರು ಏನೂ ಹೆಚ್ಚಿನದನ್ನು ಮಾಡಲು ಸಾಧ್ಯವಿಲ್ಲದಿದ್ದರೂ ಅವರ ಬೆಂಬಲವು ಕನ್ನಡದ ವಾದವನ್ನು ದೃಢಗೊಳಿಸುವುದೆಂಬ ವಿಶ್ವಾಸದೊಡನೆ ನಾವು ದೆಹಲಿಯಿಂದ ಹಿಂದಿರುಗಿದೆವು.

### ಶಾಸ್ತ್ರೀಯ ಭಾಷೆ-ಪ್ರಯೋಜನ

ಕನ್ನಡವನ್ನು ಅಭಿಜಾತ ಭಾಷೆಯೆಂದು ಗುರುತಿಸಿದರೆ ಅದರ ಹೆಸರಿನಲ್ಲಿ ೧. ಭಾರತದಲ್ಲಿ ಸೂಕ್ತಕಡೆ ಅದರ ಹೆಸರಿನಲ್ಲಿ 'ಅತ್ಯುನ್ನತ ಕೇಂದ್ರ' ಸ್ಥಾಪಿತವಾಗುತ್ತದೆ. ಅಲ್ಲಿ ಮೌಲಿಕ ಸಂಶೋಧನೆ ನಡೆಯುತ್ತದೆ; ೨. ಅದರ ಹೆಸರಲ್ಲಿ ಪ್ರತಿವರ್ಷ ಇಬ್ಬರಿಗೆ 'ಅಂತಾರಾಷ್ಟ್ರೀಯ' ಪುರಸ್ಕಾರ ನೀಡಲಾಗುತ್ತದೆ; ೩. ಅದರ ಅಧ್ಯಯನಕ್ಕೆ ಭಾರತದ ಬೇರೆ ಬೇರೆ ಕೇಂದ್ರೀಯ ವಿಶ್ವವಿದ್ಯಾಲಯಗಳಲ್ಲಿ ಪೀಠಗಳು ಸ್ಥಾಪಿತವಾಗುತ್ತವೆ. ಹಲವು ಕೋಟಿ ಹಣದ ಖರ್ಚನ್ನು ಸಂಪೂರ್ಣವಾಗಿ ಕೇಂದ್ರ ಭರಿಸುತ್ತದೆ.

### ಇತ್ತೀಚೆಗೆ

ಕಳೆದ ಆಗಸ್ಟ್ ತಿಂಗಳಲ್ಲಿ ತಜ್ಞರ ಸಮಿತಿಯು ಕನ್ನಡ ಮತ್ತು ತೆಲುಗು ಪರವಾಗಿ ನಿರ್ಣಯ ತೆಗೆದುಕೊಳ್ಳುವ ಸೂಚನೆ ಕಂಡುಬರುತ್ತಿದ್ದಂತೆ ತಮಿಳುನಾಡಿನ ಗಾಂಧಿ ಎಂಬ ವಕೀಲರು ಮದ್ರಾಸ್ ಉಚ್ಚ ನ್ಯಾಯಾಲಯದಲ್ಲಿ ಕೇಂದ್ರ ಸರ್ಕಾರದ ತಜ್ಞರ ಸಮಿತಿಯಲ್ಲಿ ನಾಲ್ವರು ಕನ್ನಡ, ತೆಲುಗು ಪಕ್ಷಪಾತಿಗಳಿದ್ದಾರೆಂದೂ ಆ ಸಮಿತಿಯನ್ನು ರದ್ದುಮಾಡಿ ಬೇರೊಂದು ಸಮಿತಿ ರಚಿಸಿಬೇಕೆಂದೂ ದಾವೆ ಹೂಡಿದ್ದಾರೆ. ಕರ್ನಾಟಕದಿಂದ ಒತ್ತಡ ಹೇರಿದ ಫಲವಾಗಿ ಅಕ್ಟೋಬರ್ ೩೧ರಂದು ಮನಮೋಹನ್ ಸಿಂಗರು ಮದ್ರಾಸ್ ಉಚ್ಚ ನ್ಯಾಯಾಲಯದ ತೀರ್ಪನ್ನು ಕಾಯ್ದಿರಿಸಿ, ಕನ್ನಡ ತೆಲುಗುಗಳಿಗೆ ಅಭಿಜಾತ ಭಾಷೆಯ ಸ್ಥಾನವನ್ನು ನೀಡುವುದಾಗಿ ಪ್ರಕಟಿಸಿದ್ದಾರೆ. (ಆ ಹೊತ್ತಿಗೆ ತಜ್ಞರ ಸಮಿತಿ ಅಂತಹ ನಿರ್ಣಯವನ್ನು ತನ್ನ ಎರಡನೆಯ ಸಭೆಯಲ್ಲಿ ಕೈಗೊಂಡಿತ್ತು.) ಗಾಂಧಿಯವರಿಗೆ ಕನ್ನಡ, ತೆಲುಗುಗಳ ಅಭಿಜಾತ ಸ್ಥಾನದಿಂದ ಯಾವುದೇ ರೀತಿಯ ತೊಂದರೆಯೂ ಇಲ್ಲವಾದ್ದರಿಂದ ಅವರು ಕೇಂದ್ರ ಸರ್ಕಾರದ ವಿರುದ್ಧ ಮೊಕದ್ದಮೆ ಹೂಡುವುದಕ್ಕೆ ಅವಕಾಶ ಇದೆಯೇ ಇಲ್ಲವೇ ಮದ್ರಾಸ್ ಉಚ್ಚ ನ್ಯಾಯಾಲಯಕ್ಕೆ ಕೇಂದ್ರ ಸರ್ಕಾರದ ಅಂತಹ ನಿರ್ಣಯವನ್ನು ಪ್ರಶ್ನಿಸುವುದಕ್ಕೆ ಕಾನೂನಿನಲ್ಲಿ ಅವಕಾಶ ಇದೆಯೇ ಇಲ್ಲವೇ ಕಾನೂನು ತಜ್ಞರು ಹೇಳಬೇಕು. ಏನಾಗದಿದ್ದರೂ, ಒಂದಂತೂ ನಿಜ; ಕನ್ನಡಕ್ಕೆ ಅಧಿಕೃತವಾಗಿ ಅಭಿಜಾತ ಸ್ಥಾನ ಘೋಷಿತವಾಗಿ ಅದಕ್ಕೆ ದೊರಕಬೇಕಾದ ಅನುಕೂಲಗಳು ಮುಂದೆ ಹೋಗುವ ಸಾಧ್ಯತೆ ಇದೆ. ನಾವು ಕೊಟ್ಟ ವರದಿಯು ಫಲಪ್ರದವಾಗಿದೆ ಎಂಬ ಸಂತೋಷವಿದ್ದರೂ, ಕನ್ನಡವು ಆ ಫಲವನ್ನು ಪಡೆಯುವ ಕಾಲ ಬೇಗ ಬರಲಿ ಎಂಬ ಹಾರೈಕೆಯಲ್ಲಿದ್ದೇವೆ; ಆದರೆ ಕಾತರದಿಂದ ಕನ್ನಡ ಜನತೆ ಕಾಯುತ್ತಿದೆ.

ಕನ್ನಡಿಗರು ಗಮನಿಸಬೇಕು; ಕೇಂದ್ರ ಸರ್ಕಾರ ನೇಮಿಸಿರುವ ತಜ್ಞರ ಸಮಿತಿಯಲ್ಲಿ ಒಬ್ಬ ಕನ್ನಡಿಗನೂ ಇಲ್ಲ; ಇಬ್ಬರು ತಜ್ಞರು ಮಾತ್ರ ಮೈಸೂರಿನಲ್ಲಿ ಭಾರತೀಯ ಭಾಷಾ ಸಂಸ್ಥೆಯಲ್ಲಿ ಕೆಲಸ ಮಾಡಿದ ಉತ್ತರ ಭಾರತದವರು. ಆದರೆ ತಜ್ಞರ ಸಮಿತಿಯಲ್ಲಿ ತೆಲುಗು ಮಾತೃಭಾಷೆಯ ಇಬ್ಬರು, ತಮಿಳು ಮಾತೃಭಾಷೆಯ ಇಬ್ಬರು ಇದ್ದಾರೆ! ಗಾಂಧಿಯವರು ತಮ್ಮ ಮೊಕದ್ದಮೆಯಲ್ಲಿ ಕರ್ನಾಟಕ ಸರ್ಕಾರವನ್ನು ಪ್ರತಿವಾದಿಯನ್ನಾಗಿ ಮಾಡಿರದಿದ್ದರೂ ಕರ್ನಾಟಕ ಸರ್ಕಾರವು ಅರ್ಜಿ ಸಲ್ಲಿಸಿ ಮದ್ರಾಸ್ ಉಚ್ಚ ನ್ಯಾಯಾಲಯದಲ್ಲಿ ಕನ್ನಡಪರ ವಾದ ಮಂಡಿಸುವ ಅಗತ್ಯವಿದೆ. ಕನ್ನಡಕ್ಕೆ ಅಭಿಜಾತ ಭಾಷಾ ಸ್ಥಾನವು ಅಧಿಕೃತವಾಗಿ ಲಭ್ಯವಾದ ಮೇಲೆ ಕೇಂದ್ರ ಸರ್ಕಾರವು ಸ್ಥಾಪಿಸುವ ಉನ್ನತ ಅಧ್ಯಯನ ಕೇಂದ್ರಕ್ಕೆ (ಸೆಂಟರ್ ಆಫ್ ಎಕ್ಸಲೆನ್ಸ್) ಮೈಸೂರಿನಲ್ಲಿರುವ ಕೇಂದ್ರ ಸರ್ಕಾರದ ಭಾರತೀಯ ಭಾಷಾ ಸಂಸ್ಥೆಯು (ಸಿಐಐಎಲ್) ಎಲ್ಲ ದೃಷ್ಟಿಗಳಿಂದಲೂ ಪ್ರಶಸ್ತವಾದ ಸ್ಥಾನವಾಗಿದೆಯೆಂಬುದನ್ನು ಕರ್ನಾಟಕ ಸರ್ಕಾರವು ಭಾರತ ಸರ್ಕಾರಕ್ಕೆ ಮನದಟ್ಟು ಮಾಡಿಕೊಡಬೇಕಾಗುತ್ತದೆ. (ಗಾಂಧಿ ಹೂಡಿರುವ ಮೊಕದ್ದಮೆಯಲ್ಲಿ ಕೇಂದ್ರಸರ್ಕಾರದ ಪರವಾಗಿ ವಾದ ಮಂಡಿಸಲು ನೇಮಕ ಮಾಡಿರುವ ವಕೀಲರೂ ತಮಿಳಿನವರಾಗಿದ್ದಾರೆ!)

ಕನ್ನಡಿಗರ 'ಹೋರಾಟ'ದ ಫಲವಾಗಿ ಕನ್ನಡಕ್ಕೆ ಅಭಿಜಾತ ಭಾಷೆಯ ಸ್ಥಾನವು ದೊರಕಿತು ಎಂಬ ಮಾತು ಸರ್ವೇಸಾಧಾರಣವಾಗಿ ಕೇಳಿ ಬರುತ್ತಿದೆ. ಆ ಹೋರಾಟದ ಸ್ವರೂಪ (ಅದನ್ನು 'ಹೋರಾಟ' ಎಂದು ಕರೆಯುವುದಾದರೆ) ಹೀಗಿದೆ. ಭಾರತದ ಶ್ರೇಷ್ಠ ಭಾಷಾತಜ್ಞರಿದ್ದ ಕೇಂದ್ರದ ತಜ್ಞರ ಸಮಿತಿಯು ಕನ್ನಡದ ಅರ್ಹತೆಯನ್ನು ಗುರುತಿಸಿ ಆ ಸ್ಥಾನವನ್ನು ನೀಡಿತು. ಆ ಅರ್ಹತೆಯನ್ನು ನಮ್ಮ ವರದಿಯು ಆಧಾರ ಸಮೇತ ಎತ್ತಿಹಿಡಿಯಿತು. (ಆ ಸಮಿತಿಯ ಮೇಲೆ ಯಾವುದೇ ಹೊರ ಒತ್ತಡವೂ ಪರಿಣಾಮ ಬೀರಿಲ್ಲ). ಕಳೆದ ಜುಲೈ ೨-೩ರಂದು ಮುಖ್ಯಮಂತ್ರಿಗಳ ನಿಯೋಗದ ಮನವಿಗೆ ಪ್ರಧಾನಿಗಳು ಸ್ಪಂದಿಸಲಿಲ್ಲ. ನವೆಂಬರ್ ಒಂದರ ಒಳಗೆ ಅಭಿಜಾತ ಭಾಷೆಯ ಸ್ಥಾನವನ್ನು ನೀಡದಿದ್ದಲ್ಲಿ ದೆಹಲಿಯಲ್ಲಿ ಧರಣಿ ಮಾಡುವುದಾಗಿ ಮುಖ್ಯಮಂತ್ರಿಗಳು ಘೋಷಿಸಿದರು. ಮುಖ್ಯಮಂತ್ರಿಗಳು ಕನ್ನಡ ಜನತೆಯ ಮುಖವಾಣಿ. ಅದನ್ನು ಗಂಭೀರವಾಗಿ ಭಾವಿಸಿದ ಪ್ರಧಾನಿಗಳು ಅಕ್ಟೋಬರ್ ೩೧ರಂದು ತಜ್ಞರ ಸಮಿತಿಯ ನಿರ್ಣಯ ಪ್ರಕಟಿಸಿದರು. ಪ್ರಧಾನಿಗಳ ಮೇಲೆ ಆ ಒತ್ತಡವು ಪ್ರಭಾವ ಬೀರಿದೆಯೆಂಬಲ್ಲಿ ಅನುಮಾನ ಕಾಣಿಸುವುದಿಲ್ಲ.*

* ಸೌಜನ್ಯ: ಕರ್ಮವೀರ, ೨೨.೨.೨೦೦೯.

# ಶಾಸ್ತ್ರೀಯ ಭಾಷೆಗಳು: ವಾಸ್ತವ ಪರಿಸ್ಥಿತಿ ಮತ್ತು ಮೂಲ ಸಮಸ್ಯೆ

ಮೂಲ: **ಶೆಲ್ಡನ್ ಪೋಲಕ್**
ಅನುವಾದ: **ಎನ್.ಎಸ್. ಸುಬ್ಬಣ್ಣ**

೨೦೦೬ರಿಂದ ಕನ್ನಡ ಭಾಷೆಗೆ ಶಾಸ್ತ್ರೀಯ ಸ್ಥಾನಮಾನ ಕೊಡಬೇಕೆಂದು ಪ್ರಾರಂಭವಾದ ಚರ್ಚೆಯನ್ನು ಅದರ ಆರಂಭದಿಂದಲೂ ನಾನು ಕುತೂಹಲದಿಂದ ಗಮನಹರಿಸಿ ನೋಡುತ್ತಿದ್ದೇನೆ. ಭಾಷೆಗಳ ಮಧ್ಯೆ ಈ ರೀತಿಯ ಕಂದಕಗಳನ್ನು ನಿರ್ಮಿಸುವುದು ಅಪಾಯಕರ ಮತ್ತು ಭಾಷೆಗಳಲ್ಲಿ ಈ ಸ್ಥಾನದ ಹಂತಗಳನ್ನು ನಿರ್ಮಿಸಲು ಕೊಡುವ ಕಾರಣಗಳ ಹಿಂದಿನ ಪಾಂಡಿತ್ಯ ಶೈಥಿಲ್ಯದಿಂದ ಕೂಡಿದೆ. ಆದರೆ ಈ ಸಮಸ್ಯೆಯ ಕೇಂದ್ರ ಅಂಶದ ವಿಷಯದಲ್ಲಿ ನನಗೆ ಮಹಾಕವಿ ಭರ್ತೃಹರಿ ಹೇಳಿರುವ ಈ ಮಾತು ನೆನಪಿಗೆ ಬರುತ್ತದೆ. 'ಮನೆ ಉರಿಯುವವರೆಗೂ ಬಾವಿಯನ್ನು ತೋಡಲು ಕಾಯಬಾರದು'. ಏಕೆಂದರೆ ಭಾರತೀಯ ಭಾಷೆಗಳ ಅಧ್ಯಯನದ ಸೌದೆ ಬರೀ ಉರಿಯುತ್ತಿಲ್ಲ. ಹೆಚ್ಚು ಕಡಿಮೆ ಭಸ್ಮೀಭೂತವಾಗಿದೆ.
ಯಾವ ಭಾರತೀಯ ಭಾಷೆಗೇ ಆಗಲಿ ಶಾಸ್ತ್ರೀಯ ಸ್ಥಾನ ಕೊಟ್ಟು ಏನು ಪ್ರಯೋಜನ, ಅವುಗಳನ್ನು ಓದುವವರೇ ಇಲ್ಲದಿದ್ದರೆ? ಆದರೆ ಶಾಸ್ತ್ರೀಯ ಭಾಷೆಯ ಸ್ಥಾನ ನೀಡುವುದರ ಉದ್ದೇಶ, ಆ ಭಾಷೆಯ ಗಂಭೀರ ಅಧ್ಯಯನಕ್ಕೋಸ್ಕರವೇ ಆದರೆ, ಭಾರತದಲ್ಲಿ ಈ ಸ್ಥಾನ ಹೊಂದಬೇಕಾದ ಹತ್ತಕ್ಕೂ ಹೆಚ್ಚು ಭಾಷೆಗಳಿಗೆ ಈ ಸ್ಥಾನ ಸಿಗಬೇಕಾದ ಅತ್ಯಗತ್ಯತೆ ಇದೆ. ಆಧುನಿಕ ಭಾರತೀಯ ಸಾಹಿತ್ಯದ ಕಾಲದ ನಿಕಟಪೂರ್ವ ಸಮಯದ ಎಲ್ಲಾ ಭಾಷೆಗಳಿಗೂ ಇದು ಅನ್ವಯಿಸುತ್ತದೆ.

ಭಾರತಕ್ಕೆ ಸ್ವಾತಂತ್ರ್ಯ ಬಂದಾಗ ಮತ್ತು ಅದಕ್ಕೆ ಹಿಂದಿನ ಸುಮಾರು ಎರಡು ಸಾವಿರ ವರ್ಷಗಳ ಕಾಲ, ಭಾರತದಲ್ಲಿ ಇತಿಹಾಸ ಮತ್ತು ಭಾಷಾ ಸಂಬಂಧದ ಆಳವಾದ ಪಾಂಡಿತ್ಯ ಹೊಂದಿದ ಅನೇಕ ಭಾಷಾಶಾಸ್ತ್ರಜ್ಞರು ಇದ್ದರು. ಈ ತಜ್ಞರು ಜಗತ್ತಿನ ಯಾವುದೇ ಇತರ ಭಾಗದಲ್ಲಿನ ಪಂಡಿತರಿಗೆ ಸಾಟಿಯಾಗಿದ್ದರು. ಅವರು ರೂಪಿಸಿದ ಕನ್ನಡ, ಮಲಯಾಳಂ, ತೆಲುಗು, ತಮಿಳು ಮತ್ತು ಅಪಭ್ರಂಶ, ಅಸ್ಸಾಮೀಸ್, ಬಂಗ್ಲಾ, ಬ್ರಜ್ ಭಾಷಾ, ಗುಜರಾತಿ, ಮರಾಠಿ, ಒರಿಯಾ, ಪರ್ಷಿಯನ್, ಪ್ರಾಕೃತ, ಉರ್ದು ಮತ್ತಿತರ



ಭಾಷೆಗಳಲ್ಲಿನ ಗ್ರಂಥಗಳ ಸಾಹಿತ್ಯಕ ಮತ್ತು ಐತಿಹಾಸಿಕ ಆವೃತ್ತಿಗಳು ಇವತ್ತಿಗೂ ಉಪಯೋಗಿಸಲ್ಪಡುತ್ತಿವೆ. ಹಲವು ಸಂದರ್ಭಗಳಲ್ಲಿ ಈ ಆವೃತ್ತಿಗಳನ್ನು ಬಿಟ್ಟು ಬೇರೆ ನಮಗ ಲಭ್ಯವಿಲ್ಲದೇ ಹೋಗಿದೆ. ಇದಕ್ಕೆ ಕಾರಣ, ಇವುಗಳು (ಕೃತಿಗಳ ಆವೃತ್ತಿಗಳು) ಅತ್ಯವಶ್ಯ ಎಂದಲ್ಲ, ಜ್ಞಾನಕ್ಷೇತ್ರದಲ್ಲಿ ಹೊಸ ತಿಳಿವು ಹಳೆಯದನ್ನು ದೂಡುತ್ತದೆ. ಈ ಸಂದರ್ಭದಲ್ಲಿ ಹೊಸದನ್ನು ಮಾಡುವವರು ಯಾರೂ ಇಲ್ಲ.

ಭಾರತೀಯ ಭಾಷೆಗಳ ಮತ್ತು ಸಾಹಿತ್ಯಗಳ ಅಧ್ಯಯನ ಮಾಡುವಲ್ಲಿ ಈಚಿನ ಎರಡು ತಲೆಮಾರುಗಳ ವಿದ್ಯಾರ್ಥಿಗಳು ಪೂರ್ಣವಾಗಿ ನಿರಾಸಕ್ತರಾಗಿದ್ದಾರೆ. ಇದಕ್ಕೆ ಕಾರಣ ಬೇರೆ ಕ್ಷೇತ್ರಗಳ ಪ್ರಬಲ ಆಕರ್ಷಣೆ. ಇದಕ್ಕೆ ಇದನ್ನೊಂದು ಕಾರಣ ಈ ಕ್ಷೇತ್ರವನ್ನು ಕಡೆಗಣಿಸಿರುವುದು ಕೂಡ. ಪರಿಸ್ಥಿತಿ ತುಂಬಾ ಬಿಗಡಾಯಿಸಿದೆ. ಈ ಸಂದರ್ಭದಲ್ಲಿ ನಾನು ಕೆಲವು ದೃಷ್ಟಾಂತಗಳನ್ನು ಕೊಡುತ್ತೇನೆ. ಅಮೆರಿಕದ ಒಂದು ಪ್ರಸಿದ್ಧ ವಿಶ್ವವಿದ್ಯಾನಿಲಯ ಹಲವು ವರ್ಷಗಳಿಂದ ಒಬ್ಬ ತೆಲುಗು ಭಾಷಾ ಪ್ರಾಧ್ಯಾಪಕನಿಗಾಗಿ ಹುಡುಕಿತು. ವಿಶ್ವವಿದ್ಯಾನಿಲಯವು ಭಾರತೀಯ ಶಾಸ್ತ್ರೀಯ ಅಧ್ಯಯನದಲ್ಲಿ ಅತ್ಯಾಸಕ್ತಿಯನ್ನು ಮೊದಲಿನಿಂದ ಹೊಂದಿದೆ. ನನ್ನಯ್ಯನಿಂದ ಇಂದಿನವರೆಗೂ ತೆಲುಗು ಸಾಹಿತ್ಯದಲ್ಲಿ ಪಾಂಡಿತ್ಯವುಳ್ಳ ಒಬ್ಬ ವಿದ್ವಾಂಸನೂ ಆ ವಿಶ್ವವಿದ್ಯಾನಿಲಯಕ್ಕೆ ದೊರಕಲಿಲ್ಲ. ಈ ಕ್ಷೇತ್ರದಲ್ಲಿ ಗಂಭೀರ ಅಧ್ಯಯನ ಮಾಡಿರುವ ಏಕೈಕ ಪ್ರಾಧ್ಯಾಪಕರು ಈ ವಿಶ್ವವಿದ್ಯಾನಿಲಯದಿಂದ ಸ್ವಲ್ಪ ಸಮಯದಲ್ಲೇ ನಿವೃತ್ತರಾಗುತ್ತಾರೆ. ಅವರ ನಿವೃತ್ತಿಯೊಂದಿಗೆ, ಅಮೆರಿಕದಲ್ಲಿ ತೆಲುಗು ಶಾಸ್ತ್ರಾಧ್ಯಯನವು ಅಸ್ತಂಗತವಾಗುತ್ತದೆ. ಇದೇ ಪರಿಸ್ಥಿತಿ ಬೇರೆ ಭಾಷೆಗಳಲ್ಲೂ ಇದೆ. ಉದಾಹರಣೆಗೆ, ಬಂಗಾಳಿ ಭಾಷೆಯಲ್ಲಿ ಟಾಗೋರರ ಕೃತಿಗಳನ್ನಲ್ಲದೇ ವೈಷ್ಣವ ಪದಗಳನ್ನು ಮತ್ತು ಚೈತನ್ಯನ ಜೀವನ ಚರಿತ್ರೆ 'ಚೈತನ್ಯ ಚರಿತಾಮೃತ'ವನ್ನು ಓದಬಲ್ಲ ವಿದ್ವಾಂಸರು ಅತಿ ವಿರಳ.

ನಾನು ಹಲವು ವರ್ಷಗಳ ಕಾಲ ಶಾಸ್ತ್ರೀಯ ಕನ್ನಡವನ್ನು ಮೈಸೂರಿನ ಡಾ॥ ವೆಂಕಟಾಚಲ ಶಾಸ್ತ್ರಿಗಳೊಡನೆ ಅಧ್ಯಯನ ಮಾಡಿದ್ದೇನೆ. ಅವರು, ಆಗಲೇ ಹೇಳಿದ, ಚಾರಿತ್ರಿಕ ಹಾಗೂ ಗಂಭೀರ ಅಧ್ಯಯನದಲ್ಲಿ ಒಬ್ಬ ಅತ್ಯುತ್ತಮ ಪ್ರತಿನಿಧಿಗಳು. ಕನ್ನಡದ ಪ್ರಸಿದ್ಧ ಕವಿಗಳಾದ ಪಂಪ, ರನ್ನ, ಪೊನ್ನರ ಕೃತಿಗಳಲ್ಲಿ ಪ್ರಭುತ್ವ ಹೊಂದಿದ ಒಬ್ಬ ಯುವ ವಿದ್ವಾಂಸನನ್ನು ನಾನು ಭೇಟಿಯಾಗಲು ಆಗಿಲ್ಲ. ಇನ್ನು ಕರ್ನಾಟಕದ ಅಪ್ರತಿಮ ಶಾಸನಗಳ ಸಂಪತ್ತನ್ನು ಓದುವ ವ್ಯಕ್ತಿಗಳಂತೂ ಇಂತೆಯೇ ವಿರಳ.
ಭಾರತದ ರಾಜಧಾನಿಯಲ್ಲಿರುವ ಎರಡು ಪ್ರಸಿದ್ಧ ವಿಶ್ವವಿದ್ಯಾನಿಲಯಗಳಲ್ಲಿ ಯಾರೂ ಹಿಂದಿ ಶಾಸ್ತ್ರೀಯ ಸಾಹಿತ್ಯದಲ್ಲಿ ಸಂಶೋಧನೆ ಮಾಡುತ್ತಿಲ್ಲ. ನಾನು ಹೇಳುತ್ತಿರುವುದು ಕೇಶವದಾಸ ಮತ್ತು ಆತನ ನಂತರದವರ ಮಹತ್ಕೃತಿಗಳನ್ನು ಕುರಿತು. ಇದನ್ನು ನಾವು ಇಂದಿನ ಪ್ಯಾರಿಸ್‌ನಲ್ಲಿ ಕಾರ್ನೈಲ್, ರೇಸಿನ್ ಮತ್ತು ಮೋಲಿಯೇರ್ ಕೃತಿಗಳ ಬಗ್ಗೆ ಯಾರೂ ಅಧ್ಯಯನ ಮಾಡದಿದ್ದರೆ ಹೇಗೋ ಅದಕ್ಕೆ ಹೋಲಿಸಬಹುದು. ಈ ಪರಿಸ್ಥಿತಿಯ ಚಿಹ್ನೆಯಂತೆ ಸಾವಿರಾರು ಬ್ರಿಜ್ ಭಾಷಾ ಕೃತಿಗಳು ಪತ್ರಾಗಾರದಲ್ಲಿ ಕೂತಿವೆ. ಇಂದಿಗೂ ಸಂಪಾದಿಸುವವರು ಯಾರೂ ಇಲ್ಲದೆ ಈ ಪರಿಸ್ಥಿತಿ ಇಂಡೋ-ಪರ್ಷಿಯನ್ ಸಾಹಿತ್ಯದ ವಿಷಯದಲ್ಲಿ ಇನ್ನೂ ಹೆಚ್ಚು ಪ್ರಸ್ತುತ. ಹಲವಾರು ಹಸ್ತಪ್ರತಿಗಳು ಮೊಘಲ್ ಆಸ್ಥಾನದ ದಿವಾನ್‌ಗಳನ್ನು ಒಳಗೊಂಡು, ಇನ್ನೂ ಓದುವವರಿಲ್ಲದೇ, ಸಂಪಾದನೆ ಸಾಧ್ಯವಾಗದೆ ಇವೆ. ಈ ವಿಷಯದಲ್ಲಿ ಪರಿಚಯ ಇರುವ ಸ್ನೇಹಿತರೊಡನೆ ಪ್ರಸ್ತಾಪ ಮಾಡಿದಾಗ ಈ ಕ್ಷೇತ್ರದಲ್ಲಿ ಇರುವ ನುರಿತ ವಿದ್ವಾಂಸರೆಲ್ಲಾ ೮೦ರ ಮೇಲ್ಪಟ್ಟಿನ ಪ್ರಾಯದವರೆಂದು ಹೇಳುತ್ತಾರೆ.

ಎರಡು ವರ್ಷಗಳ ಹಿಂದೆ, ನಾನು ಉದಯಪುರದಲ್ಲಿ ನಡೆದ ಒಂದು ಸಮ್ಮೇಳನದಲ್ಲಿ ಭಾಗವಹಿಸಿದ್ದೆ ಆ ಸಮ್ಮೇಳನದ ಚರ್ಚಾ ವಿಷಯ "ಭಾರತದಲ್ಲಿ ಮಾನವ ಸಂಬಂಧ ಶಾಸ್ತ್ರಗಳ ಅಧ್ಯಯನದ ಇವತ್ತಿನ ಸ್ಥಿತಿ ಮತ್ತು ಭವಿಷ್ಯ". ಅಲ್ಲಿ ಬಂದಿದ್ದ ನೂರಕ್ಕೂ ಹೆಚ್ಚಿನ ಪ್ರತಿನಿಧಿಗಳನ್ನು ನಾನು ಅವರಲ್ಲಿ ಎಷ್ಟು ಜನ ತಮ್ಮ ಶಿಷ್ಯರಿಗೆ ಭಾರತೀಯ ಭಾಷೆಗಳ ಹಿಂದಿನ ಕೃತಿಗಳನ್ನು ಹೇಳಿಕೊಡುವಿರೆಂದು ಕೇಳಿದೆ. ಅವರಲ್ಲಿ ಹಲವರು ಈ ದೇಶದ ಅತ್ಯುತ್ತಮ ಸಾಹಿತ್ಯ ವಿದ್ವಾಂಸರು. ಅವರಲ್ಲಿ ಕೇವಲ ಮೂರು ಜನ ಕೈ ಎತ್ತಿದರು. ಅವರೆಲ್ಲರೂ ಸಂಸ್ಕೃತಾಧ್ಯಾಪಕರು.

ಒಂಬತ್ತು ವರ್ಷಗಳ ಹಿಂದೆ ಅಪಭ್ರಂಶದ ಪ್ರಸಿದ್ಧ ವಿದ್ವಾಂಸರಾದ ಎಚ್.ಸಿ. ಭಯಾನಿಯವರು ತೀರಿಕೊಂಡರು. ಅವರ ಮೃತ್ಯುವಿನೊಡನೆ ಭಾರತದಲ್ಲಿಯೂ ಅಪಭ್ರಂಶದ ಅಧ್ಯಯನವೇ ಅಂತ್ಯವಾಯಿತು. ನನ್ನ ಅಭಿಪ್ರಾಯದಲ್ಲಿ ಅಪಭ್ರಂಶದಲ್ಲಿ ಏನಾಗಿದೆಯೋ ಅದು ಈ ದೇಶದಲ್ಲಿ ಆಗುತ್ತಿರುವ ಸಾಂಸ್ಕೃತಿಕ ಕಗ್ಗೊಲೆ ಹಾಗೂ ಆತ್ಮಹತ್ಯೆಯ ಸಂಕೇತವಾಗಿದೆ. ಭಾಷಾಜ್ಞಾನದ ಜೊತೆ ಅವರೊಡನೆ ಅನ್ಯೋನ್ಯ ಸಂಬಂಧ ಹೊಂದಿರುವ ಹಳೆಯ ಲಿಪಿಗಳನ್ನು ಓದುವ ಸಾಮರ್ಥ್ಯ (ಉದಾ: ಬ್ರಾಹ್ಮೀ, ಮೋಡಿ, ಶಿಖಾಸ್ತ) ಮರೆಯಾಗುತ್ತಿದೆ.

ನಾನು ಭಾರತದಲ್ಲಿ ಇರುವ ಎಲ್ಲಾ ವಿಶ್ವವಿದ್ಯಾನಿಲಯಗಳಲ್ಲೂ ಈ ಮೇಲೆ ಕಂಡ ವಿಷಯದಲ್ಲಿ ಏನಾಗುತ್ತಿದೆಯೆಂದು ಕೂಲಂಕಷವಾಗಿ ಪರಿಶೀಲಿಸಿಲ್ಲ. ಕೆಲವು ವಿಶ್ವವಿದ್ಯಾನಿಲಯಗಳಲ್ಲಿ ಈ ದಿಸೆಯಲ್ಲಿ ನಾನು ಹೇಳಿದ್ದಕ್ಕೆ ವ್ಯತಿರಿಕ್ತವಾಗಿ ಕಾರ್ಯ ನಡೆಯುತ್ತಿರುವುದು ನನಗೆ ಗೊತ್ತು. ಆದರೆ ಅತಿಶಯೋಕ್ತಿಯಿಲ್ಲದೆ ನಾನು ಇದನ್ನು ಹೇಳಬಲ್ಲೆ. ಇನ್ನು ಎರಡು ತಲೆಮಾರುಗಳಲ್ಲಿ, ಭಾರತದ ವಿದ್ವತ್ ಚರಿತ್ರೆ ಪ್ರಪಂಚದ ನಾಗರಿಕತೆಗೆ ಭಾರತ ಕೊಟ್ಟ ಪ್ರಕಾಶಮಯ ನಿಧಿ–ಭಾರತದ ಜನರಿಗೆ ಓದಲು ಅಶಕ್ಯವಾಗಲಿದೆ.

ಸಂಸ್ಕೃತದಲ್ಲಿ ಇನ್ನೊಂದು ಗಾದೆಯಿದೆ. 'ಒಂದು ಮನೆಯನ್ನು ಸುಲಭವಾಗಿ ಕೆಡವಬಹುದು. ಆದರೆ ಕಟ್ಟುವುದು ಕಷ್ಟ'. ಭಾರತದ ಮಹತ್ತಾದ ವಿದ್ವತ್ ಸೌಧವು ಹೆಚ್ಚು ಕಡಿಮೆ ಕುಸಿದಿದೆ. ಈ ಕೊನೆಯ ಘಳಿಗೆಯಲ್ಲಿ ಅದನ್ನು ಮತ್ತೆ ಕಟ್ಟಲು ಸಾಧ್ಯವೇ? ಭಾರತ ತಾನು ಆರಿಸಿಕೊಂಡ ಕ್ಷೇತ್ರಗಳಲ್ಲಿ ಅತ್ಯುನ್ನತವಾದ ಶಿಖರವನ್ನು ಏರಿ ಎಷ್ಟೋ ಬಾರಿ ತೋರಿಸಿದೆ. ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್, ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಟೆಕ್ನಾಲಜಿ ಸಂಸ್ಥೆಗಳನ್ನೇ ತೆಗೆದುಕೊಳ್ಳಿ. ಪ್ರಪಂಚದ ವಿಶ್ವವಿದ್ಯಾನಿಲಯಗಳು, ಉದ್ಯಮಗಳು ಮತ್ತು ಸಂಸ್ಥೆಗಳು ಈ ಸಂಸ್ಥೆಗಳು ಪದವೀಧರರನ್ನು ತಮ್ಮಲ್ಲಿ ಸೇರಿಸಿಕೊಳ್ಳಲು ಪೈಪೋಟಿ ಮಾಡುತ್ತವೆ. ಏತಕ್ಕಾಗಿ ಭಾರತ ತನ್ನ ಸಂಸ್ಕೃತಿಯ ರಕ್ಷಣೆಗಾಗಿ ಮತ್ತು ಬೆಳವಣಿಗೆಗಾಗಿ ಇದೇ ರೀತಿಯ ಸಂಸ್ಥೆಗಳನ್ನು ಕಟ್ಟಬಾರದು? ಬರೀ ನೃತ್ಯಕಲೆ ಮತ್ತು ಸಂಗೀತಕ್ಕೆ ಮೀಸಲಾಗದೆ ಸಾಹಿತ್ಯ ಸಂಸ್ಕೃತಿಗಾಗಿ ಕೂಡ.

ಭಾರತದ ಶಾಸ್ತ್ರೀಯ ಭಾಷೆಗಳ ಅಧ್ಯಯನದ ಪುನರುತ್ಥಾನಕ್ಕಾಗಿ ಮತ್ತು ಲೋಕಮಾನ್ಯ ವಿದ್ವತ್ತಿಗಾಗಿ, ಮಿಕ್ಕ ವಿಶ್ವವಿದ್ಯಾನಿಲಯಗಳಿಗೆ ಮಾದರಿಯಾಗಿ, ಆ ವಿಶ್ವವಿದ್ಯಾನಿಲಯಗಳಿಗೆ ಜ್ಞಾನ ಗಂಗೋತ್ರಿಯಾಗಿ, ಏಕೆ ಭಾರತೀಯ ಮಾನವ ಸಂಬಂಧ ಶಾಸ್ತ್ರಗಳ ಸಂಸ್ಥೆಗಳನ್ನು ಕಟ್ಟಬಾರದು? ಇನ್ನೂ ಕಾಲ ಮಿಂಚಿಲ್ಲ. ಇದರಲ್ಲಿ ಭಾರತ ವಿಫಲವಾದರೆ ಅದರ ಪರಿಣಾಮ ಒಂದು ಆಗಬಾರದ ಮಹಾ ಅನಾಹುತ.*

* ಸೌಜನ್ಯ: ಸಂಚಯ, (ಮೂಲಪ್ರಕಟಣೆ: ಜನಪದ ವಿಚಾರ ಪತ್ರಿಕೆ, ಸಂ. ೯, ಸಂ. ೬, ಜನವರಿ ೨೦೦೯).

# ನಮ್ಮದು ಕೊಡುವ ಭಾಷೆಯಾಗಬೇಕು

**ಡಾ. ಕೆ.ವಿ. ನಾರಾಯಣ ನಮ್ಮ ಭಾಷಾಶಾಸ್ತ್ರಜ್ಞರಲ್ಲಿ ಮುಖ್ಯರು. ಸಾಹಿತ್ಯ ವಿಮರ್ಶೆಯ ದಾರಿಯಿಂದ ಹೊರಳಿ ಈಚಿನ ಹಲವಾರು ವರ್ಷಗಳಿಂದ ಭಾಷಾಶಾಸ್ತ್ರದ ಅಧ್ಯಯನದಲ್ಲಿ ತೊಡಗಿಕೊಂಡಿದ್ದಾರೆ. ಮೈಸೂರಿನ ಕೇಂದ್ರೀಯ ಭಾರತೀಯ ಭಾಷಾ ಸಂಸ್ಥೆಯಲ್ಲಿ ಸೀನಿಯರ್ ಫೆಲೋ ಆಗಿರುವ ಇವರು ಕನ್ನಡದ ಸಾಹಿತ್ಯ ಸಂಶೋಧನೆ ಹಾಗೂ ವಿಮರ್ಶೆಯ ಬಗೆಗೆ ಸಹಜವೆನ್ನಿಸುವ ಆಳದ ಅರಿವು, ನಮ್ಮ ಭಾಷೆಯ ಮುಂದಿನ ದಾರಿಗಳ ಬಗ್ಗೆ ಖಚಿತವಾದ ನಿಲುವು ಹೊಂದಿದ್ದಾರೆ. ಕೆ.ವಿ.ನಾ ಜೊತೆಗಿನ ಮಾತುಕತೆ ಒಂದು ಅಪರೂಪದ ಅನುಭವ, ನಮ್ಮ ಭಾಷೆಗೆ ಶಾಸ್ತ್ರೀಯ ಸ್ಥಾನ ದೊರಕಿದ ಹಿನ್ನೆಲೆಯಲ್ಲಿ ಅವರೊಂದಿಗೆ ನಡೆಸಿದ ಸಂದರ್ಶನ ಇದು....**

**ಪ್ರ: ನಮಸ್ಕಾರ, ಮೊದಲಿಗೆ ಶಾಸ್ತ್ರೀಯ ಭಾಷೆ ಎಂದರೆ ಏನು ಅನ್ನುವುದನ್ನು ವಿವರಿಸಿ.**

**ಉತ್ತರ:** ಸಾಮಾನ್ಯವಾಗಿ ನಾವು Classical language ಅನ್ನೋದಕ್ಕೆ ಶಾಸ್ತ್ರೀಯ ಭಾಷೆ ಅನ್ನುವ ಪದ ಬಳಸುತ್ತಿದ್ದೇವೆ. ಅದು ಸರಿಯಾದ ಪದ ಅಲ್ಲ. ಶಾಸ್ತ್ರೀಯ ಅನ್ನುವುದು ನಿಯಮಬದ್ಧವಾದದ್ದು ಅನ್ನುವ ಅರ್ಥ ಕೊಡುತ್ತದೆ. ಎಲ್ಲ ಭಾಷೆಗಳೂ ನಿಯಮಬದ್ಧವೇ, ಜಗತ್ತಿನ ಅತ್ಯಂತ ಕಡಿಮೆ ಜನ ಮಾತನಾಡುವ ಭಾಷೆಯೂ ನಿಯಮಬದ್ಧವೇ. ಈ Classical language ಅನ್ನೋದು ನಮ್ಮ ಭಾಷಾಶಾಸ್ತ್ರಜ್ಞರು ಒಂದಿನ್ನೂರು ವರ್ಷಗಳಿಂದ ಬಳಸುತ್ತಾ ಇದ್ದಾರೆ. ಯಾವುದು ಇವತ್ತು ಜನಬಳಕೆಯ ಭಾಷೆ ಆಗಿಲ್ಲವೋ ಆದರೆ ಒಂದು ಕಾಲಕ್ಕೆ ಜನಬಳಕೆಯಲ್ಲಿದ್ದು ಅಪಾರವಾದ ಜ್ಞಾನ ಸಂಗ್ರಹ ಆ ಭಾಷೆಯಲ್ಲಿ ಇದ್ದು ಅಂಥದನ್ನ Classical language ಅಂತ ಕರೆದರು. ಲ್ಯಾಟಿನ್, ಓಲ್ಡ್ ಗ್ರೀಕ್, ಹೈ ಅರಾಬಿಕ್ (ಖುರಾನ್ ರಚನೆಯಾದ ಅರಾಬಿಕ್) ಹಾಗೆಯೇ ಸಂಸ್ಕೃತ, ಇಂಥವು Classical languages. ಇವುಗಳ ಅಧ್ಯಯನ ಬಹಳ ಮುಖ್ಯ. ಯಾಕೆ ಅಂದರೆ, ಅವುಗಳ ರಚನೆಯ ದೃಷ್ಟಿಯಿಂದ ಅಲ್ಲ, ಅವು ಜಗತ್ತಿನ ಉಳಿದ ಭಾಷೆಗಳ ಹಾಗೇ ರಚನೆಗಳನ್ನು ಹೊಂದಿವೆ. ಆದರೆ ಅವುಗಳ ಬರವಣಿಗೆಯ ರೂಪದಲ್ಲಿ ಆಳವಾದ ಜ್ಞಾನ ಸಂಪತ್ತಿದೆ, ಮಾನವ ಜನಾಂಗಕ್ಕೆ ಆ ಜ್ಞಾನ ಸಂಪತ್ತನ್ನು ದಾಖಲಿಸುವ ದೃಷ್ಟಿಯಿಂದ ಇವುಗಳನ್ನು ಉಳಿದ ಭಾಷೆಗಳಲ್ಲಿನ ವಿವರಿಸುವ ಪಂಡಿತರು ಬೇಕು ಅನ್ನುವ ಕಾರಣದಿಂದ ಈ ಪರಿಕಲ್ಪನೆ ಬೆಳೆಯಿತು. ಆ ಭಾಷೆಗಳ ಅಧ್ಯಯನಕ್ಕೆ ಒತ್ತು ನೀಡಲಾಯಿತು. ಸ್ವಾತಂತ್ರ್ಯ

ನಂತರದಲ್ಲೂಈ Classical languages ನ ಪಂಡಿತರುಗಳನ್ನು ಪ್ರೋತ್ಸಾಹಿಸುತ್ತ ಬಂದಿದ್ದೇವೆ. ಅರೇಬಿಕ್, ಪಾರ್ಸಿ, ಪರ್ಶಿಯನ್, ಸಂಸ್ಕೃತ ಮೊದಲಾದ ಭಾಷೆಗಳ ಅಧ್ಯಯನ ಮಾಡುವವರನ್ನು Classical Scholars ಅಂತ ಅವರಿಗೆ ಪ್ರಶಸ್ತಿ ಸನ್ಮಾನಗಳನ್ನು ಮಾಡುತ್ತಾ ಬಂದಿದ್ದೇವೆ.

ಒಂದು ತಿಳುವಳಿಕೆ ಅಂದರೆ ಆ ಭಾಷೆಗಳನ್ನು ಆಡುವ 'ಮೊದಲ ಭಾಷಿಕರು' ಇವತ್ತು ಇಲ್ಲ ಅಂತ. ಈ ಭಾಷೆಗಳನ್ನು ಕಲಿತು ಆಡುವವರಿರಬಹುದು. ಆದರೆ ಅದು ಅವರ ಮೊದಲ ಭಾಷೆಯಾಗಿಲ್ಲ. ಸಂಸ್ಕೃತದ ಪರವಾಗಿ ವಾದಿಸುವ ಕೆಲವರ ಪ್ರಕಾರ ಸಂಸ್ಕೃತ ಮಾತನಾಡಬಲ್ಲವರು ಎಷ್ಟೋ ಸಾವಿರ ಸಂಖ್ಯೆಯಲ್ಲಿದ್ದಾರೆ ಅಂತ, ಅದು ೨೦೦೧ರ ಸೆನ್ಸೆಸ್‌ನಲ್ಲೂ ಇದೆ. ಆ ರೀತಿ ಮಾತನಾಡುವವರ ಮೊದಲ ಭಾಷೆ ಸಂಸ್ಕೃತವಾಗಿಲ್ಲ. ಅದನ್ನ ಎರಡನೇ ಭಾಷೆಯಾಗಿ ಅವರು ಕಲಿತವರು.

ಈಚೆಗೆ ೨೧ನೇ ಶತಮಾನದ ತಿರುವಿನಲ್ಲಿ ತಮಿಳು ಭಾಷಿಕರು ತಮ್ಮ ಭಾಷೆಗೆ ಈ Classical language ನ ಸ್ಥಾನ ಬೇಕೆಂದು ಕೇಳಿದರು. ಅವರು ಕೇಳಿದ್ದಕ್ಕೆ ಕಾರಣವೂ ಇಲ್ಲದೇ ಇಲ್ಲ. ಅದಕ್ಕೆ ಎರಡು ಕಾರಣಗಳಿದ್ದವು. ಒಂದು, ತಮಿಳು ಅತ್ಯಂತ ಪ್ರಾಚೀನವಾದ ಭಾಷೆ ಅನ್ನುವುದು, ಎರಡನೆಯದು, ಇಂಡಾಲಜಿ (ಭಾರತೀಯಶಾಸ್ತ್ರ) ರೂಪುಗೊಂಡಾಗ ಅದು ಸಂಸ್ಕೃತ ಕೇಂದ್ರಿತ ಆಗಿತ್ತು. ಭಾರತಕ್ಕೆ ಸಂಬಂಧಿಸಿದ ಎಲ್ಲ ತಿಳುವಳಿಕೆಗಳಿಗೂ ಸಂಸ್ಕೃತದ ಮೂಲಕವೇ ದೊರಕುತ್ತದೆ. ಆದ್ದರಿಂದ ಎಲ್ಲ Indologist ಗಳೂ ಸಂಸ್ಕೃತ ಕಲಿತವರೇ ಆಗಿರುತ್ತಿದ್ದರು. ತಮಿಳಿನವರ ತಿಳುವಳಿಕೆ; ಭಾರತದ ಬಗ್ಗೆ ತಿಳಿಯಲು ತಮಿಳು ಕೂಡಾ ಒಂದು ಪ್ರಾಚೀನ ಭಾಷೆ, ಸಂಸ್ಕೃತ ಒಂದೇ ಅಲ್ಲ ಅಂತ. ಸಂಸ್ಕೃತ ಕೇಂದ್ರಿತವಾಗಿರುವುದನ್ನು ಒಡೆಯುವುದು ಅವರ ಆಸಕ್ತಿಯಾಗಿತ್ತು. ಅದು ಅವರ ರಾಜಕಾರಣದ ಒಂದು ಭಾಗ. ಪ್ರತಿಯೊಂದಕ್ಕೂ ಅವರು ಆ ರೀತಿ ಮಾಡಿದ್ದಾರೆ, ಮೊದಲಿನಿಂದ ಅವರು 'ಉತ್ತರ'ವನ್ನು ವಿರೋಧಿಸುತ್ತಾ ಬಂದವರವರು. ಈಗ ಪುರಾಣಗಳಿರಬಹುದು, ರಾಮಾಯಣ, ಮಹಾಭಾರತ ಇರಬಹುದು Political hagemony ಇಂದ ಇರಬಹುದು. ಪ್ರತಿಯೊಂದರಲ್ಲೂ ತಮಿಳಿನವರು ಆ ಥರವೇ ಮಾಡಿದ್ದಾರೆ, ಇದನ್ನು ಕೂಡಾ ಅದರ ಭಾಗವಾಗೇ ನೋಡಬೇಕಿದೆ.

**ಪ್ರ: ತಮಿಳಿನಂಥ ಜೀವಂತವಿರುವ ಭಾಷೆಗೆ Classical languages ಸ್ಥಾನ ಕೊಡುವ ಸಂದರ್ಭದಲ್ಲಿ ಅದರ ಅರ್ಥವ್ಯಾಖ್ಯೆ ಏನಿತ್ತು? ಅದು ಬದಲಾಗಬೇಕಾಯ್ತಲ್ಲವೆ?**

**ಉತ್ತರ:** ಆಗಲೇಬೇಕಾಯ್ತು, ನಾಲ್ಕು ವರ್ಷಗಳ ಹಿಂದೆ ಈ ಚರ್ಚೆ ಪ್ರಾರಂಭಗೊಂಡು ತಮಿಳಿಗೆ ಈ ಮನ್ನಣೆ ಕೊಟ್ಟ ಮೇಲೆ ಕನ್ನಡಕ್ಕೂ ಆ ಸ್ಥಾನಮಾನ ಬೇಕು ಅಂದಾಗ, ಕನ್ನಡ ವಿಶ್ವವಿದ್ಯಾಲಯದಿಂದ ಒಂದು Document ಸಿದ್ಧಪಡಿಸಿದಾಗ, ನಾವು ಅದನ್ನು Living Classical language ಅಂತ ಕರೆದೆವು, ಆ ದಾಖಲೆಯ ತಲೆಬರಹ ಹಾಗೇ ಇದೆ– Kannada Living Classical language ಅಂತ. ಅದಕ್ಕೆ ಭಾಷಾಶಾಸ್ತ್ರದಲ್ಲಿ ಇನ್ನೊಂದು ಪರಿಕಲ್ಪನೆ ಇದೆ. Heritage language ಅಂತ, ಅಥವಾ ಪಾರಂಪರಿಕ ಭಾಷೆಗಳು ಅಂತ. ಹಲವಾರು ಶತಮಾನಗಳಿಂದ ಜನಬಳಕೆಯಲ್ಲಿದ್ದು ಬರವಣಿಗೆ, ಅಪಾರ ಜ್ಞಾನಸಂಪತ್ತು ಇದ್ದು ಈಗಲೂ ಜನ ಬಳಸುತ್ತಿರುವ ಭಾಷೆಗಳನ್ನು Classical language ಗೆ ಪರ್ಯಾಯವಾಗಿ Heritage language ಅಂತ ಕರೆಯಲಾಯ್ತು. ಉದಾಹರಣೆಗೆ ಚೈನೀಸ್, ಹಿಬ್ರೂ, ಜಪಾನಿಸ್, ಈ ಅರ್ಥದಲ್ಲಿ ಭಾರತದ ಭಾಷೆಗಳನ್ನು Heritage language ಅಂತ ನೋಡಿದಾಗ ಕನ್ನಡ ಮತ್ತು ತಮಿಳು ಭಾಷೆಗಳನ್ನು ಈ ಗುಂಪಿಗೆ ಸೇರಿಸಬಹುದು.

ಯಾಕೆಂದರೆ ಕ್ರಿಸ್ತಶಕದ ಆರಂಭದಿಂದ ಹಿಡಿದು ಈಗ ನಾವು ಮೂರನೆಯ ಸಹಸ್ರಮಾನದಲ್ಲಿ ಇದ್ದೀವಿ. ಮೊದಲನೆಯ ಸಹಸ್ರಮಾನದಲ್ಲಿ ಜನ ಬಳಕೆಯಲ್ಲಿದ್ದು ಬರವಣಿಗೆ ಇದ್ದು, ಎರಡನೇ

ಸಹಸ್ರಮಾನದಲ್ಲೂ ಬರಹ ಬಳಕೆಗಳಲ್ಲಿದ್ದು ಈಗ ಮೂರನೆಯ ಸಹಸ್ರಮಾನದಲ್ಲೂ ಜನಬಳಕೆ ಬರವಣಿಗೆಯುಳ್ಳ ಭಾಷೆ ಯಾವುದಾದರೂ ಇದ್ದರೆ ಭಾರತದಲ್ಲಿ ಅದು ತಮಿಳು ಮತ್ತು ಕನ್ನಡ ಮಾತ್ರ. ಜಗತ್ತಿನಲ್ಲಿ ಮೂರು ಸಾವಿರ ವರ್ಷಗಳ ಜನರ ಭಾಷೆಯಾಗಿದ್ದು, ಬರವಣಿಗೆಯನ್ನು ಹೊಂದಿರುವ, ಜೀವಂತವಾಗಿರುವ ಮೊದಲ ಹತ್ತು ಭಾಷೆಗಳನ್ನು ಗುರ್ತಿಸಿದರೆ ಅದರಲ್ಲೂ ಕನ್ನಡ ಮತ್ತು ತಮಿಳು ಬರುತ್ತವೆ. ಉಳಿದ ಭಾಷೆಗಳು ಪ್ರಾಚೀನ ಇರಬಹುದು. ಆದರೆ, ಅವು ಬದುಕಿಲ್ಲ, ಗ್ರೀಕ್ ಮತ್ತು ಲ್ಯಾಟಿನ್ ಮುಂತಾದ ಭಾಷೆಗಳು ಕನ್ನಡಕ್ಕಿಂತ ಪ್ರಾಚೀನ. ಆದರೆ ಜೀವಂತವಾಗಿಲ್ಲ. ಇವು ಮಾತ್ರ ಕೊಂಡಿ ಕಳಚದೆ ನಿರಂತರವಾಗಿ ಬದುಕಿವೆ. ಆದ್ದರಿಂದ ಸಹಜವಾಗಿ ಇಂಥ ಭಾಷೆಗಳಿಗೆ ತಮಗೊಂದು Special Status ಬೇಕು ಅಂತ ಅನ್ನಿಸಿದ್ದರೆ ತಪ್ಪೇನೂ ಇಲ್ಲ.

ಇದಕ್ಕೆ ಇನ್ನೊಂದು ಕಾರಣವೂ ಇದೆ; ಭಾರತದ ರಾಜ್ಯಾಂಗ ನಿರ್ಮಾಣದ ಸಂದರ್ಭದಲ್ಲಿ ರಾಜ್ಯಾಂಗದ ಎಂಟನೇ ಪರಿಚ್ಛೇದದಲ್ಲಿ ಹದಿನೈದು ಭಾಷೆಗಳನ್ನು ಸೇರಿಸಲಾಯ್ತು. ಅದಕ್ಕೆ ಕಾರಣಗಳೇನು ಅನ್ನೋದಕ್ಕೆ ತರ್ಕವೇನೂ ಇರಲಿಲ್ಲ. ಲಿಪಿ ಇದ್ದದ್ದೋ ಒಂದು ಪ್ರಾಂತದ ಭಾಷೆಯಾಗಿದ್ದೋ ಇಂಥದೇ ಅಂತ ಕಾರಣ ಕೊಡಲಾಗುವುದಿಲ್ಲ. ಉದಾಹರಣೆಗೆ ಸಿಂಧಿ, ಅದು ಯಾವ ಪ್ರಾಂತ್ಯದ ಭಾಷೆಯೂ ಆಗಿರಲಿಲ್ಲ. ಹಾಗೇ ಉರ್ದು ಯಾವ ಪ್ರಾಂತದ ಭಾಷೆಯಲ್ಲದೆ ಭಾರತದಾದ್ಯಂತ ಆಡಲ್ಪಡುತ್ತದೆ. ಇದು ತಪ್ಪು ಅಂತ ನಾನು ಹೇಳುತ್ತಿಲ್ಲ. ಮುಂದೆ ೨೦೦೪ರಲ್ಲಿ ಈ ಸಂಖ್ಯೆ ಹೆಚ್ಚು ಮಾಡಿ ಬೋಡೋ, ಸಂತಾಲಿ, ಮೈಥಿಲಿ, ಡೋಗ್ರಿ ಭಾಷೆಗಳನ್ನು ಈ ಪಟ್ಟಿಗೆ ಸೇರಿಸಿದರು. ೧೯೫೦ರಲ್ಲಿ ಮೈಥಿಲಿಯನ್ನು ಒಂದು ಭಾಷೆ ಅಂತಲೇ ಕರೀತಿರ್ಲಿಲ್ಲ. ಇನ್ಯಾವುದೋ ಭಾಷೆಯ ಒಂದು Dilect ಅಂತ ಕರೀತಿದ್ದರು. ಅದನ್ನು ಒಂದು ಭಾಷೆ ಅಂತ ಪರಿಗಣಿಸೋದಷ್ಟೇ ಅಲ್ಲದೆ, ೮ನೇ ಪರಿಚ್ಛೇದದಲ್ಲೂ ಸೇರಿಸಲಾಯ್ತು. ಹಾಗೆ ಸೇರಿಸಬಾರದು ಅಂತ ನಾನು ಹೇಳ್ತಿಲ್ಲ. ಲಿಪಿಯೇ ಇಲ್ಲದ ಪಂಡಾರಿ ಅಂತಹ ಭಾಷೆಗೆ ಮಾನ್ಯತೆ ನೀಡಲಾಯಿತು. ಸಂತಾಲೀ ಭಾಷೆಗೆ ಈಗ ಲಿಪಿಯನ್ನು ರೂಪಿಸುವ ಪ್ರಯತ್ನ ನಡೆದಿದೆ. ಇವು ಎಲ್ಲವೂ ತಂತಮ್ಮ ಅಸ್ಮಿತೆ ಅಥವಾ Identity ಗಳನ್ನು ಉಳಿಸಿಕೊಳ್ಳುವ ಪ್ರಯತ್ನಗಳು, ಹೋರಾಟಗಳು. ಅದಕ್ಕೆ ಕೇಂದ್ರದ ಸ್ಥಾನಮಾನ ಎಲ್ಲವೂ ಸರಿ, ಆದರೆ ಇಷ್ಟು ಪ್ರಾಚೀನವಾಗಿರುವ ಭಾಷೆಗಳಿಗೂ ಒಂದು ಉಮೇದು ಬರ್ತದೆ. ನಮ್ಮದೇನು Special status ಇಲ್ಲವೇ? ಈ ಎಲ್ಲ ಭಾಷೆಗಳೂ ಸಮಾನ ಆಗೋದಾದ್ರೆ equals ನಲ್ಲಿ ನಾವು more equals ಅನ್ನೋದು ಬರುತ್ತದೆ. ಅದು ಸರಿಯೋ, ತಪ್ಪೋ ಬೇರೆ. ಹಾಗೊಂದು ಭಾವನೆ ಮೂಡುವುದಕ್ಕೆ ಕಾರಣ ಹೇಳಿದೆ. ಶತಮಾನಗಳ ಕಾಲ ಜನಭಾಷೆಯಾಗಿರುವ ಈ ಭಾಷೆಗಳಿಗೆ ಒಂದು ವಿಶೇಷ ಸ್ಥಾನಮಾನಕ್ಕೆ ಕೇಳಿದವು. Language Politics ನಲ್ಲಿ ಇದೊಂದು ಕಾರಣ ಆಯ್ತು ಪೈಪೋಟಿ ನಡೆಸಬೇಕಾಯ್ತು.

**ಪ್ರ: ಹಾಗಿದ್ದರೆ ಕನ್ನಡದ ಪ್ರಾಚೀನತೆಯ ಪ್ರಶ್ನೆಯನ್ನು ಹೇಗೆ ವಿಸ್ತರಿಸ್ತೀರಿ.**

**ಉತ್ತರ:** ಈ ಶತಮಾನದ ಆರಂಭದಲ್ಲಿ ನಡೆದ ಚರ್ಚೆಗಳು ಬೇರೆಯದೇ ಥರ ಇದೆ. ಗೋವಿಂದ ಪೈ ಮುಂತಾದ ವಿದ್ವಾಂಸರು ಮೂರು ಬಗೆಯ ಉಲ್ಲೇಖಗಳನ್ನು ಮುಂದಿಡುತ್ತಾರೆ. ೧. ಕರ್ನಾಟಕದ ಬಗೆಗಿನ ಉಲ್ಲೇಖಗಳು; ೨. ಕನ್ನಡದ ಬಗೆಗಿನ ಉಲ್ಲೇಖಗಳು; ೩. ಕನ್ನಡ ಮಾತಾಡುವ ಜನ ಸಮುದಾಯದ ಬಗೆಗಿನ ಉಲ್ಲೇಖಗಳು ಎಲ್ಲೆಲ್ಲಿದೆ ಅಂತ ಹುಡುಕಿದ್ದಾರೆ. ಆದರೆ ಆ ಜನಸಮುದಾಯ ಕರ್ನಾಟಕದಲ್ಲೇ ಇರಬೇಕು ಅಂತೇನಿಲ್ಲ. ಇನ್ನೆಲ್ಲೋ ಇರಬಹುದು. ಹಾಗೆಯೇ ಕನ್ನಡ ನಾಡು ಅಂತ ಯಾವುದನ್ನು ಕರೆಯುತ್ತಿದರು ಅದು ಒಂದು Identity,ಇದನ್ನೊಂದು ಭಾಷಿಕವಾದ Identity ಯಾಗಿ ಗುರುತು ಮಾಡ್ತಾ ಇದ್ದರು. ಅದಕ್ಕೆ ಆಕರಗಳನ್ನು ಅವರು ಕನ್ನಡದಲ್ಲೇ ಹುಡುಕದೆ ಬೇರೆ ಭಾಷೆಗಳಲ್ಲಿ ಹುಡುಕಿದರು. ಗ್ರೀಕ್ ಭಾಷೆಯಲ್ಲಿ, ಪ್ರಾಕೃತದಲ್ಲಿ ಹುಡುಕಿದರು. ಅವರಿಗೆ ಕನ್ನಡದ ಅಸ್ಮಿತೆಯ ಪ್ರಶ್ನೆ ಅವರ ಸಂಶೋಧನೆಯ ಗುರಿಯಾಗಿ ಇತ್ತು. ಆಗ, ಕನ್ನಡದ ಅಸ್ಮಿತೆಯನ್ನು ತನ್ನತನವನ್ನು ಚಹರೆಗಳನ್ನು ಗುರುತಿಸೋ ಕೆಲಸ ಮಾಡಬೇಕು ಎಂಬ ಉದ್ದೇಶದಿಂದ ಸಂಶೋಧನೆ ಮಾಡಿದರು. ಅವರ ನಂತರ

ನಾವು ಮಧ್ಯದಲ್ಲಿ ಅಂಥದ್ದನ್ನು ಬಿಟ್ಟುಕೊಟ್ಟೆವು. ಸಂಶೋಧನೆಗಳನ್ನು ಬಿಟ್ಟು ಕೊಟ್ಟೆವು. ಎಷ್ಟರಮಟ್ಟಿಗೆ ಅಂದರೆ ಗ್ರೀಕ್ ನಾಟಕಗಳಲ್ಲಿ ಕನ್ನಡದ ಮಾತುಗಳ ಉಲ್ಲೇಖ ಇದೆ ಎಂಬ ಗೋವಿಂದ ಪೈ ಅವರ ಮಾತನ್ನು ನಾವು ನಿರಾಕರಿಸಿಬಿಟ್ಟೆವು. ಅಷ್ಟೇ ಅಲ್ಲ, ಇನ್ನೊಂದು ಸಲ ಆ ನಾಟಕವನ್ನು ನೋಡುವ ಪ್ರಯತ್ನ ಕೂಡ ಯಾವ ಕನ್ನಡದ ವಿದ್ವಾಂಸರೂ ಮಾಡಲಿಲ್ಲ. ನೀವು 'ಅಕ್ಸಿರಿಯ ಪಪೈರಸ್' ಅನ್ನು ಗೂಗಲ್ ಮಾಡಿದ್ರೆ ಎರಡು ಸಾವಿರಕ್ಕಿಂತ ಜಾಸ್ತಿ ಉಲ್ಲೇಖಗಳು ಇದೆ. ಅದರಲ್ಲಿ ಕನ್ನಡದ ಉಲ್ಲೇಖವಿರುವ ಭಾಗ ನಂಬರ್ ೪೧೩ ಇರಬಹುದು. ಅದರ ಬಗ್ಗೆಯೇ ಈಗ ೨೦೦೬-೦೭ರಲ್ಲಿ ವಿದ್ವತ್ ಲೇಖನಗಳು ಬಂದಿವೆ. ಯುರೋಪಿಯನ್ ಭಾಷಿಕರು ಮತ್ತೆ ಈಗ ಗೋವಿಂದ ಪೈ ಸಂಶೋಧನೆಗಳನ್ನು ಉಲ್ಲೇಖಿಸುತ್ತಿದ್ದಾರೆ. ಆದರೆ ಕನ್ನಡದ ವಿದ್ವಾಂಸರು ಮತ್ತೆ ಅದನ್ನು ನೋಡುವ ಪ್ರಯತ್ನವನ್ನು ಕೂಡ ಮಾಡಿಲ್ಲ.

ಅದಕ್ಕೆ ಕಾರಣಗಳು ಹಲವಾರಿವೆ. ನವೋದಯದ ನಂತರ ಬಂದ ಪ್ರಗತಿಶೀಲ ನವ್ಯ ಚಿಂತನೆಗಳಲ್ಲಿ ಇವತ್ತಿಗೆ ನಾವು ಪ್ರಾಮುಖ್ಯತೆ ಕೊಟ್ಟು ಚರಿತ್ರೆಯನ್ನು ಪುನರ್ ರಚಿಸಬೇಕು, ಒಂದು Identity ಬೇಕು ನಮಗೆ, ಪ್ರಾಚೀನತೆಯಲ್ಲಿ ಪಾವಿತ್ರ್ಯ ಇದೆ ಅನ್ನುವುದನ್ನು ನಾವು ಬಿಟ್ಟುಕೊಟ್ಟುಬಿಟ್ಟಿದ್ದರಿಂದ ನಷ್ಟವಾಗಿರುವುದು ನಮಗೆ. ಇನ್ನೊಂದು ಉದಾಹರಣೆ ಹೇಳುವೆ. ಶಾಸನಗಳಲ್ಲಿ ಕ್ರಿ.ಶ. ೪೫೦ರ ಹಲ್ಮಿಡಿ ಶಾಸನವನ್ನು ಅತ್ಯಂತ ಪ್ರಾಚೀನ ಎಂದು ಇವತ್ತು ಶಾಲಾ ಪಠ್ಯದಲ್ಲಿ ಹೇಳುತ್ತೇವೆ. ಅದಕ್ಕೂ ಹಿಂದೆ ಕ್ರಿ.ಶ. ೧೮೮೦ರಲ್ಲಿನ ನಂಜನಗೂಡಿನ ಒಂದು ಹಳೆಯ ಶಾಸನ ಇದೆ ಅಂತ ಗೋವಿಂದ ಪೈ ಹೇಳಿದ್ದನ್ನು ಮೈಸೂರು ವಿ.ವಿ.ಯ ವಿದ್ವಾಂಸರು ನಿರಾಕರಿಸಿದರು. ಅವರು ಯಾಕೆ ಹಾಗೆ ಹೇಳಿದರು, ಅದು ನಿಜವಾ ಅಂತ ಪರೀಕ್ಷಿಸಿಯೂ ಇಲ್ಲ.

ಈಚೆಗೆ ಅವು ಎರಡು ಕಾರಣಗಳಿಗಾಗಿ ಸಂಶೋಧನೆಗಳು ಪ್ರಾಮುಖ್ಯತೆ ಪಡೆಯಲಿವೆ. ಕನ್ನಡಕ್ಕೆ Classical Language Status ಬೇಕು ಅಂದಾಗ ಅದರ ಪ್ರಾಚೀನತೆ ಪ್ರತಿಪಾದಿಸಲಿಕ್ಕೆ, ಎರಡನೆಯದು ಕನ್ನಡದ್ದು ಒಂದು ಅವಿಚ್ಛಿನ್ನವಾದ ಮುರಿಯದ ಪರಂಪರೆಯೊಂದು ಇದ್ದರೆ ಅದನ್ನು ಪುನರ್‌ರಚಿಸಬೇಕಾಗಿದೆ. ಭಾಷೆಯಾಗಿ ಅದು ಹೇಗೆ ಆಕಾರ ಪಡೆಯುತ್ತ ಬಂತು, ಅದರ ಬೇರುಗಳೆಲ್ಲಿದೆ, ಅದರ ಕೊಂಬೆ ಟಿಸಿಲುಗಳು ಹೇಗೆ ಬದಲಾಗಿದೆ ಒಂದು Organic ಆದ ಜೀವಂತವಾದ ಭಾಷಿಕವಾದದ್ದಿರಬಹುದು ಅಥವಾ ಸಾಂಸ್ಕೃತಿಕವಾದದ್ದಿರಬಹುದು ಪ್ರಾಚೀನತೆಯ ಶೋಧವೊಂದು ಆರಂಭಗೊಳ್ಳಬೇಕಿದೆ.

ಈಗ ಸರ್ಕಾರಕ್ಕೆ ಮಂಡಿಸಿದ ನಿಲುವು ರಾಜಕೀಯವಾದದ್ದೇ ಆದರೂ ಈ ಹಿಂದಿರುವ ದಾಖಲೆಗಳನ್ನೇ ಮತ್ತೆ re-visit ಮಾಡಿ, present ಮಾಡಿದ್ದಾರೆ. ಇಲ್ಲೊಂದು ವಿಷಯ ಹೇಳಬೇಕು; ಈ ಸಂದರ್ಶನಕ್ಕೆ ಬಳಸಿಕೊಳ್ಳಿ ಅಥವಾ ಬಿಡಿ. ಸಿತ್ತಿನ್ ವಾಸಲ್ ಅಂತ ತಮಿಳುನಾಡಿನಲ್ಲೊಂದು ಜಾಗ ಇದೆ. ಅಲ್ಲಿ ಒಂದು ಪ್ರಾಚೀನ ತಮಿಳು ಶಾಸನ ಇದೆ. ಆರ್.ಆರ್. ಮಹಾದೇವನ್ ಎಂಬ ಅಂತಾರಾಷ್ಟ್ರೀಯ ಖ್ಯಾತಿಯ ತಮಿಳು ವಿದ್ವಾಂಸರು ಆ ಶಾಸನವನ್ನು ಓದಿದವರು. ಅವರು ಆ ಶಾಸನದಲ್ಲಿ ಕೆಲವು ಪದಗಳು ತಮಿಳಿನವಲ್ಲ, ಕನ್ನಡದವು ಅನ್ನುತ್ತಾರೆ. ಕ್ರಿಸ್ತಪೂರ್ವದ ಉಲ್ಲೇಖ ಇದು. ಉದಾಹರಣೆಗೆ - ಹೊಸ್ತಿಲ್ ಅನ್ನುವ ಪದ, ಗೌಂಡಿ ಅನ್ನುವುದು ತಮಿಳಿನವಲ್ಲ ಕನ್ನಡದ್ದು ಅಂದರು. ವಿಚಿತ್ರ ಅಂದರೆ ಕನ್ನಡ ವಿದ್ವಾಂಸರು ಅದನ್ನು ಒಪ್ಪುತ್ತಿಲ್ಲ. ಹಾಗೆ

ಅದನ್ನು ನಿರಾಕರಿಸಬೇಕಿದ್ದವರು ತಮಿಳಿನವರು. ಮುಖ್ಯ ಸಿತ್ತಿನ್ ವಾಸಲ್ ದಾಖಲೆಗಳನ್ನು ನಮ್ಮ ಪ್ರಾಚೀನತೆಯ ಮಂಡನೆಗೆ ಸೇರಿಸಿಕೊಳ್ಳಬೇಕೋ ಬೇಡವೋ ಅನ್ನುವ ಗೊಂದಲ.

ಶಂಗಂ ಸಾಹಿತ್ಯದಲ್ಲಿ ಇರುವ ಎಷ್ಟೋ ಪದಗಳು ಇವತ್ತಿನ ತಮಿಳಿನಲ್ಲಿ ಇಲ್ಲ. ಆದರೆ ಕನ್ನಡದಲ್ಲಿದೆ. ಬಹಳ ಸರಳವಾದ ಉದಾಹರಣೆ ಹೇಳ್ತೀನಿ – 'ಇಳಿ' ಎನ್ನುವ ಪದ ತಮಿಳು ಶಂಗಂ ಸಾಹಿತ್ಯದಲ್ಲಿದೆ. ಆದರೆ ಇವತ್ತಿನ ತಮಿಳಿನಲ್ಲಿ 'ಎರಂಗು' ಎಂಬ ಪದ ಇದೆ. 'ಇಳಿ' ಅಂತಿಲ್ಲ. ಇದು ಕನ್ನಡದ ಪ್ರಾಚೀನತೆ ನಿರೂಪಿಸಲಿಕ್ಕೆ ಇರುವ ಕನ್ನಡದ ಹೊರಗಿನ ಆಕರ. ಕನ್ನಡ ಅನ್ನುವ ಭಾಷೆ ಹೇಗೆ ರೂಪುಗೊಂಡಿತು, ಹಾಗೆ ರೂಪುಗೊಳ್ಳುವ ಸಂರ್ಭದಲ್ಲಿ ಒಂದು ಭಾಷೆಯಿಂದ ಮತ್ತೊಂದಕ್ಕೆ ಹೇಗೆ ಪದಗಳು ಪರಿಚಯವಾಯ್ತು ಪ್ರಯಾಣ ಮಾಡಿದ್ದವು ಅನ್ನುವುದನ್ನು ನೋಡಲಿಕ್ಕೆ ನಾವು ಸಿದ್ಧರಿಲ್ಲ.

ಈ Classical language ಅನ್ನೋ ಪ್ರಾಧಾನ್ಯ ಸಿಕ್ಕಿರೋ ಸಂದರ್ಭದಲ್ಲಿ ಇನ್ನೂ ಮುಕ್ತ ಮನಸ್ಸಿನಿಂದ ನಮ್ಮ ದಾರಿಯನ್ನು ನಾವು ಸ್ಪಷ್ಟಪಡಿಸಿಕೊಳ್ಳಬೇಕಿದೆ. ನಾನು ಹೇಳಿದ್ದೇ ಸರಿ, ಬೇರೆಯದನ್ನು ಒಪ್ಪಲಾರೆ ಅನ್ನುವುದು ಕನ್ನಡ ವಿದ್ವಾಂಸರಿಗೆ ತಗುಲಿರುವ ರೋಗ ಇದು. ಇಂಥ ಪ್ರಸಂಗದಲ್ಲಿ ಚಿಕ್ಕವರು ಮುನ್ನುಗ್ಗಿ ಆ ಕ್ಷೇತ್ರದಲ್ಲಿ ಕೆಲಸ ಮಾಡಲು ಹಿಂಜರಿಯುತ್ತಾರೆ.

**ಪ್ರ: ಕನ್ನಡಕ್ಕೆ ಈ ಶಾಸ್ತ್ರೀಯ ಸ್ಥಾನ ದೊರಕುವ ಸಲುವಾಗಿ ಅನೇಕ ಲೇಖಕರು ಮತ್ತು ಕನ್ನಡಪರ ಸಂಘಟನೆಗಳು ಪ್ರತಿಭಟನೆ ಹೋರಾಟಗಳನ್ನು ನಡೆಸಿತು. ಕೊನೆಗೆ ರಾಜ್ಯದ ಮುಖ್ಯಮಂತ್ರಿ ದೆಹಲಿಯಲ್ಲಿ ಧರಣಿ ಹೂಡುವ ಮಾತೂ ಆಡಿದರು. ಇವುಗಳೆಲ್ಲಾ ಈ ಮನ್ನಣೆಗೆ ಪರಿಣಾಮ ಬೀರಿದ ಸಂಗತಿಗಳೇ?**

**ಉತ್ತರ:** ಇಂಥದ್ದೊಂದು ಹೋರಾಟ ಅಗತ್ಯ ಇತ್ತೋ ಇಲ್ವೋ ಗೊತ್ತಿಲ್ಲ. ಕನ್ನಡ ಭಾಷೆ ಸಂಸ್ಕೃತಿಗಳಿಗೆ ಸಂಬಂಧಿಸಿದ ಈ ಪ್ರಕ್ರಿಯೆಯಲ್ಲಿ ನಮಗೂ ಒಂದು ಜಾಗ ಇದೆ. ನಮ್ಮ ಮುಂದಾಳತ್ವದಲ್ಲಿ ಇದು ಸಾಧ್ಯವಾಗಬೇಕು ಅಂದುಕೊಂಡವರು ಕೆಲವರು, ನಿಜವಾಗಿಯೂ ಅದು ಪರಿಣಾಮ ಬೀರಿದೆ ಅನ್ನುವುದಕ್ಕೆ ನನಗೆ ಅನುಮಾನಗಳಿವೆ. ಶಾಸ್ತ್ರೀಯ ಭಾಷೆಯ ನಿರ್ಣಯಕ್ಕೂ ಮತ್ತು ಅದಕ್ಕೆ ಸಂಬಂಧಿಸಿದ ಹೋರಾಟಗಳಿಗೂ ನೇರವಾದ ಸಂಬಂಧ ಇದೆಯೆ ಅಂದರೆ, ನನ್ನ ಪ್ರಕಾರ ಇಲ್ಲ. Claimಗಳನ್ನು ಮಾಡಿಕೋಬಹುದು.

ತೆಲುಗು ಮತ್ತು ಕನ್ನಡ ಭಾಷೆಗಳನ್ನು ಒಟ್ಟು ಮಾಡಿ ಈ ಸ್ಥಾನ ಕೊಟ್ಟಿದ್ದು, ಒಂದು ಬೇರೆಯದೇ ರಾಜಕಾರಣ. ತೆಲಗು ಲಾಬಿ ಜೋರಾಗಿದೆ. ಮುಂದಿನ ಚುನಾವಣೆ ತೆಲುಗು Identityಯ ಮೇಲೆ ನಡೆಯೋದಾದ್ರಿಂದ, ಕರ್ನಾಟಕದ ರಾಜಕಾರಣದ ಹಾಗಿಲ್ಲ ಅದು. ೮೦ರ ದಶಕದ ರಾಜಕಾರಣಕ್ಕೆ ಹಿಂತಿರುಗಿದೆ. ತೆಲುಗು Identity ಪ್ರಶ್ನೆ ಬಂದಾಗ ಅಲ್ಲಿ ಮತ್ತೆ Fight start ಆಗತ್ತೆ. ಕಾಂಗ್ರೆಸ್‌ಗೆ ತೆಲುಗುದೇಶಂ ಮುಂತಾದ ಸ್ಥಳೀಯ ಪಾರ್ಟಿಗಳ ಸಮಕ್ಕೆ ನಿಂತು, ಪ್ರಾಂತೀಯ Issue ತೆಗೆದುಕೊಂಡು ಹೋರಾಡಲು ಈ Classical Language Status ಕೊಡಿಸಿದ್ದೀವಿ ಅಂತ ಹೇಳಬಹುದು. ಅದು election ಮೇಲೆ ಪರಿಣಾಮ ಬೀರಬಹುದು ಅಂತ. ಅದು ಮುಖ್ಯ ಕಾರಣ. ಕನ್ನಡಿಗರಿಗೆ ಇದು ಹಿತಕರ

ಅನ್ನಿಸದ ಸಂಗತಿ ಇದು by default ಆಯ್ತು ಅಷ್ಟೆ. ಮತ್ತು ಅದನ್ನ ಈಗಲೇ ತುರ್ತಿನಲ್ಲಿ ಸರ್ಕಾರ ಮಾಡಬೇಕಿತ್ತು.

**ಪ್ರ: ಈ Classical language ಸ್ಥಾನದಿಂದ ಕನ್ನಡಕ್ಕೆ ಆಗಬಹುದಾದ ಲಾಭ ಏನು?**

**ಉತ್ತರ:** ಏನೂ ಇಲ್ಲ! technically ಏನೂ ಇಲ್ಲ. ಲಾಭ ಅಂದ್ರೆ ಭಾಷೆಗೆ ನೀವು ಅದನ್ನು ಹೇಗೆ ಬಳಸಿಕೊಳ್ತೀರಿ ಅನ್ನುವುದು ಮುಖ್ಯ. ಏನಾಯಿತು ಅಂದರೆ Classical language ಆಗಬೇಕು ಅಂತ ನಾವು ಯೋಚಿಸಿದ್ದೇವೇ ಹೊರತು, ಹಾಗಾದರೆ ಏನು ಮಾಡಬೇಕು ಅಂತ ಯಾರೂ ಯೋಚನೆ ಮಾಡಿರಲಿಲ್ಲ. ಅಳುತ್ತಾ ಇರುವ ಮಗುವಿಗೆ ತನಗೆ ಬೇಕಾದ್ದು ಸಿಕ್ಕಕೂಡಲೇ ಅದನ್ನ ಏನು ಮಾಡಬೇಕು ಅಂತ ಗೊತ್ತಾಗದ ಗಲಿಬಿಲಿಯ ಸ್ಥಿತಿ. ಈ ಉದಾಹರಣೆ ಚೆನ್ನಾಗಿಲ್ಲದೇ ಇರಬಹುದು. ನನಗೆ ಅನ್ನಿಸುವ ಮಟ್ಟಿಗೆ ಇಲ್ಲ, ಇಲ್ಲ. ಬರುವ ಆ ಹಣ ಒಂದೇ ಮಾನದಂಡ ಅಲ್ಲ. ಉದಾಹರಣೆಗೆ ಈ ಮನ್ನಣೆ ಸಿಕ್ಕ ತಕ್ಷಣ ಮುಖ್ಯಮಂತ್ರಿಗಳು ರಾಜ್ಯದ ಎಲ್ಲ ವಿಶ್ವವಿದ್ಯಾಲಯಗಳಿಗೂ ಎರಡೆರಡು ಕೋಟಿ ರೂಪಾಯಿಗಳನ್ನು ಮಂಜೂರು ಮಾಡಿದರು. ಹಾಗೆ ಕೊಟ್ಟಿದ್ದನ್ನು – ಮೆಚ್ಚುವ; ತಪ್ಪು ಅನ್ನಲಾರೆ. ಆದರೆ ಯಾವ ವಿಶ್ವವಿದ್ಯಾಲಯವೂ ಆ ಎರಡು ಕೋಟಿ ರೂಪಾಯಿಗಳನ್ನು ಸಮರ್ಥವಾಗಿ ಬಳಸಿಕೊಳ್ಳುವ ಒಂದು ಯೋಜನೆ ಮುಂದಿಡಲು ಆಗಿಲ್ಲ. ಬಹಳ ವಿ.ವಿ.ಗಳ ಯೋಜನೆ ನೂರಾರು ಪುಸ್ತಕಗಳನ್ನು ಮುದ್ರಿಸೋದು, ಸೆಮಿನಾರ್‌ಗಳನ್ನು ಮಾಡೋದು ಈ ರೀತಿಯ ಹಣ ಹಂಚುವ ಯೋಜನೆಗಳೇ. ಅದನ್ನ ಕನ್ನಡದ ದೂರಗಾಮಿ ಪರಿಣಾಮವುಳ್ಳ ಅಭಿವೃದ್ಧಿಗೆ ಅನುಕೂಲಕರವಾದ ಒಂದು ಯೋಜನೆಯನ್ನು ಯಾವ ರೀತಿ ರೂಪಿಸಬೇಕು, ಯಾವ ಯಾವ ಕಡೆ ನಾವಿನ್ನೂ ಗಮನ ಹರಿಸಿಲ್ಲ ಇದರ ಬಗ್ಗೆ ಯೋಚನೆ ಮಾಡಿದ ಪ್ರಸ್ತಾವಗಳು ಬಹಳ ಕಡಿಮೆ ಇದ್ದವು. ಕೆಲವು ವಿ.ವಿ.ಗಳು ಗಂಭೀರವಾಗಿ ಯೋಜನೆ ರೂಪಿಸಿದರೆ ಮತ್ತೆ ಕೆಲವು ಏನೂ ಮಾಡಿಲ್ಲ. ಕರ್ನಾಟಕ ಸರ್ಕಾರ ಕೊಟ್ಟ ಇಪ್ಪತ್ತೆರಡು ಕೋಟಿ ರೂಪಾಯಿಗಳನ್ನೇ ಬಳಸಿಕೊಳ್ಳಲು ನಾವು ತಯಾರಾಗಿಲ್ಲ. ತಮಿಳಿನ ವಿಚಾರವೂ ಹೀಗೆ, ಅವರಿಗೆ ಬಂದ ಅನುದಾನದಲ್ಲಿ ಶೇ. ೩೦% ಬಳಕೆಯಾಯ್ತು. ಉಳಿದದ್ದು ಹಾಗೇ ಉಳಿಯಿತು.

**ಪ್ರ: ಈ ಶಾಸ್ತ್ರೀಯ ಭಾಷೆಯ ಅನುದಾನ ಹೇಗೆ ಬರುತ್ತೆ, ವಿತರಿಸಲ್ಪಡುತ್ತೆ?**

**ಉತ್ತರ:** ಸಾಮಾನ್ಯವಾಗಿ Ministry of Human Resource and Development ನ ಅಡಿಯಲ್ಲಿ ಒಂದು ಸಮಿತಿ ಮಾಡ್ತಾರೆ ಅಥವಾ ಒಂದು Promotion Board ಅಂತ. ಅದು ಏನು ಕ್ರಿಯಾ ಯೋಜನೆ ಕೊಡುತ್ತದೆ, ಅದಕ್ಕೆ ಅನುಗುಣವಾಗಿ ಒಂದು ನಿರ್ದಿಷ್ಟ ಕಾಲಮಿತಿಯಲ್ಲಿ ಹಣ ಕೊಡಲಾಗುತ್ತದೆ. ರಾಜ್ಯ ಸರ್ಕಾರದ ಮೂಲಕ ಬರದೆ ಅದು ನೇರವಾಗಿ ಸ್ಥಾಪಿಸಲ್ಪಡುವ ಸಂಸ್ಥೆಗೆ ಬರುತ್ತದೆ. ಈಗ ಕ್ರಿಯಾ ಯೋಜನೆ ಸಿದ್ಧಪಡಿಸಬೇಕು. Classical language ನ Board ನ ಹತ್ತಿರ ನನ್ನ ಪ್ರಕಾರ ಅಂಥ Action plan ಇಲ್ಲ. ಇದ್ದರೂ ಈ ಮೊದಲು ಹೇಳಿದ್ದ ರೀತಿಯ ಹಳೆಯ ಕೃತಿಗಳ ಮರು ಮುದ್ರಣ recycle ಮಾಡೋದು ಈ ರೀತಿಯ ಯೋಜನೆಗಳು. ಯುವ ಜನಾಂಗಕ್ಕೆ ಕನ್ನಡದಲ್ಲಿ ಅದರ ಪ್ರಾಚೀನ ಬರವಣಿಗೆಯಲ್ಲಿ ಅದರ ತಿಳುವಳಿಕೆಯಲ್ಲಿ ಅಡಗಿರಬಹುದಾದ ಜ್ಞಾನ ಸಂಪತ್ತಿನ ಬಗ್ಗೆ ಆಸಕ್ತಿ ಬರುವ ಹಾಗೆ ಮಾಡುವುದು

ಹೇಗೆ? ಹೈಸ್ಕೂಲು ಕಾಲೇಜು ವಿದ್ಯಾರ್ಥಿಗಳು ಕನ್ನಡ ಮುಖ್ಯವಾಗಿ ಬೆಳೆಯುವ ಹಾಗೆ ಮಾಡುವುದು ಹೇಗೆ ಅನ್ನುವುದನ್ನು ಯೋಚನೆ ಮಾಡುತ್ತಿಲ್ಲ.

**ಪ್ರ: 'ಕನ್ನಡ ಕೊಡುವ ಭಾಷೆಯಾಗಿಲ್ಲ – ಬರೀ ಪಡೆಯುವ ಭಾಷೆ ಆಗಿದೆ' ಅನ್ನುವ ನಿಮ್ಮ ಮಾತಿಗೆ ಬಂದ ಹಾಗಾಯ್ತಲ್ಲ.**

**ಉತ್ತರ:** ನಿಜ, ಈಚೆಗೆ ನನ್ನ ಬಹಳವಾಗಿ ಕಾಡುತ್ತಾ ಇರುವ ಸಂಗತಿ ಇದು. ನಮ್ಮ ಭಾಷೆಗೆ ಎಲ್ಲವನ್ನೂ ಸ್ವೀಕರಿಸುವ ಉಮೇದಿನಲ್ಲಿ, ಪ್ರತಿಯೊಂದೂ ಕನ್ನಡಕ್ಕೆ ಬರಬೇಕು ಅನ್ನುವ ಆಶಯದಲ್ಲಿ ಹಾಗೆ ಬಂದದ್ದು ಕನ್ನಡಕ್ಕೆ ಬಂದ ತಿಳುವಳಿಕೆ ಆಯ್ತೇ ಹೊರತು, ಕನ್ನಡದ ತಿಳುವಳಿಕೆ ಆಗಲಿಲ್ಲ. ನಾವು ಒಪ್ಪಿಕೊಂಡು ದೊಡ್ಡದಾಗಿ Establish ಮಾಡ್ಕೊಂಡಿದ್ದೀವಿ. ತಿಳುವಳಿಕೆಯನ್ನು ಪಡಕೊಂಡಿದ್ದೀವಿ. ಅದರಿಂದ ಆಗಿರುವ ಅಪಾಯ ಎಂದರೆ ಸ್ವತಂತ್ರವಾಗಿ ಚಿಂತಿಸುವ ಸಾಧ್ಯತೆಯೇ ನಮಗಿಲ್ಲದಾಗಿದೆ. ಲೋಹಿಯಾ ಹೇಳಿದರು, ಕ್ರಿ.ಶ. ೪ರ ನಂತರ ಭಾರತದಲ್ಲಿ ಸ್ವತಂತ್ರ ಚಿಂತಕರೇ ಬರಲಿಲ್ಲ ಅಂತ. ಶಂಕರರೇ ಕೊನೆಯವರು ಸ್ವಂತಿಕೆಯುಳ್ಳ Original Thinker ಅಂತ. ಅದಕ್ಕೆ ಐತಿಹಾಸಿಕ ಕಾರಣವನ್ನು ಲೋಹಿಯಾ ವಿವರಿಸುತ್ತಾರೆ. ಆದರೆ ಇವತ್ತು ನಾವು ಯಾವ ಸ್ಥಿತಿಗೆ ಬಂದು ಮುಟ್ಟಿದ್ದೇವೆ ಅಂದರೆ ಯಾವುದೇ ಬಗೆಯ ಚಿಂತನಾ ಕ್ರಮ ಬೇಕೆಂದರೆ ಅದನ್ನ ನಾವು ಇನ್ನೊಂದು ಕಡೆಯಿಂದ ಪಡೆದುಕೊಳ್ಳೋಕೆ ಸಾಧ್ಯ ಇದೆಯೇ ಹೊರತು, ಕನ್ನಡದ ಮನಸ್ಸೊಂದು ತಾನೇ ಸ್ವತಂತ್ರವಾಗಿ ಚಿಂತಿಸಬಲ್ಲದು, ತಾನೇ ಸ್ವತಂತ್ರವಾಗಿ ಜ್ಞಾನವನ್ನು ಸೃಷ್ಟಿ ಮಾಡಬಲ್ಲದು ಅನ್ನುವುದನ್ನು ನಂಬೋಕೆ ಸಾಧ್ಯ ಇಲ್ಲದ ಸ್ಥಿತಿ ಬಂದುಬಿಟ್ಟಿದೆ. ಪಾಶ್ಚಾತ್ಯರ ಎರವಲು ಪಡೆಯೋ ಪ್ರಮಾಣವನ್ನು ಎಲ್ಲಿಯವರೆಗೂ ತಂದೆವು ಅಂದ್ರೆ ಅದನ್ನ ನಮಗೆ ಹೊಂದಿಸಿಕೊಳ್ಳೋದೇ ದೊಡ್ಡ ಪ್ರಯತ್ನದ ಹಾಗೆ ತೋರುತ್ತದೆ. ಸಾಹಿತ್ಯ ಮಾತ್ರ ಅಲ್ಲ, ವಿಜ್ಞಾನ, ಅರ್ಥಶಾಸ್ತ್ರ, ಸಮಾಜವಿಜ್ಞಾನ ಎಲ್ಲವೂ ಎರವಲು ಪಡೆಯುವಂಥವೇ. ನಾನು ಎಂ.ಎ. ಓದುವ ದಿನಗಳಲ್ಲಿ ಪಾಶ್ಚಾತ್ಯರಿಂದ ವಿಚಾರಗಳನ್ನು ಸ್ವೀಕರಿಸದೇ ಹೋದಲ್ಲಿ ಜ್ಞಾನದ ದೃಷ್ಟಿಯಿಂದ ನಾವು ಅಪ್ರಸ್ತುತ ಆಗಿಬಿಡ್ತೀವಿ ಅನ್ನುವ ಹಾಗೆ ಆಲೋಚಿಸುತ್ತಿದ್ದೆ. ಯುರೋಪಿನ ಒಬ್ಬರಿಂದ ಒಂದು ಚಿಂತನೆ ಸ್ವತಂತ್ರವಾಗಿ ಬರಬಹುದಾದರೆ ಕನ್ನಡದಲ್ಲೆ ಯಾಕೆ ಬರುವುದಿಲ್ಲ? ಬರಬೇಕು ಅನ್ನೋದು ಒಂದು ಗುರಿ ಅಷ್ಟೇ ಅಲ್ಲ, ಸಾಧ್ಯ ಇದೆ ಅಂತ ನಾವು ನಂಬಬೇಕು. ಆಗ ಕನ್ನಡ ಪಡೆಯುವ ಭಾಷೆ ಆಗುವ ಬದಲು ಕೊಡುವ ಭಾಷೆ ಆಗಬೇಕಿದೆ. ಅದನ್ನು ಕೊಡುವ ಭಾಷೆ ಮಾಡುವುದು ಹೇಗೆ ಮೊದಲು ಅದನ್ನು ಸಾಧ್ಯ ಅಂತ ನಂಬಬೇಕು.

ಮಾಧ್ಯಮಗಳ ಭಾಷೆಯಲ್ಲಿ ಒಂದು ಸಂಗತಿಯನ್ನು ವಿವರಿಸಬೇಕಾದರೆ ಇದು ಇಂಗ್ಲಿಷಿನ ಧಾಟಿಯಲ್ಲಿ ಸಂಸ್ಕೃತ ಪದಗಳನ್ನು ಇಡುವುದಾಗಿದೆ. ಉದಾಹರಣೆಗೆ English ನ Golden opportunity ಅನ್ನೋದನ್ನ 'ಸುವರ್ಣ ಅವಕಾಶ' ಅಂದುಬಿಡ್ತೀವಿ. ಹಾಗೆ ಮಾಡಿದ್ರೆ ಮುಗಿಯಿತು ಅಂತ ಭಾವಿಸ್ತೀವಿ. ಒಂದು ಸಂಗತಿಯನ್ನ ನಾವೇ ನಮ್ಮ ಗ್ರಹಿಕೆಯ ಮುಖಾಂತರ ವಿವರಿಸೋಕೆ ಆಗಲ್ವ ಭಾಷೆಯಲ್ಲ, ಲೋಕದೃಷ್ಟಿಯನ್ನೇ ನಾವು ಎರವಲು ಪಡೀತಾ ಇದ್ದೀವಿ. ಕನ್ನಡದ ಲೋಕದೃಷ್ಟಿ ಯಾವುದು ಅದು ಇಲ್ಲವೇ ಇಲ್ಲವೆ, ರೂಪುಗೊಳ್ಳೋಕೆ ಆಗಲ್ವೇ ಅಥವಾ ನಾವು ಮರೆಯುತ್ತಿದ್ದೇವಾ, ಬಿಟ್ಟುಕೊಟ್ಟಿದ್ದೇವಾ ನೋಡ್ತಾ ಇಲ್ವಾ.. ಇದು ಯೋಚನೆ ಮಾಡಬೇಕಿರೋದು. ಅದನ್ನು ಆಲೋಚಿಸದೇ ನಾವು ಏನೇ ಪ್ರಯತ್ನಪಟ್ಟರೂ ಮುಂದಿನ ತಲೆಮಾರಿಗೆ ಕನ್ನಡ ದಾಟುತ್ತೆ. ಆದರೆ ಒಂದು ಬೇರೆ ತಿಳುವಳಿಕೆಯನ್ನ ತನ್ನೊಳಗೆ ಹೊತ್ತ Carrier Language ಆಗಿ, ವಾಹಕವಾಗಿ

ಮುಂದುವರೆಯುತ್ತದೆ. ತಾನೇ ಸೃಜನಶೀಲವಾಗಿ ಮುಂದುವರಿಯುತ್ತದಾ ಅದು ತುಂಬಾ ಗಂಭೀರವಾದ ಪ್ರಶ್ನೆ.

ಈಗ ಹೊಸದಾಗಿ ಆಲೋಚಿಸಬೇಕಾದ ಚಿಕ್ಕವರಲ್ಲಿ ಆ ರೀತಿ ನಂಬಿಕೆ ಮೂಡಿಸಬಲ್ಲ ಅವಕಾಶಗಳನ್ನು ನಾವು ಹುಟ್ಟಿಸಬೇಕಾಗಿದೆ, ಮರಳಿ ಕನ್ನಡಕ್ಕೊಂದು ಹೊಸ ಸ್ಥಾನಮಾನ ದಕ್ಕಿದ ಸಂದರ್ಭದಲ್ಲಿ ಅದು ಹಣ ಅಷ್ಟೇ ಅಲ್ಲ, ಒಂದು ಅವಕಾಶ ಅಂತ ಭಾವಿಸಬೇಕು.

**ಪ್ರ: ಈ ಅವಕಾಶದ ಸಾಧ್ಯತೆ ಅಂತರರಾಷ್ಟ್ರೀಯ ಮಟ್ಟದಲ್ಲಿ ಭಾಷಿಕ ಶಾಸ್ತ್ರಜ್ಞರು ಕನ್ನಡವನ್ನು ನೋಡುವ ದೃಷ್ಟಿ ಏನಾಗಬಹುದು. ಅವರ ಗಮನವನ್ನ ಈ ಮನ್ನಣೆ ಸೆಳೆಯಬಲ್ಲದೆ?**

**ಉತ್ತರ:** ಆ ರೀತಿ ಕನ್ನಡದವರಾಗಿ ನಿಮ್ಮನ್ನು ನೀವು Project ಮಾಡಿಕೊಳ್ಳಬೇಕಾಗುತ್ತೆ. ಅಂಥದ್ದೊಂದು ಸಾಧ್ಯತೆ ಕನ್ನಡಕ್ಕಿದೆ ಅಂತ ತೋರಿಸಬೇಕಾಗುತ್ತೆ. ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ ಅದು ತಜ್ಞರು ಕನ್ನಡವನ್ನ ಎರಡು ಕಾರಣಗಳಿಗಾಗಿ ಗಮನಿಸುತ್ತಾರೆ. ಮೊದಲ ರೀತಿಯ ಜನ ತಾವು ಈಗಾಗಲೇ ಹೇಳುತ್ತ ಇರುವಂಥ ಥಿಯರಿಗಳಿಗೆ ಪೂರಕವಾಗಿ ಇದೆಯೋ ಇಲ್ಲವೋ ಅಂತ cross check ಮಾಡುವವರು, ಅದಕ್ಕೆ ಕನ್ನಡವನ್ನು ಉದಾಹರಣೆಯಾಗಿ ಬಳಸಿಕೊಳ್ಳುವವರು. ಎರಡನೆಯ ರೀತಿಯವರು ಅವರು ಮಂಡಿಸುತ್ತ ಇರುವಂಥ ಥಿಯರಿಗೆ ವಿನಾಯಿತಿ ಯಾವುದಾದರೂ ಭಾಷೆಯಲ್ಲಿದೆಯಾ ಅಂತ, ಅದನ್ನು ಬದಲಾಯಿಸಬಹುದಾದ ಅಂಶಗಳು ಕನ್ನಡದಲ್ಲೇನಾದರೂ ಇದೆಯಾ ಅಂತ, ನೋಡತಕ್ಕವರು. ಅಂಥವರ ಸಂಖ್ಯೆ ಕಡಿಮೆ, ಕನ್ನಡಿಗರಾಗಿ ನಾವೇ ಅಂಥ ಹುಡುಕುವಿಕೆಗೆ ಒಂದು ಉಮೇದನ್ನ ತೋರಿಸಬೇಕು. ಆಗ ಬೇರೆಯವರಲ್ಲೂ ಆ ಆಸಕ್ತಿ ಬರುತ್ತದೆ. ಭಾರತದ ಬೇರೆ ಬೇರೆ ಭಾಷೆಗಳ ಬಗ್ಗೆಯೂ ನಾನು ಮಾತಾಡ್ತಾ ಇದ್ದೀನಿ. ಮರಾಠಿ, ಬೆಂಗಾಲಿ, ಪಂಜಾಬಿ ಭಾಷೆಗಳವರಿಗೆ ಕನ್ನಡ ಒಂದು ಆಸಕ್ತಿದಾಯಕ ಭಾಷೆ ಯಾಕಾಗಬಾರದು. ಅದು ರಶಿಯನ್ ಅಥವಾ ಆಫ್ರಿಕಾ ಮಾತಾಡುವವರಿಗೆ ಆಸಕ್ತಿಯ ಭಾಷೆಯಾದರೆ ಸಂತೋಷ. ಅದಕ್ಕಿಂತಲೂ ಪಕ್ಕದ ತಮಿಳು, ಮಲೆಯಾಳದವರಿಗೆ ಕನ್ನಡದ ಬಗ್ಗೆ ಆಸಕ್ತಿ ಬರುವಂತಾಗಬೇಕು. ವ್ಯಕ್ತಿತ್ವಗಳನ್ನ ಮುಂದಿಟ್ಟುಕೊಂಡು ಅನಂತಮೂರ್ತಿ ಕೃತಿಗಳನ್ನ ಗುಜರಾತಿಗಳು ಭೈರಪ್ಪನವರ ಕೃತಿಗಳನ್ನು ಮರಾಠಿ ಓದುಗರು ಓದುತ್ತಾರೆ ಅಂತ ಹೇಳಿದರೆ ಪ್ರಯೋಜನವಾಗಲ್ಲ. ಅದು ಒಂದು ರೀತಿಯಲ್ಲಿ ಸರಿ, ಒಟ್ಟು ಕನ್ನಡಕ್ಕೇ ಆ ರೀತಿಯ ಸಾಮರ್ಥ್ಯ ಇದೆ, ಯಾರೋ ಒಬ್ಬಿಬ್ಬರು ವ್ಯಕ್ತಿಗಳಿಂದಾಗಿ ಅಲ್ಲ.

**ಪ್ರ: ನಮ್ಮ ಆಧುನಿಕ ಸಂದರ್ಭದಲ್ಲಿ ಸಾಹಿತ್ಯಕ್ಕೆ ಸಿಕ್ಕಿರುವ ಮನ್ನಣೆ ಹಾಗೂ ಒತ್ತು ಇತರ ಜ್ಞಾನ ಶಾಖೆಗಳಿಗೆ ಸಿಕ್ಕಿಲ್ಲ ಅವು ಕನ್ನಡದಲ್ಲಿ ಬೆಳೆದೇ ಇಲ್ಲ, ಬರೀ ಸಾಹಿತ್ಯದ ಭಜನೆಯಲ್ಲಿ ತೊಡಗಿದ್ದೀವಾ?...**

**ಉತ್ತರ:** ಆ ರೀತಿಯ ಪರಿಸ್ಥಿತಿ ಇದೆ. ಆದರೆ ಅಲ್ಲೂ ಏನಾಗಿದೆ ಅಂದ್ರೆ ಕಳೆದ ಇಪ್ಪತ್ತು ವರ್ಷಗಳಿಂದ ಈಚೆಗೆ ಸಾಹಿತ್ಯದ ಬಗ್ಗೆ ಇದ್ದಂಥ ಒತ್ತು ಕೂಡಾ ಕಡಿಮೆ ಆಗಿದೆ ಅಂತ ನನ್ನ ಅಭಿಪ್ರಾಯ. ನಿಜವಾಗಿ ಈ ಹಿಂದೆ ಸಾಹಿತ್ಯಕ್ಕೆ ಇದ್ದ ಪ್ರಾಮುಖ್ಯ ಈಗಿಲ್ಲ. ಒಂದು

ಬಗೆಯ ಅತಂತ್ರ ಸ್ಥಿತಿ ಕಾಣುತ್ತಿದೆ. ಹೊಸಬರಲ್ಲಿ ಒಂದು ಮಾದರಿಗಾಗಿ ಹುಡುಕಾಟ ಇದೆ. ಹೊಸದಾಗಿ ಬರೆಯುತ್ತಿರುವವರು ತಾವೇ ಒಂದು ಮಾದರಿ ಹುಡುಕುವ ಅವಕಾಶವೂ ಬರಬಹುದು. ಇನ್ನು ಕೆಲವರಿಗೆ ಕೊಂಚ ದೂರ ನಡೆದು ಆಯಾಸದಿಂದ ಇನ್ನು ಮುಂದೆ ನನ್ನ ಕೈಲಿ ಬರೆಯಲು ಆಗುವುದಿಲ್ಲ ಅಂತ ಬಿಟ್ಟುಬಿಡಬಹುದು. ಆದರೆ ದಾರಿ ತೋರಿಸತಕ್ಕಂಥ ವಾತಾವರಣ ಇದ್ದರೆ ಅಂಥವರು ಮತ್ತಷ್ಟು ಮುಂದೆ ಹೋಗಲು ಸಾಧ್ಯವಿದೆ. ಎಷ್ಟೋ ಜನ ಕವಿಗಳನ್ನ ನೋಡಿದ್ದೀನಿ Promising ಅಂತ; ಮಾಸ್ತಿಯವರು ಹೇಳುವ ಹಾಗೆ ಆ Promise fulfillment ಆಗದೆ ಹೋಗುವ ಸಂಭವವೇ ಹೆಚ್ಚು. ಅದರಲ್ಲಿ ಪ್ರತಿಭೆಯ ಕೊರತೆ ಇರುತ್ತದೆ ಅಂತ ಹೇಳಲಿಕ್ಕೆ ಆಗುವುದಿಲ್ಲ. ವಾತಾವರಣದಲ್ಲೇ ಆ ಪ್ರತಿಭೆಯನ್ನ ಮತ್ತೆ ಪೋಷಿಸುವ ಬೆಳೆಯಿಸುವ ಅವಕಾಶಗಳು ಇಲ್ಲದೇ ಇರಬಹುದು.

ನೀವು ಹೇಳಿದ ಎರಡನೇ ಮಾತು ನಿಜ. ಬೇರೆ ಜ್ಞಾನ ಶಾಖೆಗಳಲ್ಲಿ ಅನ್ಯಮೂಲದಿಂದ ಬರುವ ಜ್ಞಾನಕ್ಕೆ ನಾವು ಕೊಡುತ್ತಾ ಇರುವ ಒತ್ತು ಮತ್ತು ಸ್ವತಂತ್ರವಾಗಿ ಆಲೋಚಿಸುವ ಶಕ್ತಿ ಬೆಳೆಸುವ ಪ್ರಯತ್ನ ನಡೆಯಬೇಕಾಗಿದೆ.

**ಪ್ರ: ಉಳಿದ ಭಾರತೀಯ ಭಾಷೆಗಳಲ್ಲಿನ ಪರಿಸ್ಥಿತಿ ಇದೇ ರೀತಿ ಇದೆಯೆ?**

**ಉತ್ತರ:** ಎರಡು ಭಾಷೆಗಳನ್ನ ಪ್ರತ್ಯೇಕವಾಗಿ ಗಮನಿಸಿ ಹೇಳಬಹುದು. ಒಂದು ಬಂಗಾಲಿ ಇನ್ನೊಂದು ಮರಾಠಿ. ಈ ಎರಡೂ ಭಾಷೆಗಳ ಇತರ ಜ್ಞಾನ ಶಾಖೆಗಳಲ್ಲಿ ಆಯಾ ಭಾಷೆಯಲ್ಲೇ ಆಲೋಚಿಸಿ ಮಾಡುವ ಕ್ರಮ ಇದೆ. ಬ್ರಿಟಿಷ್ ಆಡಳಿತದ ಕಾಲದಲ್ಲೇ ಭಾರತದಲ್ಲೇ ಅತಿ ದೊಡ್ಡ ಪ್ರಮಾಣದ ವೈಜ್ಞಾನಿಕ ಸಂಶೋಧನೆ ಬಂಗಾಲದಲ್ಲಿ ಆಗುತ್ತಿತ್ತು ಅಂತ ಕೇಳಿದ್ದೀನಿ. ಜಗದೀಶ್ ಚಂದ್ರಬೋಸ್, ಮೇಗನಾಥ ಸಾಹಾ... ಅಂಥವರು ಹೇಗೆ ಬಂದರು. Anthropology ಯಲ್ಲಿ Sociology ಯಲ್ಲಿ ಮಹತ್ತರ ಕೆಲಸ ಮಾಡಿದ ಕರ್ವೆ ಅಂಥ ವಿದ್ವಾಂಸರು ಹೇಗೆ ಬಂದರು. ದುರ್ಗಾಭಾಗವತ್ ಅವರು ಎಷ್ಟೊಂದು ಕೆಲಸ ಮಾಡಿದ್ದಾರೆ. ಈ ಎರಡು ಭಾಷೆಗಳ ಸಂಸ್ಕೃತಿಯಲ್ಲಿ ತಮ್ಮ ಭಾಷಾಕೇಂದ್ರಿತ ಚಿಂತನೆಗಳು ಆಲೋಚನೆಗಳನ್ನು ರೂಪಿಸಬೇಕೆಂಬ ಪ್ರಯತ್ನ ಈಗಲೂ ಇದೆ. ಆದರೆ ಬೇರೆ ಭಾರತೀಯ ಭಾಷೆಗಳಲ್ಲಿ ಆ ರೀತಿ ಇಲ್ಲ.

ಈಗಲೂ ಕನ್ನಡಕ್ಕಿಂತಲೂ ಹೆಚ್ಚು ಪಡೆದುಕೊಳ್ಳುವ ಭಾಷೆಯಾಗಿರುವುದು ಮಲಯಾಳಂ. ಇವತ್ತು ಪಾಲ್‌ಕೋಲ್‌ನಂಥವನ ಕಾದಂಬರಿ ಪ್ರಕಟಗೊಂಡರೆ ಅದು ಭಾರತದ ಯಾವುದೇ ಭಾಷೆಯಲ್ಲಿ ಬರುವುದಕ್ಕಿಂತ ಮೊದಲು ಮಲಯಾಳದಲ್ಲಿ ಬರುತ್ತದೆ. ಅವರು ಇದನ್ನೊಂದು ಹೆಚ್ಚಳ ಅಂತ ಸಾಧಿಸುತ್ತಾರೆ. ಆದರೆ ನನಗೆ ಅದು ಬಹಳ ಅಪಾಯಕಾರಿಯಾಗಿ ಕಾಣುತ್ತೆ. ಮಲಯಾಳಂನಲ್ಲಿ ಒಬ್ಬ ಅನುವಾದಕ ಸ್ವತಂತ್ರವಾಗಿ ಐಷಾರಾಮಿ ಬದುಕನ್ನ ಬದುಕಬಲ್ಲಷ್ಟು ಹಣ ಸಂಪಾದಿಸಬಲ್ಲ. ಕನ್ನಡದಲ್ಲಿ ಇವತ್ತಿಗೂ ಅಂಥದ್ದೊಂದು ಸಾಧ್ಯವಾಗಿಲ್ಲ. ತುಂಬಾ ಜನ ನೋಡಿ, ಮಲಯಾಳಂನಲ್ಲಿ ಎಷ್ಟೊಂದು ಅನುವಾದಗಳಾಗುತ್ತಿವೆ ಅನ್ನುತ್ತಾರೆ. ನನ್ನ ಪ್ರಕಾರ ಇದು ಅಪಾಯಕಾರಿ ಪ್ರವೃತ್ತಿ. ಒಂದು ಹಂತದವರೆಗೂ ಸರಿ. ಆದರೆ ಅದನ್ನೇ ಮುಂದುವರೆಸಿದರೆ ಕಷ್ಟ. ಒಟ್ಟು ಭಾರತೀಯ ಭಾಷೆಗಳ ಪರಿಸ್ಥಿತಿ ಕೂಡ ಈ ಎರಡು ಭಾಷೆಗಳನ್ನು ಬಿಟ್ಟರೆ ಆಶಾದಾಯಕವಾಗಿಲ್ಲ.

ಇಡೀ ಭಾರತೀಯ ಮನಸ್ಸಿಗೇನೇ ಒಂದು ಗ್ಲಾನಿ ಆವರಿಸಿಕೊಂಡಿದೆ ಅಥವಾ ಒಂದು ಮಸುಕು ಕವಿದಿದೆ. ಸ್ವತಂತ್ರವಾಗಿ ಆಲೋಚಿಸಬಲ್ಲ ಪ್ರವೃತ್ತಿ ಕುಗ್ಗಿದೆ. ಒಂದು ಹಳೆಯ ಉದಾಹರಣೆ ಕೊಡುವುದಾದರೆ ರಾಮಾಯಣದ ಸಾಗರೋಲ್ಲಂಘನೆಯ ಸಂದರ್ಭದಲ್ಲಿ ಹನುಮಂತನಿದ್ದ ಸ್ಥಿತಿ ಇದು. ತಾನೊಬ್ಬ ಪುಟ್ಟ ಕಪಿ, ತನಗೆ ಈ ಸಾಗರ ದಾಟಲಿಕ್ಕಾಗತ್ತ ಅಂತ ಗ್ಲಾನಿಯಾಗಿ ಕುಳಿತಿರುತ್ತಾನಲ್ಲ ಆಗ ಹೋಗಿ ನೀನು ಇದನ್ನು ದಾಟಬಲ್ಲೆ, ನಿನ್ನಲ್ಲಿ ಆ ಶಕ್ತಿ ಇದೆ ಅಂತ ಹೇಳುತ್ತಾರಲ್ಲ ಹಾಗೆ ಹೇಳುವವರು ಯಾರೂ ಇಲ್ಲ. ನಮಗೆ ಸ್ವತಂತ್ರವಾಗಿ ಏನನ್ನೂ ಮಾಡಲಿಕ್ಕಾಗಲ್ಲ. ಚಿಂತಿಸಲಿಕ್ಕಾಗಲ್ಲ ಅಂತ ಭಾವಿಸಿದ್ದೀವಿ ಉಳಿದ ವಿದೇಶದ ವಿಶ್ವವಿದ್ಯಾಲಯಗಳಲ್ಲಿ ಸಾಧ್ಯವಾದದ್ದು ನಮ್ಮಲ್ಲೂ ಸಾಧ್ಯವಾಗಬೇಕು.

**ಪ್ರ: ಒಟ್ಟು ಶಿಕ್ಷಣವನ್ನು ನಾವು ನೋಡುವ ಕ್ರಮದಲ್ಲಿ ಬದಲಾವಣೆ ಆಗಬೇಕಲ್ಲವೆ?**

**ಉತ್ತರ:** ಖಂಡಿತವಾಗಿ. ಭಾರತದ ಶಿಕ್ಷಣ ಪದ್ಧತಿಯ ಒಂದು ದೊಡ್ಡ ಸಮಸ್ಯೆ ಎಂದರೆ ಅದು ಹಳೆಯ dead load ನ್ನ ಬಿಟ್ಟುಕೊಟ್ಟಿಲ್ಲ. ನಮ್ಮದು ಸ್ಮೃತಿ ಪ್ರಧಾನ ಸಂಸ್ಕೃತಿಯಾದ್ದರಿಂದ, ನೆನಪಿಗೆ ಅಗಾಧವಾದ ಒತ್ತು ಇದೆ. ಎಲ್ಲವನ್ನೂ ನೆನಪಿನಲ್ಲಿ ಇಟ್ಟುಕೊಳ್ಳಬೇಕಾದ್ದರಿಂದ ಅದನ್ನ ಒಂದು ಗುಣವನ್ನಾಗಿ ಪಡೆದಿದ್ದೀವಿ. ಇದು ಮೆಚ್ಚಬೇಕಾದ ಗುಣವೆ, ಮಲೆಮಹದೇಶ್ವರ ಕಾವ್ಯ, ಮಂಟೆಸ್ವಾಮಿ ಕಾವ್ಯದ ಸಾವಿರಾರು ಸಾಲುಗಳು, ವೇದಗಳು ನಮ್ಮ ಜನ ನೆನಪಿನ ಶಕ್ತಿಯಿಂದಲೇ, ತಲೆಮಾರಿನಿಂದ ತಲೆಮಾರಿಗೆ ವರ್ಗಾಯಿಸಿದ್ದಾರೆ. ಆದರೆ ಇದರಲ್ಲಿ ಒಂದು ಅಪಾಯ ಇದೆ. ಅದು ಎರಡು ರೀತಿಯಲ್ಲಿ, ಮೆದುಳು ಅನ್ನೋದು Virtual thing ಅದು dead ಆದರೆ ಏನೂ ಉಪಯೋಗಕ್ಕೆ ಬಾರದು. ಕಂಪ್ಯೂಟರ್‌ನ hard disc ಹಾಳಾದ ಹಾಗೆ. ಎರಡನೆಯದು ಆ ರೀತಿಯ ನೆನಪುಳ್ಳವರ ಮೇಲಿನ ಅವಲಂಬನೆ. ಅದು ಏಷ್ಟಾಗುತ್ತೆ ಅಂದರೆ ಜ್ಞಾನದ ಪ್ರಜಾಪ್ರಭುತ್ವೀಕರಣ ಅಂತೀವಲ್ಲ ಅದು ಆಗೋಲ್ಲ. ಯಾರೋ ಒಬ್ಬಿಬ್ಬರಲ್ಲಿ ಅದು ಇದೆ ಉಳಿದವರಲ್ಲಿ ಇಲ್ಲ ಅಂತ ಆಗುತ್ತೆ. ಇದರ ಪರಿಣಾಮ ಇವತ್ತೂ ಶಿಕ್ಷಣ ಪದ್ಧತಿಯಲ್ಲಿ ಆಗುತ್ತಿದೆ. ಯಾರು memorise ಮಾಡಬಲ್ಲವರೋ ಅವರು ಹೆಚ್ಚು ಬುದ್ಧಿವಂತರಾಗುತ್ತಾರೆ. ವೈಜ್ಞಾನಿಕವಾದ ಬೆಳವಣಿಗೆಯಲ್ಲಿ ನೆನಪಿಗೆ ಅಷ್ಟೊಂದು ಮಹತ್ವ ಇಲ್ಲ. ನಿಜ ಒಂದರಿಂದ ಇಪ್ಪತ್ತರ ತನಕದ ಮಗ್ಗಿ ಒಂದು ಬುದ್ಧಿಯ ಕಸರತ್ತು. ಆದರೆ ಈಗ ಅದನ್ನ ಬಹಳ ಕಡಿಮೆ ಬಳಸುತ್ತೀವಿ.

ಉದಾಹರಣೆಗೆ ಒಂದು ಕೋಟಿ ಜನ ಪ್ರಾಥಮಿಕ ಶಾಲೆಗಳಲ್ಲಿ ಇದ್ದರೆ, ಅವರು ಹತ್ತನೇ ತರಗತಿಗೆ ಹೋಗುವ ಹೊತ್ತಿಗೆ ಎಂಟು ಲಕ್ಷ ಜನ ಮಾತ್ರ ಆಗುತ್ತಾರೆ. ಉಳಿದ ತೊಂಬತ್ತೆರಡು ಲಕ್ಷ ಜನ ಎಲ್ಲಿ ಹೋದರು. ಆ ಬಗ್ಗೆ ನಾವು ತಲೆಕೆಡಿಸಿಕೊಳ್ಳಲ್ಲ. ಇದು Selection and deletion process. ಇದಕ್ಕಿರುವ ಒಂದು ದೊಡ್ಡ ಅಸ್ತ್ರ ಅಂದರೆ memory, memory orientation ಇರುವ ಶಿಕ್ಷಣವನ್ನು ನಾವು ಮೊದಲು ಕೈಬಿಡಬೇಕು. ಹೊರದೇಶಗಳಲ್ಲಿನ ಶಿಕ್ಷಣ ಪದ್ಧತಿಯಲ್ಲಿ ನೆನಪಿಗೆ ಬಹಳ ಕಡಿಮೆ ಮಹತ್ವ ಇದೆ. Applicationಗೆ ಪ್ರಾಮುಖ್ಯತೆ ಇದೆ. ಈ memory ಆಧಾರಿತ ಶಿಕ್ಷಣ ಪದ್ಧತಿ ಕೈಬಿಟ್ಟಾಗ ಸಾಮಾಜಿಕ ತಾರತಮ್ಯಗಳು ನಿವಾರಿಸಬಹುದು. ಯಾರಿಗೆ ವ್ಯವಧಾನ ಬಿಡುವು ಇದೆಯೋ ಅವರಿಗೆ ನೆನಪು ಸಾಧ್ಯ. ಎಷ್ಟೋ ಮಕ್ಕಳಿಗೆ ವ್ಯವಧಾನವೂ ಇಲ್ಲ, ಬಿಡುವೂ ಇಲ್ಲ.

ನಮ್ಮ CET ಇತ್ಯಾದಿಗಳು ಈ ನೆನಪಿನ ಪರೀಕ್ಷೆ. Not your application. ಇದು ಎಲ್ಲಿಯತನಕ ಬದಲಾಗುವುದಿಲ್ಲವೋ ಆ ತನಕ ನಮ್ಮ ಭಾಷೆಯಲ್ಲಿ ಆಲೋಚಿಸಿ ಮಾಡಬಲ್ಲ ವಿಧಾನಗಳು ಸೃಜನಶೀಲವಾಗೋಕೆ ಸಾಧ್ಯವಿಲ್ಲ. ಬಹುಶಃ ಶಿಕ್ಷಣ ಶ್ರಮದ ಒತ್ತಡದಿಂದ ಹೊರಬರಲಿಕ್ಕೆ ನಮ್ಮ ಕವಿಗಳು ಸೃಷ್ಟಿಯಾಗಿರಬಹುದು memory oriented ಕವಿತೆ ಅಲ್ವಲ್ಲ!

ನೆನಪುಗಳಲ್ಲಿ ವೈಯಕ್ತಿಕ ನೆನಪಿದೆ, ಸಾಮುದಾಯಿಕ ನೆನಪಿದೆ. ಸಾಮುದಾಯಿಕ ನೆನಪುಗಳ ಬಗ್ಗೆ ನನ್ನ ತಕರಾರಿಲ್ಲ. ಯಾಕೆಂದ್ರೆ ಅದಕ್ಕೆ ಯಾರೂ ವಾರಸುದಾರರಲ್ಲ. ವೈಯಕ್ತಿಕ ನೆನಪುಗಳಲ್ಲಿ ಯಾವಾಗಲೂ ಅಪಾಯಗಳಿವೆ. ಅದರ ಮೇಲೆ ಇದು ನನ್ನದು ಅನ್ನುವ claims ಇರುತ್ತದೆ.

**ಪ್ರ: ಇವತ್ತಿನ ತಂತ್ರಜ್ಞಾನಕ್ಕೆ ನಿತ್ಯದ ಅಗತ್ಯಗಳಿಗೆ ಕನ್ನಡವನ್ನ ಹೊಂದಿಸಿಕೊಳ್ಳುವ ಬಗೆ ಹೇಗೆ?**

**ಉತ್ತರ:** ಒಂದು ಕನ್ನಡದ ಬಸ್ ಟಿಕೆಟ್, ಡಿಮ್ಯಾಂಡ್ ಡ್ರಾಫ್ಟ್ ಮುಂತಾದವು ಸಣ್ಣಪುಟ್ಟ ಸಮಸ್ಯೆಗಳು. ಒಂದು mind set ಅನ್ನು ತೆಗೆದು ಹಾಕಬೇಕು. ಇವತ್ತಿನ ಪತ್ರಿಕೆಯಲ್ಲಿ 'ಮುಖ್ಯಮಂತ್ರಿ ಗಾದಿಯತ್ತ ಓಮರ್' ಅಂತ ಇತ್ತು. ಅವರ ಪ್ರಕಾರ ಇದು ಸಹಜ ವಾಕ್ಯ ರಚನೆ. ಆದರೆ ನನ್ನ ಪ್ರಕಾರ ಇದು ಕನ್ನಡದ ವಾಕ್ಯರಚನೆ ಅಲ್ಲ. ನಾವು ಆಲೋಚಿಸುವ ವಿಧಾನದಲ್ಲೇ ಹೇಗೆ ಇಂಗ್ಲಿಷ್‌ಗೆ ಹೊಂದಿಕೊಂಡಿದ್ದೀವಿ ಅಂತ ಒಂದು ಸ್ವವಿಮರ್ಶೆ ಆರಂಭವಾಗಬೇಕು. ಬಹಳ ಜವಾಬ್ದಾರಿಯ ಕೆಲಸ ಅದು. ರೂಢಿಯನ್ನು ಬಿಟ್ಟುಕೊಡಬೇಕು, ತಪ್ಪುಗಳನ್ನು ದಿಟ್ಟವಾಗಿ ಒಪ್ಪಿಕೊಳ್ಳಬೇಕಾಗುತ್ತದೆ.

ನನ್ನ 'ಪದ ಸಂಪದ' ಅಂಕಣದಲ್ಲಿ ಸಂಸ್ಕೃತ ಪದಗಳನ್ನು ಅದರಿಂದ ಹೊರಗಿಡಬೇಕು ಅನ್ನುವ ಪ್ರಯತ್ನ ಮಾಡುತ್ತಿದ್ದೇನೆ. ಉದಾ.ಗೆ ಅರ್ಥ ಅನ್ನುವ ಪದಕ್ಕೆ ಬದಲಾಗಿ ತಿರುಳು ಅನ್ನುವ ಪದ ಬಳಸಿದ್ದೇನೆ. ತುಂಬಾ ಆಕ್ಷೇಪಣೆ ಬರ್ತಿವೆ. ನೀವು ಸಂಸ್ಕೃತ ವಿರೋಧಿ ಅಂತ, ನಾನು ಸಂಸ್ಕೃತ ವಿರೋಧಿ ಅಲ್ಲ. ಕನ್ನಡ ಪರ ಅಷ್ಟೆ. ನಾನು ಪದಗಳನ್ನು ಬಳಸೋದು ಅಭಿಮಾನ ಅಲ್ಲ, ಲೋಕದೃಷ್ಟಿ ಅದು. ಜಗತ್ತನ್ನ ನೋಡುವ ಬಗೆ ಅದು. ಸಣ್ಣಪುಟ್ಟ ಸಂಗತಿಗಳನ್ನು ಬದಲಾಯಿಸಬಹುದು. ಆದರೆ ಮೆದುಳಿಗೆ ಹಾಕಿಕೊಂಡಿರೋ ಈ ಕಟ್ಟುಪಾಡು ಬಿಡಿಸಿಕೊಳ್ಳಬೇಕು. ಅದು ಬಿಡುಗಡೇನೂ ಹೌದು. ಜವಾಬ್ದಾರಿಯೂ ಹೌದು. ಬಿಡುಗಡೆ ನಿರಾತಂಕ ಸೃಷ್ಟಿಸಿದರೆ, ಜವಾಬ್ದಾರಿ ಭಾರವನ್ನ ಹೊರೆಯನ್ನ ಸೃಷ್ಟಿ ಮಾಡುತ್ತದೆ. ಆಗ ನೀವು ಹೊಸ ದಾರಿ ಹುಡುಕುತ್ತೀರಿ. ನೀವು ಸಂಸ್ಕೃತ ಪದ ಬಳಸುವುದಿಲ್ಲ ಎಂದಾದರೆ ಅದಕ್ಕೆ ತಕ್ಕದಾದ ಕನ್ನಡದ ಪದ ಯಾವುದು ಅಂತ ಹುಡುಕಿ, ಆ ಪದಕ್ಕೆ ಬಲ ಕಸುವನ್ನು ತಂದುಕೊಡಬೇಕು. ಇದು ವಿಶೇಷ ಹೊಣೆಗಾರಿಕೆ. ಕನ್ನಡ ಬಳಕೆಯ ದಿನನಿತ್ಯದ ವ್ಯಾವಹಾರಿಕ ಸಂಗತಿಗಳಿಂದ ಒಂದು ದೊಡ್ಡ ಮಸೂದೆಯನ್ನ ಮಂಡಿಸುವ ತನಕ ಕನ್ನಡದಲ್ಲೇ ಯೋಚಿಸಿ ಮಾಡುವ ಬಯಕೆ ಮೂಡಬೇಕು. ಹಾಗೆ ಮಾಡಬಹುದು ಅನ್ನೋದು ಮೊದಲಿಗೆ ನಮ್ಮ ಮನಸ್ಸಿನಲ್ಲಿ ಮೂಡಬೇಕು. ನಿಮಗೆ ನಂಬಿಕೆ ಇಲ್ಲದೇ ಹೋದರೆ ಏನೂ ಮಾಡಲಿಕ್ಕಾಗೋದಿಲ್ಲ.

* ಸೌಜನ್ಯ: ಸಂಚಯ

ಸಂದರ್ಶನ ಡಿ. ವಿ. ಪ್ರಹ್ಲಾದ್

## ರಾಜಕೀಯದ ಮಧ್ಯೆ ಬಿಡುವು

# ಇನ್ನಾದರೂ ಉಸಿರಾಗಲಿ ಕನ್ನಡ



ಎಂ.ಪಿ. ಪ್ರಕಾಶ

ಮನುಕುಲ ಕಂಡುಹಿಡಿದ ಸಂಶೋಧನೆಯಲ್ಲಿ ಅತ್ಯಂತ ಪ್ರಮುಖವಾದದ್ದು ಬೆಂಕಿ, ಊರುಗೋಲು ಹಾಗೂ ಭಾಷೆ. ನಂತರದ ದಿನಮಾನಗಳಲ್ಲಿ ಭಾಷೆಗೆ ಲಿಪಿ ಕಂಡುಹಿಡಿಯುವುದರ ಮೂಲಕ ಒಂದು ತಲೆಮಾರಿನ ಅನುಭವ ಹಾಗೂ ಅನುಭಾವವನ್ನು ಮತ್ತೊಂದು ತಲೆಮಾರಿಗೆ ತೆಗೆದುಕೊಂಡು ಹೋಗುವ ಈ ಲಿಪಿ ಎಂಬ ಮಾಂತ್ರಿಕತೆ ಭಾಷೆಯನ್ನು ಸಮೃದ್ಧಿಗೊಳಿಸಿತು. ಇದೇ ಮುಂದೆ ಮುದ್ರಣ ವಿಭಾಗದಲ್ಲಿ ಕ್ರಾಂತಿಯನ್ನೇ ಮಾಡಿತು. ಅದೇನೆ ಇರಲಿ ಒಂದು ಭಾಷೆ ಶ್ರೀಮಂತವಾಗಬೇಕಾಗಿದ್ದರೆ ಅದನ್ನು ಮಾತನಾಡುವ ಜನರ ಸಾಮಾಜಿಕ ಸ್ಥಿತಿಗತಿಗಳು ಕೂಡ ಶ್ರೀಮಂತವಾಗಿರಬೇಕು. ಶ್ರೀಮಂತಿಕೆ ಅಂದರೆ ಭೌತಿಕ ಸಂಪತ್ತಲ್ಲ. ಬದುಕಿನ ವಿವಿಧ ಸ್ಥಾನಗಳಲ್ಲಿ ಮುದಕೊಡುವ, ಬದುಕನ್ನು ಹಸನುಗೊಳಿಸುವ ಚರಾಚರ ಜಗತ್ತಿನಲ್ಲಿ ನೋಡಿ ಆನಂದಿಸುವ, ಅವುಗಳನ್ನು ವಿಶ್ಲೇಷಿಸುವ ಬುದ್ಧಿಮತ್ತೆ ಮುಖ್ಯ. ಸಂಗೀತ, ನೃತ್ಯ, ಸಾಹಿತ್ಯ, ಶಿಲ್ಪಕಲೆ ಮೊದಲಾದ ಪ್ರದರ್ಶನ ಕಲೆಗಳು ಭಾಷೆಯನ್ನು ಪ್ರಬುದ್ಧಗೊಳಿಸುತ್ತವೆ. ಪ್ರಬುದ್ಧ ಸಮಾಜ ಪ್ರಬುದ್ಧ ಭಾಷೆಗೆ ಅಡಿಪಾಯವಾಗುತ್ತದೆ.

ಭಾಷೆಯ ಬಗ್ಗೆ ನಮ್ಮಲ್ಲಿ ಒಂದು ಪುರಾಣ ಕಥೆ ಇದೆ. ಬ್ರಹ್ಮ ಸೃಷ್ಟಿಯಲ್ಲಿ ನಿರತನಾಗಿದ್ದಾಗ ಸುಂದರಳಾದ ಸ್ತ್ರೀಯನ್ನು ಸೃಷ್ಟಿಸಿದ. ತಾನು ಸೃಷ್ಟಿಸಿದ ಸ್ತ್ರೀಯಳ ಬಗ್ಗೆ ವ್ಯಾಮೋಹಿತನಾಗಿ ಮದುವೆಯಾದ. ಯಾರಾದರು ಅವಳನ್ನು ಕದ್ದು ಒಯ್ಯಬಹುದೆನ್ನುವ ಆತಂಕದಿಂದ ಆಕೆಯನ್ನು ಬಾಯಿಯಲ್ಲಿಟ್ಟುಕೊಂಡ. ಮುಂದೊಂದು ದಿನ ಬೇಸರವಾದಾಗ ಆಕಳಿಸಿದ. ಆಗ ಬಾಯಿಯಲ್ಲಿದ್ದ ಸ್ತ್ರೀ ಭೂಮಿಗೆ ಬಿದ್ದಳು. ಆದಿ ಮಾನವ ಇದೊಂದು ಮಾಂಸದ ಮುದ್ದೆ ಎಂದು ಬಾಯಿಯಲ್ಲಿ ಹಾಕಿಕೊಂಡು ಜಗಿಯಲು ಪ್ರಾರಂಭಿಸಿದ. ಆಗ ಸರಸ್ವತಿ ಆತನ ನಾಲಿಗೆಯ ಮೇಲೆ ಪ್ರಣವ ಮಂತ್ರಗಳನ್ನು ಬರೆದಳು. ಆಗ ಭಾಷೆ ಹುಟ್ಟಿತು ಎಂದು ಈ ಕಥೆ ಹೇಳುತ್ತದೆ. ಇದನ್ನು ನೀವು ವೈಜ್ಞಾನಿಕವಾಗಿ ಅಥವಾ ತಾರ್ಕಿಕವಾಗಿ ಅರ್ಥೈಸಬೇಕಾದ ಅಗತ್ಯವಿಲ್ಲ. ನಮ್ಮ ದೇಶ ಒಂದರಲ್ಲಿಯೇ ಸುಮಾರು ೧೬೦೦ ಭಾಷೆಗಳಿವೆ ಎಂಬ ವರದಿ ಇದೆ. ನಮ್ಮ ಸಂವಿಧಾನದಲ್ಲಿ ಬಹುಜನ ಉಪಯೋಗಿಸುತ್ತಿರುವ, ಜ್ಞಾನಕೋಶಗಳನ್ನು ತಮ್ಮ ಗರ್ಭದಲ್ಲಿ ಅಡಗಿಸಿಕೊಂಡಿರುವ ೧೨ ಭಾಷೆಗಳನ್ನು ಗುರುತಿಸಿ ೮ನೇ ಪರಿಚ್ಛೇದದಲ್ಲಿ (ಶೆಡ್ಯೂಲ್) ನಮೂದಿಸಿದ್ದಾರೆ.

ತಮಿಳಿನ ಅನೇಕ ವಿದ್ವಾಂಸರು ಹಾಗೂ ರಾಜಕಾರಣಿಗಳು ಕನ್ನಡನಾಡಿನೊಂದಿಗೆ ಸುಮಧುರ ಸಂಬಂಧ ಇಟ್ಟುಕೊಳ್ಳಲು ಪ್ರಯತ್ನಿಸುತ್ತೇವೆಂದು ಹೇಳಿದರೂ ಕೂಡ ಆಗಿಂದ್ದಾಗ್ಗೆ ಗಡಿ ವಿಷಯದಲ್ಲಿಯೋ, ನೀರಿನ ಹಂಚಿಕೆ ವಿಷಯದಲ್ಲಿಯೋ, ಅಥವಾ ಇಂತಹ ಸೂಕ್ಷ್ಮ ಭಾಷಾ ವಿಷಯದ ಬಗ್ಗೆ ಇಲ್ಲದ ತಂಟೆ-ತಕರಾರುಗಳನ್ನು ಮಾಡುತ್ತಾರೆ. ಒಕ್ಕೂಟದ ಪರಿಕಲ್ಪನೆಯಲ್ಲಿ ಅದರಲ್ಲೂ ಕೂಡ ಕನ್ನಡ, ತಮಿಳು, ಮಲೆಯಾಳಿ ಭಾಷೆಗಳು ದ್ರಾವಿಡ ಕುಟುಂಬಕ್ಕೆ ಸೇರಿರುವಂಥದ್ದಾಗಿರುವುದರಿಂದ ಇವುಗಳನ್ನು ಸೋದರ ಭಾಷೆಗಳೆಂದು ತಮಿಳು ವಿದ್ವಾಂಸರು ಈ ವಿಕೃತ ಮನಸ್ಸಿನ ಗಾಂಧೀಯನ್ನು ತರಾಟೆಗೆ ತೆಗೆದುಕೊಳ್ಳಬೇಕಾಗಿತ್ತು. ತಮಿಳುನಾಡಿನ ಮುಖ್ಯಮಂತ್ರಿಯವರಾದ ಎಂ. ಕರುಣಾನಿಧಿಯವರು ಸ್ವತಃ ತಮಿಳು ವಿದ್ವಾಂಸರು ಮತ್ತು ಬರಹಗಾರರು. ಹೀಗಿರುವಾಗ ಅವರು ಈ ಬಗ್ಗೆ ಯಾವುದೇ ಕ್ರಮವನ್ನು ಕೈಗೊಳ್ಳದೆ ಇರುವುದನ್ನು ಕಂಡಾಗ ಅವರು ಕನ್ನಡ ಭಾಷೆಗೆ ಈ ಸ್ಥಾನಮಾನ ಸಿಗಬಾರದು ಎನ್ನುವ ಮತ್ಸರಕ್ಕೆ ಒಳಗಾಗಿದ್ದಾರೆಂದು ಅನಿವಾರ್ಯವಾಗಿ ಭಾವಿಸಬೇಕಾಗುತ್ತದೆ. ತಮಿಳಿಗೆ ಶಾಸ್ತ್ರೀಯ ಭಾಷೆಯ ಸ್ಥಾನಮಾನ ಕೊಡುವಾಗ ೧೦೦೦ ವರ್ಷಗಳ ಇತಿಹಾಸ ಇದ್ದರೆ ಸಾಕು ಎಂದು ನಿಯಮ ಇದ್ದಿತ್ತು. ತಮಗೆ ಆ ಸ್ಥಾನಮಾನ ಸಿಕ್ಕ ತಕ್ಷಣ ರಾಜಕೀಯ ಶಕ್ತಿಯನ್ನು ದುರುಪಯೋಗಪಡಿಸಿಕೊಂಡು ಶಾಸ್ತ್ರೀಯ ಸ್ಥಾನಮಾನ ಪಡೆಯಲು ೧೫೦೦-೨೦೦೦ ವರ್ಷಗಳ ಜನಭಾಷೆಯ ಇತಿಹಾಸ ಇರಬೇಕೆಂದು ನಿಯಮಾವಳಿಗಳಿಗೆ ತಿದ್ದುಪಡಿಯನ್ನು ತಂದರು. (ಕೇಂದ್ರದ ಮೇಲೆ ಒತ್ತಡವನ್ನು ಹೇರಿದರು).

ಕನ್ನಡ ಭಾಷೆ ೨೦೦೦ ವರ್ಷಗಳಿಂದಲೂ ಜನಭಾಷೆಯಾಗಿದೆ. ಅತ್ಯಂತ ಮೌಲಿಕವಾದ ಕಾವ್ಯಗಳು, ಮಹಾಕಾವ್ಯಗಳು, ಕಥೆಗಳು ನಮ್ಮಲ್ಲಿ ಬಂದಿವೆ. ಆದಿಕವಿ ಕವಿತಾಗುಣಾರ್ಣವ ನಾಡೋಜ ಪಂಪನನ್ನು ಹಿಡಿದು ಕುವೆಂಪುರವರವರೆಗಿನ ಸಾಹಿತಿಗಳು, ಕಲಾವಿದರು, ವಿಜ್ಞಾನಿಗಳು, ತಂತ್ರಜ್ಞರು ಮತ್ತು ಇತರರು ಕನ್ನಡ ಭಾಷೆಯನ್ನು ಶ್ರೀಮಂತಗೊಳಿಸಿದ್ದಾರೆ. ಅಂತೆಯೇ ಕನ್ನಡ ಭಾಷೆಗೆ ಸಂವಿಧಾನ ಮಾನ್ಯತೆ ಕೊಟ್ಟಿದೆ.

ಕ್ರಿಸ್ತಶಕದಿಂದಲೇ ನಮ್ಮ ಭಾಷೆಗೆ ಲಿಪಿ ಇದೆ. ಆದರೆ ಇವೊತ್ತು ದ್ರಾವಿಡ ಭಾಷಾ ಕುಟುಂಬದಲ್ಲಿ ನಾವೇ ಶ್ರೀಮಂತ ಭಾಷೆ ಎಂದು ಬೀಗುತ್ತಿರುವ ತಮಿಳಿಗೆ ಲಿಪಿ ಬಂದದ್ದು ಕ್ರಿಸ್ತಶಕ ೬ನೇ ಶತಮಾನದಲ್ಲಿ. ೪ನೇ ಶತಮಾನದ ಹಲ್ಮಿಡಿ ಶಾಸನ ಈ ಬಗ್ಗೆ ನಮಗೆ ಪುರಾವೆಯನ್ನು ಒದಗಿಸಿಕೊಡುತ್ತದೆ. ಕೇಂದ್ರ ಸರ್ಕಾರ ಕನ್ನಡ ಮತ್ತು ತೆಲುಗು ಭಾಷೆಗೆ ಶಾಸ್ತ್ರೀಯ ಸ್ಥಾನಮಾನ ಕೊಟ್ಟಿದೆ ಎಂದು ನಾವು ನಿಜವಾಗಿಯೂ ಹೆಮ್ಮೆಪಡುತ್ತಿದ್ದೇವೆ. ಶಾಸ್ತ್ರೀಯ ಭಾಷೆ ಎನ್ನುವುದಕ್ಕಿಂತ ಅಭಿಜಾತ ಭಾಷೆ ಎಂದು ಕರೆಯುವುದು ಸೂಕ್ತವೆಂದು ನಾನು ಭಾವಿಸಿದ್ದೇನೆ. ಅನೇಕ ವಿದ್ವಾಂಸರು ಶಾಸ್ತ್ರೀಯ ಹಾಗೂ ಅಭಿಜಾತ ಎನ್ನುವ ಎರಡು ಶಬ್ದಪುಂಜಗಳನ್ನು ಬಳಸುತ್ತಿದ್ದಾರೆ. ನಮ್ಮ ಕನ್ನಡ ಭಾಷೆಗೆ ಶಾಸ್ತ್ರೀಯ ಸ್ಥಾನಮಾನ ಕೊಡಬೇಕೆಂದು ಕನ್ನಡ ನಾಡಿನ ಅನೇಕ ವಿದ್ವಾಂಸರು, ಜನಸಾಮಾನ್ಯರು, ಅಧಿಕಾರಸ್ಥರು ಹಾಗೂ ರಾಜಕಾರಣಿಗಳು, ಸಂಘಟನೆಗಳು ನಿರಂತರ ಪ್ರಯತ್ನ ಮಾಡಿದ್ದಾರೆ. ಆದರೆ ತಮಿಳುನಾಡಿನ ಕೆಲವು ಕಿಡಿಗೇಡಿ ಮನಸ್ಸಿನ ಜನ ಅದರಲ್ಲೂ ವಿಚಿತ್ರ ಎಂದರೆ ಗಾಂಧೀ ಎಂಬ ಹೆಸರು ಇಟ್ಟುಕೊಂಡ ಒಬ್ಬ ಅಸೂಯೆ ಮೊಟ್ಟೆಯ, ವಿಕೃತ ಮನಸ್ಸಿನ ವ್ಯಕ್ತಿ ಮದ್ರಾಸ್ ಶ್ರೇಷ್ಠ ನ್ಯಾಯಾಲಯದಲ್ಲಿ ರಿಟ್ ಅರ್ಜಿಯನ್ನು ಸಲ್ಲಿಸಿದ್ದಾನೆ. ಭಾಷಾತಜ್ಞರು ಕನ್ನಡ ಮತ್ತು ತೆಲುಗಿಗೆ ಶಾಸ್ತ್ರೀಯ ಭಾಷೆಯ ಸ್ಥಾನಮಾನ ಕೊಡಬೇಕೆಂದು ಶಿಫಾರಸ್ಸು ಮಾಡಿದ್ದರ ಮೇಲೆಯೆ ಆತ ರಿಟ್ ಅರ್ಜಿಯನ್ನು ಹಾಕಿದ್ದಾನೆ. ಅದು ಎಷ್ಟರಮಟ್ಟಿಗೆ ಕಾನೂನಿನಲ್ಲಿ ಸಿಂಧು ಆಗುತ್ತದೆ ಎನ್ನುವುದನ್ನು ನಾವು ಕಾದು ನೋಡಬೇಕಾಗಿದೆ. ಸರ್ಕಾರಿ ಆದೇಶ ಇತ್ತೀಚೆಗೆ ಬಂದಿರುವುದರಿಂದ ಗಾಂಧೀಯವರ ಅರ್ಜಿಯಲ್ಲಿ ಯಾವುದೇ ಹುರುಳಿಲ್ಲವೆಂದು ಪ್ರಥಮ ಹಂತದಲ್ಲಿಯೇ (inlimine) ಈ ಅರ್ಜಿಯನ್ನು ಅಸಿಂಧು ಎಂದು ಸಾರಬೇಕಾಗಿತ್ತು. ಆತ ಅರ್ಜಿ ಹಾಕಿದ ಮೇಲೆ ಮದ್ರಾಸು ಶ್ರೇಷ್ಠನ್ಯಾಯಾಲಯದಲ್ಲಿ ವ್ಯಾಜ್ಯ ಇದೆ ಎಂದು ಕೇಂದ್ರ ಸರ್ಕಾರ ನಿರ್ಣಯ ತೆಗೆದುಕೊಳ್ಳುವಲ್ಲಿ ವಿಳಂಬ ಮಾಡಿತು. ರಾಜ್ಯ ಸರ್ಕಾರವು ಸಹ ಈ ಅರ್ಜಿ ಏನು? ಇದರ ಪ್ರತಿವಾದಿಗಳು ಯಾರು? ಇದಕ್ಕೇನಾದರು ತಡೆಯಾಜ್ಞೆ ಇದೆಯೇ ಎನ್ನುವ ಮಾಹಿತಿಯನ್ನು ತರಿಸಿಕೊಳ್ಳುವ ಪ್ರಯತ್ನವನ್ನೇ ಮಾಡಲಿಲ್ಲ. ಇತ್ತೀಚೆಗೆ ಈ ವಿಷಯವನ್ನು ಮಾಧ್ಯಮದವರು

ಪ್ರಕಟಪಡಿಸಿದಾಗ, ತಡೆಯಾಜ್ಞೆ ಇಲ್ಲದೆ ಇರುವುದರಿಂದ ಕೇಂದ್ರ ಸರ್ಕಾರ ತಡವಾಗಿಯಾದರೂ ಕೂಡ ಕನ್ನಡಿಗರ ಹೋರಾಟಕ್ಕೆ ಮನ್ನಣೆ ಕೊಟ್ಟು ನ್ಯಾಯಯುತವಾದ ನಿರ್ಣಯವನ್ನು ಮಾಡಿದೆ. ಕೆಲವರು ಮುಂಬರುವ ಚುನಾವಣೆಯನ್ನು ದೃಷ್ಟಿಯನ್ನಿಟ್ಟುಕೊಂಡು ಈ ನಿರ್ಣಯವಾಗಿದೆ ಎಂದು ಹೇಳುತ್ತಾರೆ.

ಕೇಂದ್ರ ಸರ್ಕಾರದ ಉದ್ದೇಶವನ್ನು ಇಲ್ಲಿ ನಾವು ಪ್ರಶ್ನಿಸಬೇಕಾದ ಅಗತ್ಯವಿಲ್ಲ. ಅಗತ್ಯವಿರುವುದು ನಮಗೆ ನ್ಯಾಯಯುತವಾಗಿ ದಕ್ಕಿರುವ ಶಾಸ್ತ್ರೀಯ ಭಾಷಾ ಸ್ಥಾನಮಾನ. ತೆಲುಗಿನವರು ನಮ್ಮಷ್ಟು ಹೋರಾಟವನ್ನು ಮಾಡಲೇ ಇಲ್ಲ. ಆದರೂ ಕೂಡ ಅವರು ತಮ್ಮ ರಾಜಕೀಯ ಶಕ್ತಿಯನ್ನು ಉಪಯೋಗಿಸಿಕೊಂಡು ನಮ್ಮ ಜೊತೆ ಆ ಸ್ಥಾನವನ್ನು ಪಡೆದಿದ್ದಾರೆ. ಅದಕ್ಕೆ ನಾವು ಅಸೂಯೆಪಡಲಿಲ್ಲ. ಅಷ್ಟು ಪ್ರಬುದ್ಧತೆಯನ್ನು ಪಡೆದಿದ್ದೇವೆ. ಏಳು ಜನ ಜ್ಞಾನಪೀಠ ಪ್ರಶಸ್ತಿಯನ್ನು ಪಡೆದ ಹಿರಿಯರು ನಮ್ಮಲ್ಲಿದ್ದಾರೆ. ಈಗ ಶಾಸ್ತ್ರೀಯ ಸ್ಥಾನಮಾನ ಕನ್ನಡ ಭಾಷೆಗೆ ಕೊಟ್ಟಿದ್ದಾರೆನ್ನುವ ಕಾರಣಕ್ಕಾಗಿ ನಾವು ಹೆಮ್ಮೆ ಪಡುವುದು ಸಹಜ ಹಾಗೂ ಅಪೇಕ್ಷಣೀಯ. ಕೇಂದ್ರ ಸರ್ಕಾರ ಈ ಭಾಷಾ ಬೆಳವಣಿಗೆಗೆ, ಸಂಶೋಧನೆಗೆ ಹಣ ಸಹಾಯವನ್ನು ಮಾಡುತ್ತದೆ. ಅದರಿಂದ ನಾವು ಭಾಷಾಶಾಸ್ತ್ರದಲ್ಲಿ ವ್ಯಾಕರಣ ಹಾಗೂ ಸೃಜನಶೀಲತೆಯ ನಿಟ್ಟಿನಲ್ಲಿ ಹೆಚ್ಚಿನ ಕೆಲಸವನ್ನು ಮಾಡಲು ಸಾಧ್ಯವಾಗುತ್ತದೆ. ಈಗಾಗಲೇ ತಮಿಳು ಭಾಷೆಗೆ ಕೇಂದ್ರ ಸರ್ಕಾರ ಹಣ ಬಿಡುಗಡೆ ಮಾಡಿದೆ. ನಮಗೆ ಶಾಸ್ತ್ರೀಯ ಸ್ಥಾನಮಾನ ಕೊಟ್ಟಿದೆ ಎನ್ನುವ ಆದೇಶ ಒಂದನ್ನು ಬಿಟ್ಟರೆ ಯಾವ ಪೂರಕ ಕ್ರಮಗಳನ್ನು ಕೈಗೊಂಡಿಲ್ಲ. ನಮ್ಮ ರಾಜ್ಯ ಸರ್ಕಾರವೂ ಕೂಡ ಭಾಷಾತಜ್ಞರನ್ನು, ಸಂಶೋಧಕರನ್ನೊಳಗೊಂಡಿರುವ ಒಂದು ಸಮಿತಿಯನ್ನು ತತ್‌ಕ್ಷಣದಲ್ಲಿ ರಚಿಸಬೇಕಾಗಿದೆ. ಈ ಬಗ್ಗೆ ಸಂಶೋಧನೆ ಮತ್ತಿತರ ಉನ್ನತ ಮಟ್ಟದ ಅಧ್ಯಯನ ನಡೆಯಬೇಕಾಗಿದೆ. ಕೆಲಸ ಪ್ರಾರಂಭಿಸಬೇಕಾಗುತ್ತದೆಂದು ಸಿ.ಐ.ಎಲ್‌ನ ಭಾಷಾ ತಜ್ಞರಾದ ಪ್ರೊ. ಲಿಂಗದೇವರು ಹಳೆಮನೆಯವರು ಹೇಳುತ್ತಾರೆ. ಈ ಕೆಲಸವನ್ನು ತಕ್ಷಣದಲ್ಲಿ ಮಾಡಬೇಕಾದದ್ದಿದೆ. ಆದರೆ ಅದನ್ನು ಬಿಟ್ಟು ಇಂದಿನ ರಾಜ್ಯ ಸರ್ಕಾರ ಭಾಷೆಯ ಶಾಸ್ತ್ರೀಯ ಸ್ಥಾನಮಾನಕ್ಕಾಗಿ ಹೋರಾಡಿದ ೧೦೦ ಜನರನ್ನು ಕರೆಸಿ ಪ್ರಶಸ್ತಿಯನ್ನು ಕೊಡುತ್ತದೆಂದು ಘೋಷಣೆ ಮಾಡಿದೆ. ಸುದೈವದಿಂದ ಮುಖ್ಯಮಂತ್ರಿಗಳು ಕನ್ನಡನಾಡಿನ ಜನತೆಯ ಪ್ರತಿರೋಧದ ಕಾರಣ, ಆ ಕಾರ್ಯಕ್ರಮ ರದ್ದು ಮಾಡಿರುವುದು ಸ್ವಾಗತಾರ್ಹ.

ಉತ್ಸವ, ಪ್ರಶಸ್ತಿ, ಪುರಸ್ಕಾರಗಳು ಇವೆಲ್ಲವೂ ಕೂಡ ಮಾಡಲೇಬೇಕಾಗಿರುವ ಕರ್ತವ್ಯಗಳು. ಆದರೆ ಉತ್ಸವಗಳೇ ಭಾಷೆಯನ್ನು ಶ್ರೀಮಂತಗೊಳಿಸುವುದಿಲ್ಲ. ಕೂಡಲೇ ರಾಜ್ಯ ಸರ್ಕಾರ ಪೂರಕ ಸಿದ್ಧತೆಗಳನ್ನು ಮಾಡಬೇಕು. ಆ ಬಗ್ಗೆ ನಾವೆಲ್ಲ ಕಾರ್ಯತತ್ಪರರಾಗಬೇಕು. ಉತ್ಸವದ ಆಡಂಬರದಿಂದ ಯಾವ ಭಾಷೆಯೂ ಬೆಳೆಯುವುದಿಲ್ಲ. ನಮ್ಮ ಸಮಾಜ ನಮ್ಮ ಕ್ರಿಯಾಶೀಲತೆಯಲ್ಲಿ ಸೃಜನಶೀಲತೆಯಲ್ಲಿ ಅದು ಶ್ರೀಮಂತ ಭಾಷೆಯಾಗಿ ಅನ್ಯ ಭಾಷೆಯಿಂದ ಕೆಲವು ಶಬ್ದಗಳನ್ನು ಎರವಲು ಪಡೆಯುತ್ತಾ ಬೆಳೆಯಬೇಕು. ಕನ್ನಡವನ್ನು ಹೆಚ್ಚು ಹೆಚ್ಚಾಗಿ ಬೆಳೆಸುವುದರ ಮೂಲಕ ಅದು ಹರಿತಗೊಳ್ಳುತ್ತದೆ, ವ್ಯಾಪಕತ್ವ ಪಡೆಯುತ್ತದೆ. ಆದರೆ ಇಂದು ಅಭಿಜಾತ ಭಾಷೆ ಎಂದು ಹಿಗ್ಗುವ ನಾವು ನಮ್ಮ ದೈನಂದಿನ ನಡವಳಿಕೆಯಲ್ಲಿ, ನಮ್ಮ ಮಕ್ಕಳ ಶಿಕ್ಷಣದಲ್ಲಿ, ಆಡಳಿತ ಭಾಷೆಯಲ್ಲಿ ಇಂಗ್ಲಿಷನ್ನು ಬೆಳೆಸುತ್ತ ಆ ವ್ಯಾಮೋಹದಿಂದ ಇನ್ನೂ ಬಿಡುಗಡೆ ಆಗದೆ ದಿನನಿತ್ಯ ನಾವು ಕನ್ನಡವನ್ನು ಕಡೆಗಾಣಿಸುತ್ತಿದ್ದೇವೆ. ಎಫ್‌ಎಂ ರೇಡಿಯೋದಲ್ಲಿ ಕೆಲವು ಟಿವಿಗಳಲ್ಲಿ ಬರುವ ಕೆಲವು ಹುಡುಗ-ಹುಡುಗಿಯರ ಮಾತುಗಳು 'ಕಂಗ್ಲೀಷು' ಎಂದು ಜನ ಲೇವಡಿ ಮಾಡುತ್ತಿದ್ದಾರೆ. ಈ ತರಹದ ನಡವಳಿಕೆ ಭಾಷೆಯನ್ನು ಕುಲಗೆಡಿಸುತ್ತದೆ.

ಈ ಬಗ್ಗೆ ಕನ್ನಡಿಗರು ಎಚ್ಚೆತ್ತುಕೊಳ್ಳುವ ಮೂಲಕ 'ನಾಡಾಯಿತು ಕರ್ನಾಟಕ, ಉಸಿರಾಗಲಿ ಕನ್ನಡ' ಎನ್ನುವ ಕವಿಶ್ರೇಷ್ಠ ಚೆನ್ನವೀರ ಕಣವಿಯವರ ಮಾತು ನಿಜವಾಗಲಿಯೆಂದು ನುಡಿಯಬೇಕಾಗಿದೆ.*

* ಸೌಜನ್ಯ: ಉದಯವಾಣಿ. ೨೩.೧೧.೨೦೦೮

# ಕನ್ನಡ ಶಾಸ್ತ್ರೀಯ ಭಾಷೆ: ಅಡಿಯಿಡುವ ಮುನ್ನ...

ಡಿ. ಪಾಂಡುರಂಗ ಬಾಬು

ಕನ್ನಡಕ್ಕೆ 'ಶಾಸ್ತ್ರೀಯ ಭಾಷೆ' ಸ್ಥಾನಮಾನದ ಹೋರಾಟ ಯಶಸ್ವಿಯಾಗಿದೆ. ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಸಂಘಟನೆಗಳು ಹೋರಾಟದ ಮುಂಚೂಣಿಯಲ್ಲಿ ನಿಂತು ಕ್ರಿಯಾಶೀಲವಾಗಿ ತಮ್ಮ ಕರ್ತವ್ಯ ನಿಭಾಯಿಸಿವೆ. 'ಭಾಷೆಗಳನ್ನಷ್ಟೇ' ಅನುಲಕ್ಷಿಸಿ ಹೇಳುವುದಾದರೇ ಯಾವುದೇ ಭಾಷೆಗಳಿಗೆ ಕೊಡಲ್ಪಡುವ ಅಥವಾ ಭಾಷಿಕರು ಪಡೆದುಕೊಳ್ಳುವ ಭಾಷಾ ಸ್ಥಾನಮಾನಗಳಿಗೆ ಶೈಕ್ಷಣಿಕ ಅಥವಾ ನಿರ್ದಿಷ್ಟವಾಗಿ ಹೇಳುವುದಾದರೇ ಭಾಷಿಕ ವಿಚಾರಗಳು ಮುಖ್ಯವಾಗಿರುವುದಿಲ್ಲ. ಭಾಷೆಗಳ ಬಗೆಗಿನ ಲೋಕದೃಷ್ಟಿ, ಭಾಷೆಗಳ ಸಾಮರ್ಥ್ಯದ ಬಗೆಗಿನ ನಂಬಿಕೆಗಳು ಕೇವಲ ಸಮಾಜೋ, ರಾಜಕೀಯ ನೆಲೆಗಳಿಂದ ರೂಪುಗೊಂಡಿರುವಂತಹವು. ಶೈಕ್ಷಣಿಕ ವಲಯ ಈ ವಿಚಾರದಲ್ಲಿ ಮುಂಚೂಣಿಯಲ್ಲಿಲ್ಲದ್ದಕ್ಕೆ ಸಮರ್ಥನೀಯ ತಾರ್ಕಿಕ ಕಾರಣಗಳಿವೆ. ಇದರಲ್ಲಿ 'ಶಾಸ್ತ್ರೀಯ ಭಾಷೆಯ' ನಿಗದಿಗಾಗಿ ರೂಪಿಸಿರುವ ಮಾನದಂಡ ಮತ್ತು ಪೂರಕ ದಾಖಲೆ, ಆಕರಗಳ ಬಗೆಗಿನ ಜಿಜ್ಞಾಸೆಗಳು ಮುಖ್ಯ ಕಾರಣಗಳಾಗಿದ್ದವು. ಶೈಕ್ಷಣಿಕ ಲೋಕ ನಿಜವಾಗಿ ಈ ವಿಚಾರದಲ್ಲಿ ತನ್ನ ಹೊಣೆಗಾರಿಕೆಯಿಂದ ತಪ್ಪಿಸಿಕೊಂಡಿರಲಿಲ್ಲ. ಈ ವಿಚಾರವಾಗಿ 'ಶಾಸ್ತ್ರೀಯ' ಭಾಷೆಯ ಪರಿಕಲ್ಪನೆ ಮತ್ತು ವ್ಯಾಖ್ಯಾನದ ಮೂಲಭೂತ ವಿಚಾರಗಳನ್ನು ಪರಿಹರಿಸಿಕೊಳ್ಳುವ ಸ್ಪಷ್ಟಪಡಿಸುವ ಕಾರ್ಯದಲ್ಲಿ ನಿರತವಾಗಿದ್ದವು. ಆದರೆ ಕೇಂದ್ರ ಸರ್ಕಾರ ಕೆಲವು ಭಾಷೆಗಳ ವಿಚಾರದಲ್ಲಿ ಕೈಗೊಂಡ ರಾಜಕೀಯ ನಿರ್ಧಾರಗಳನ್ನು ಕನ್ನಡದ ಸಾಮಾಜಿಕ, ರಾಜಕೀಯ ಲೋಕ ಸರಿಯಾಗಿ ಗ್ರಹಿಸಿ ಭಾಷಿಕ ನ್ಯಾಯದ, ಹಕ್ಕಿನ ಹೋರಾಟವಾಗಿ ರೂಪಿಸಿ ನ್ಯಾಯ ದೊರಕಿಸಿಕೊಂಡಿದ್ದು ಸರಿಯಾಯಿತು. ಮೊದಲೇ ಹೇಳಿದಂತೆ 'ಶಾಸ್ತ್ರೀಯ' ಅಥವಾ ಇನ್ನಾವುದೇ ಭಾಷಿಕ ಸ್ಥಾನಮಾನಗಳ ವಿಚಾರಗಳು ಆಯಾ ಭಾಷೆಗಳನ್ನಾಡುವ ಜನರ ಸಾಮಾಜಿಕ ರಾಜಕೀಯ ಸಾಮರ್ಥ್ಯವನ್ನು ಅವಲಂಬಿಸಿದ ವಿಚಾರ. ಯಾಕೆಂದರೆ ಜಗತ್ತಿನಲ್ಲಿ ನೀಡಲ್ಪಡುವ ಸ್ಥಾನಮಾನಗಳು ಇನ್ನಿತರ ಭಾಷೆ ಅಥವಾ ಪ್ರಭೇದಗಳನ್ನು ಆಡುತ್ತಿರುವವರಲ್ಲಿ ಸಹಜವಾಗಿಯೇ ಕೀಳರಿಮೆಯನ್ನು ಉಂಟು ಮಾಡಬಹುದು. ಇಲ್ಲಿಯೇ ಒಂದು ವಿಚಾರವನ್ನು ಸ್ಪಷ್ಟಪಡಿಸಿಕೊಳ್ಳಬೇಕು. ಅಂದರೆ ಹೆಚ್ಚು ಜನರ ಅನುಕೂಲಕ್ಕೆ

ಯಾವುದೋ ಒಂದು ಭಾಷೆಯನ್ನೋ, ಪ್ರಭೇದವನ್ನೋ, ಆಡಳಿತ ಶೈಕ್ಷಣಿಕ ಮತ್ತಿತರ ಸಂದರ್ಭಗಳಲ್ಲಿ ಬಳಸುತ್ತಿದ್ದರೆ ಇಂತಹ ಸಂದರ್ಭಗಳ ಅನಿವಾರ್ಯತೆಗೆ ಸಮರ್ಥನೆಯಿದೆ. ಆದರೆ ಇದೇ ಸಂದರ್ಭದಲ್ಲಿ ಇಂತಹ ಒತ್ತಾಸೆಗಳನ್ನು ಪಡೆಯದ ಭಾಷೆ ಅಥವಾ ಪ್ರಭೇದಗಳ ಎದುರು ಪ್ರಖರವಾಗುತ್ತವೆ. ರಾಜಕೀಯ, ಸಾಮಾಜಿಕ, ಜನಸಂಖ್ಯಾ ಬಾಹುಳ್ಯವುಳ್ಳ ಭಾಷೆಗಳು ಪ್ರಭೇದಗಳು ಸಂಘಟಿತ ಹೋರಾಟ, ತಂತ್ರಗಳ ಮೂಲಕ ತಮ್ಮ ಹಕ್ಕು ಮತ್ತು ಸ್ಥಾನಮಾನಗಳನ್ನು ಪಡೆದುಕೊಳ್ಳುತ್ತವೆ. ಉದಾ: ತಮಿಳಿಗೆ ಶಾಸ್ತ್ರೀಯ ಸ್ಥಾನಮಾನ ನೀಡಿದಾಗ ಕನ್ನಡವೂ ಅದನ್ನು ಪಡೆಯಲು ಸಾಧ್ಯವಾಯಿತು. ಇಲ್ಲಿ ಗಮನಿಸಬೇಕಾದ ವಿಚಾರವೆಂದರೆ ಇಂತಹ ರಾಜಕೀಯ ನಿರ್ಧಾರಿತ, ಪ್ರೇರಿತ ಸ್ಥಾನಮಾನಗಳಿಗೆ ನಿಗದಿಪಡಿಸಿರುವ ಮಾನದಂಡಗಳು. ಈ ಮಾನದಂಡಗಳು ಬೇಡುವ ಚಾರಿತ್ರಿಕ ದೀರ್ಘ ಪರಂಪರೆಯ, ಲಿಖಿತ ಸಾಹಿತ್ಯಿಕ, ಆಕರಗಳನ್ನು ಪುರಾವೆಗಳ ಸಮೇತ ಪ್ರಸ್ತುತಪಡಿಸಲಾಗದಿರುವುದು ಒಂದು ಭಾಷೆಯ ಯೋಗ್ಯತೆ, ಸಾಮರ್ಥ್ಯಗಳ ಕೊರತೆ, ಅಪಕ್ವತೆ ಎಂದು ಭಾವಿಸುವುದು.

ಒಂದು ಭಾಷೆಯ ಬಳಕೆಯ ಸಂದರ್ಭದಲ್ಲಿ ಆ ಭಾಷೆಗೆ ದೊರೆತ ರಾಜಕೀಯ, ಸಾಮಾಜಿಕ ಒತ್ತಾಸೆಗಳು ಆ ಭಾಷೆಯಲ್ಲಿ ಲಿಖಿತ ಆಕರಗಳನ್ನು ಸೃಷ್ಟಿಸುವ ಸಾಹಿತ್ಯ ದಾಖಲೀಕರಣದ ಸೌಲಭ್ಯಗಳನ್ನು, ಸಂದರ್ಭಗಳನ್ನು ಒದಗಿಸುತ್ತವೆ.

ಮನುಷ್ಯರಿಂದ ಆಡಲ್ಪಡುತ್ತಿರುವ ಯಾವ ಭಾಷೆಯೂ ಭಾಷೆಯನ್ನಷ್ಟೇ ಆಧರಿಸಿ ಹೇಳುವುದಾದರೇ ಇನ್ನೊಂದು ಭಾಷೆಗಿಂತ ಹೆಚ್ಚು ಸಮರ್ಥವಲ್ಲ, ಯಾವ ಭಾಷೆಯೂ ಕಡಿಮೆ ಸಮರ್ಥವಲ್ಲ. ಅಂದರೆ ಎಲ್ಲಾ ಭಾಷೆಗಳೂ ಸಮಾನ ಸಾಮರ್ಥ್ಯವುಳ್ಳವೇ ಆಗಿರುತ್ತವೆ. ಭಾಷೆ ಬಳಕೆಯಾಗಬೇಕಾದ ವಿವಿಧ ಪರಿಸ್ಥಿತಿಗಳನ್ನು ನಿಭಾಯಿಸಲು ಪ್ರತಿಭಾಷೆಯೂ ತನ್ನಷ್ಟಕ್ಕೆ ತಾನೇ ಅನೇಕ ತಂತ್ರಗಳನ್ನು ಬಳಸಿ ತನ್ನನ್ನು ತಾನು ಪ್ರಸ್ತುತಪಡಿಸಿಕೊಳ್ಳುತ್ತದೆ.

ಈಗಾಗಲೇ ವಿವಿಧ ಕಾರಣಗಳಿಂದ ವಿವಿಧ ಕಾರಣಗಳಿಗಾಗಿ ಸಮರ್ಥ, ಸಶಕ್ತ, ಅತ್ಯುನ್ನತ ಭಾಷೆಗಳೆಂದು ಗುರುತಿಸಿರುವ, ಗುರುತಿಸುತ್ತಿರುವ ಭಾಷೆಗಳೆಲ್ಲವೂ ಭಾಷಿಕ ಸಾಮರ್ಥ್ಯದ ಕಾರಣಗಳಿಗಿಂತ ಹೆಚ್ಚಾಗಿ ಆ ಭಾಷೆಗಳನ್ನು ಬಳಸುವ ಜನ ಸಮುದಾಯದ ಸಾಂಸ್ಕೃತಿಕ, ಸಾಹಿತ್ಯಿಕ, ಶೈಕ್ಷಣಿಕ ಮತ್ತು ರಾಜಕೀಯ ಪ್ರಾಬಲ್ಯದ ಕಾರಣಕ್ಕೆ ಮಾನ್ಯತೆ ಪಡೆದಿವೆ, ಪಡೆಯುತ್ತಿವೆ. ಈಗ ಇಂಗ್ಲಿಶ್, ಸಂಸ್ಕೃತ ಮುಂತಾದ ಭಾಷೆಗಳು ಹಲವಾರು ವಿಚಾರಗಳ ಅಭಿವ್ಯಕ್ತಿಗೆ ಸಮರ್ಥವಾದ, ಬೆಳವಣಿಗೆ ಹೊಂದಿರುವ, ಪರಿಪೂರ್ಣ ಭಾಷೆಗಳೆಂಬ ಸಾಮಾನ್ಯ ತಿಳುವಳಿಕೆಯೊಂದಿದೆ. ಅಥವಾ ಒಂದು ಭಾಷೆಯ ಲಿಖಿತ ಪರಂಪರೆಯನ್ನು ಆಧರಿಸಿ ಅಥವಾ ಸಾಹಿತ್ಯಿಕ ದಾಖಲೆಗಳನ್ನು ಆಧರಿಸಿ ಅದೊಂದು ಶ್ರೀಮಂತ ಸಂಪದ್ಭರಿತ ಭಾಷೆಯೆಂದು ವ್ಯಾಖ್ಯಾನಿಸುವ, ವಿವರಿಸುವ ಸಂದರ್ಭಗಳೂ ಇವೆ. ಇಂತಹ ಹೇಳಿಕೆಗಳು ವಿವರಣೆಗಳು ಇಂತಹ ಒಂದು ಭಾಷೆಯನ್ನು ತಮ್ಮದೆಂದುಕೊಳ್ಳುವ ಅಥವಾ ಬಳಸುತ್ತಿರುವ ಜನಗಳಿಗೆ ಭಾವನಾತ್ಮಕವಾಗಿ ಮೇಲರಿಮೆಯನ್ನೋ ಸಂತೋಷವನ್ನೋ ಉಂಟು ಮಾಡಬಹುದು. ಇದು ಇಷ್ಟೇ ಆಗಿದ್ದರೆ ಯಾವ ಸಮಸ್ಯೆಯೂ ಇರುವುದಿಲ್ಲ. ಆದರೆ ಒಂದು ಸಮಾಜದಲ್ಲಿ ಬೇರೆ ಬೇರೆ ಭಾಷೆಗಳನ್ನು ಹಾಗೂ ಒಂದು ಭಾಷೆಯ ಬೇರೆ ಬೇರೆ ಭಾಷೆಗಳನ್ನು ಹಾಗೂ ಒಂದು ಭಾಷೆಯ ಬೇರೆ ಬೇರೆ ಪ್ರಭೇದಗಳನ್ನು ಬೇರೆ ಬೇರೆ ಸ್ತರಗಳಲ್ಲಿ ಬಳಸುವ ಎಲ್ಲ ಜನರು ಬದುಕುತ್ತಿರುತ್ತಾರೆ. ಇದರಲ್ಲಿ ಕೆಲವು ಭಾಷೆಗಳಿಗೆ ಮಾತ್ರ ಅಥವಾ ಯಾವುದೋ ಒಂದು ಭಾಷೆಯ ಯಾವುದಾದರೂ ಪ್ರಭೇದಕ್ಕೆ ವ್ಯವಹಾರಿಕೆವಲ್ಲದ ವಿಶೇಷ ಸ್ಥಾನಮಾನಗಳನ್ನು ಕಲ್ಪಿಸಿದರೆ ತಾರತಮ್ಯವೆನಿಸುತ್ತದೆ. ಹಾಗೆಯೇ ಬರಹವೆನ್ನುವುದು ಒಂದು ತಂತ್ರಜ್ಞಾನ ಮಾತ್ರ, ಭಾಷೆ ಮತ್ತು ಬರಹದ ಲಿಪಿಯ ಸಂಬಂಧ ಯಾದೃಚ್ಛಿಕವಾದುದು. ಒಂದು ಭಾಷಿಕ ಸಮುದಾಯದ ಸಾಹಿತ್ಯ ಸೃಷ್ಟಿಯ, ಜ್ಞಾನ ಪರಂಪರೆಯ ಚರಿತ್ರೆಗೂ ಆ ಭಾಷೆಯಲ್ಲಿ ಬರಹದ ತಾಂತ್ರಿಕತೆಯ ಅಳವಡಿಕೆಗೂ ಸಂಬಂಧವಿರಬೇಕಾಗಿಲ್ಲ. ಇಲ್ಲಿ ಹೇಳಲು ಪ್ರಯತ್ನಿಸುತ್ತಿರುವುದು ಲಿಖಿತ ಪರಂಪರೆ ಇಲ್ಲದೆಯೂ ಒಂದು ಭಾಷೆಯಲ್ಲಿ ಸಾಹಿತ್ಯ, ಜ್ಞಾನ

ಪರಂಪರೆ ಚಾರಿತ್ರಿಕವಾಗಿ ಬೆಳೆದು ಬಂದಿರಲು ಸಾಧ್ಯ. ಬರಹದ, ಲಿಪಿಯ ಹಂಗಿಲ್ಲದೆ ನೂರಾರು ಭಾಷೆಗಳಿವೆ. ಒಂದು ಜನ ಸಮುದಾಯದ ಪರಂಪರೆ ಬರಹವನ್ನಾಗಲೀ, ಸೃಷ್ಟಿಸಿದ ಸಾಹಿತ್ಯವನ್ನಾಗಲಿ ದಾಖಲಿಸುವ ಪ್ರಸರಿಸುವ ಅಗತ್ಯ, ಆ ಭಾಷಿಕ ಸಮುದಾಯದ ಬದುಕಿನ ವಿಧಾನಕ್ಕೆ, ಅಗತ್ಯವಾಗಿಲ್ಲದಿರಬಹುದು. ಪ್ರಸ್ತುತ ಸಂದರ್ಭದಲ್ಲಿಯೂ ಬರಹದ ಹಂಗಿಲ್ಲದೆ ಸಾಹಿತ್ಯ ಪ್ರಕಾರಗಳನ್ನು, ಜ್ಞಾನಪರಂಪರೆಯನ್ನೂ ಮೌಖಿಕವಾಗಿಯೇ ಉಳಿಸಿಕೊಂಡಿರುವ, ಬೆಳೆಸಿರುವ ಲಿಪಿರಹಿತವಾದ ಅನೇಕ ಹಾಗೂ ಲಿಪಿ ಸಹಿತವಾದ ಕನ್ನಡದಂತಹ ಭಾಷೆಗಳಿವೆ. ಈಗ ಯೋಚಿಸಬೇಕಿರುವುದು ಈ ಹೊತ್ತಿನ ಸಂದರ್ಭ ಪ್ರೇರಿತ ಸ್ಥಾನಮಾನಗಳ ನಿಗದಿಗಾಗಿ ರೂಪಿಸುವ ಮಾನದಂಡಗಳನ್ನು ಒಪ್ಪಿಕೊಳ್ಳಬೇಕೆ ಎನ್ನುವುದು. ಕನ್ನಡದಂತಹ ಭಾಷೆಗಳಿಗೆ ಸಂಬಂಧಿಸಿದ ಮಾನದಂಡಗಳಿಗೆ ಒಗ್ಗುವ ದಾಖಲೆಗಳನ್ನು ಒದಗಿಸುವ ಕೆಲಸ ಕಷ್ಟಕರವಲ್ಲದಿರಬಹುದು. ಆದರೆ ಇದೇ ಸಂದರ್ಭದಲ್ಲಿ ಕರ್ನಾಟಕದಲ್ಲಿಯೇ ಇರುವ ಕೊಡವ, ತುಳು ಮುಂತಾದ ಲಿಪಿ ಹಂಗಿಲ್ಲದ ಭಾಷೆಗಳೂ ಇವೆ. ಅನುಕೂಲದ ದೃಷ್ಟಿಯಿಂದ ಆಡಳಿತ ಮುಂತಾದ ವ್ಯವಹಾರಗಳಲ್ಲಿ ಪ್ರಸ್ತುತ ಈ ಭಾಷೆಗಳನ್ನು ಬಳಸುವುದು ಸಾಧ್ಯವಾಗದಿರಬಹುದು ಆ ಪ್ರಶ್ನೆ ಬೇರೆಯದು. ಆದೆ ಜ್ಞಾನ ಪರಂಪರೆ ಸಾಹಿತ್ಯಿಕ ಪರಂಪರೆಯ ದೃಷ್ಟಿಯಿಂದ ಈ ಯಾವ ಭಾಷೆಗಳೂ ಇನ್ನಾವ ಭಾಷೆಗಳಿಗಿಂತಲೂ ಕಡಿಮೆ ಎಂದು ತಿಳಿಯಬಾರದು. ಈ ಸಂದರ್ಭ ಭಾಷೆಗಳ ಬಗೆಗಿನ ದೃಷ್ಟಿಕೋನಗಳನ್ನು ಸರಿಯಾಗಿ ವ್ಯಾಖ್ಯಾನಿಸುವ ಅಗತ್ಯವನ್ನು ಸೃಷ್ಟಿಸಿದೆ. ಯಾಕೆಂದರೆ ಯಾವ ಮಾನದಂಡಗಳನ್ನು ಆಧರಿಸಿ ಮತ್ತು ಯಾವ ಗುಣಗಳನ್ನು ಆರೋಪಿಸಿ ಭಾಷೆಗಳಿಗೆ ಸ್ಥಾನಮಾನಗಳನ್ನು ನೀಡಲಾಗುತ್ತದೋ, ಆ ಭಾಷೆಗಳ ಬಗೆಗಿನ ಮತ್ತು ಅಂತಹ ಸ್ಥಾನಮಾನಗಳನ್ನು ಪಡೆಯದ ಭಾಷೆಗಳ ಬಗೆಗಿನ ಮನೋಭಾವಗಳು ಮತ್ತು ಭಾಷಾ ಬೆಳವಣಿಗೆಯ ದಿಕ್ಕುಗಳು ವಿಭಿನ್ನವಾಗಿ ಬೆಳೆಯುತ್ತವೆ. ಲಿಪಿಸಹಿತವಾದ ಅಥವಾ ಲಿಪಿರಹಿತವಾದ ಯಾವ ಭಾಷೆಯೂ ತನ್ನಷ್ಟಕ್ಕೆ ತಾನೇ ಪರಿಪೂರ್ಣವೋ, ಅಪರಿಪೂರ್ಣವೋ ಅಲ್ಲ. ಹಾಗೆ ಸಾಹಿತ್ಯಿಕವಾಗಿ, ಲಿಖಿತವಾಗಿ ಬಳಕೆಯಾಗುವ ಅವಕಾಶಗಳು ಒತ್ತಾಸೆಗಳು ಲಭ್ಯವಾದರೆ, ತಾಂತ್ರಿಕತೆಗಳನ್ನು ಅಳವಡಿಸಿಕೊಂಡರೆ ಎಲ್ಲಾ ಭಾಷೆಗಳೂ ಎಲ್ಲಾ ಸಾಮರ್ಥ್ಯಗಳನ್ನು ಪಡೆದುಕೊಳ್ಳುತ್ತವೆ.

ಕನ್ನಡಕ್ಕೆ ಶಾಸ್ತ್ರೀಯ ಭಾಷಾಸ್ಥಾನಮಾನವನ್ನು ಪಡೆದುಕೊಂಡ ಈ ಸಂದರ್ಭದಲ್ಲಿ ಸಿದ್ಧಮಾದರಿಯ ಅಥವಾ ಸಂದರ್ಭದ ಒತ್ತಾಯದ ಹಿನ್ನೆಲೆಯಲ್ಲಿ ರೂಪುಗೊಂಡ ಸ್ಥಾನಮಾನಗಳ ವಿವರಣೆಗೆ ಅಂಟಿಕೊಳ್ಳಬೇಕೆ ಅಥವಾ ಶಾಸ್ತ್ರೀಯ ದಂತಹ ಪರಿಕಲ್ಪನೆಗಳನ್ನು ಮರುವ್ಯಾಖ್ಯಾನಿಸಿಕೊಳ್ಳಬೇಕೆ ಎಂಬ ಪ್ರಶ್ನೆಗಳು ಪ್ರಸ್ತುತವಾಗುತ್ತವೆ. ಕನ್ನಡಕ್ಕೆ ಶಾಸ್ತ್ರೀಯ ಭಾಷಾ ಸ್ಥಾನಮಾನಕ್ಕಾಗಿ ಮಾಡಿದ ಹೋರಾಟವನ್ನು ಭಾಷಿಕ ನ್ಯಾಯಕ್ಕಾಗಿ ನಡೆದ ಹೋರಾಟ ಎಂದು ಮಾತ್ರ ಅರ್ಥೈಸಿಕೊಳ್ಳುವುದು ಮತ್ತು ಕನ್ನಡ ಯಾವ ಭಾಷೆಗಿಂತಲೂ ಕಡಿಮೆಯಿಲ್ಲ. ಹಾಗೆಯೇ ಯಾವ ಭಾಷೆಗಳಿಗಿಂತಲೂ ಹೆಚ್ಚಲ್ಲ ಎನ್ನುವ ವಾಸ್ತವದ ನೆಲೆಯಲ್ಲಿ ಯೋಜನೆಗಳನ್ನು ರೂಪಿಸಬೇಕಾದ ಸಂದರ್ಭದಲ್ಲಿ ನಾವಿದ್ದೇವೆ.*

* ಸೌಜನ್ಯ: ನಮ್ಮ ಕನ್ನಡ, ಸಂಚಿಕೆ: ೬೫.

## ಭ್ರಮೆಯಿಂದ ಹೊರಬನ್ನಿ

ಕೇಂದ್ರ ಸರ್ಕಾರ ಶಾಸ್ತ್ರೀಯ ಸ್ಥಾನ-ಮಾನ ನೀಡಿದರೆ ಸಾಲದು, ರಾಜ್ಯ ಸರ್ಕಾರ ಕೂಡ ಕನ್ನಡ ಭಾಷೆ ಬೆಳೆಸುವ ಬಗ್ಗೆ ನಿಶ್ಚಿತ ನಿಲವು ಪ್ರಕಟಿಸಬೇಕು. ಜೊತೆಗೆ ರಾಜಕೀಯ ಇಚ್ಛಾಶಕ್ತಿ ಪ್ರದರ್ಶಿಸಬೇಕು. ಕೇಂದ್ರದಿಂದ ಬರುವ ಅಪಾರ ಪ್ರಮಾಣದ ನೆರವನ್ನು ಹೇಗೆ ಬಳಸಬೇಕು ಎನ್ನುವ ಯೋಜನೆ ಈಗಲೇ ರೂಪಿತವಾಗಲಿ.

ಡಾ. ಪಾಟೀಲ ಪುಟ್ಟಪ್ಪ

# ಅಭಿಜಾತ ಅನುದಾನ ದೊರಕದ್ದಕ್ಕೆ ಕಾರಣರ್‍ಯಾರು?



ಬಿ.ಆರ್. ಜಯರಾಮರಾಜೇ ಅರಸ್

'ಕನ್ನಡಪ್ರಭ' ದಿನಪತ್ರಿಕೆ ನಾಡು-ನುಡಿಯ ಬಗ್ಗೆ ತೋರಿಸುತ್ತಿರುವ ಕಾಳಜಿ ಪ್ರಶ್ನಾತೀತ. ಇದಕ್ಕಾಗಿ ಪತ್ರಿಕೆಗೆ ಅಭಿನಂದನೆಗಳು. ಭಾಷೆಗೆ ಸಂಬಂಧಿಸಿದಂತೆ ದಿನಾಂಕ ೧-೩-೨೦೧೦ರಂದು ತಮ್ಮ ಪತ್ರಿಕೆಯ ಮುಖಪುಟದಲ್ಲಿ "ಅಭಿಜಾತ ಅನುದಾನ ದೊರಕದ್ದಕ್ಕೆ ಕಾರಣರ್‍ಯಾರು?" ಎಂಬ ಶೀರ್ಷಿಕೆಯುಳ್ಳ ವರದಿ ಪ್ರಕಟವಾಗಿರುವುದು ಸರಿಯಷ್ಟೆ. ಈ ವರದಿಯ ಬಗ್ಗೆ ಸ್ಪಷ್ಟೀಕರಣ ನೀಡಲು ಇಚ್ಛಿಸುತ್ತೇನೆ. ೩೧-೧೦-೨೦೦೮ರಂದು ಕೇಂದ್ರ ಸರ್ಕಾರದ ಸಂಸ್ಕೃತಿ ಇಲಾಖೆ ಕನ್ನಡ ಭಾಷೆಗೆ ಶಾಸ್ತ್ರೀಯ ಭಾಷೆಯ ಸ್ಥಾನಮಾನವನ್ನು ನೀಡಿ, ಅಧಿಸೂಚನೆ ಹೊರಡಿಸಿದೆ. ಈ ಅಧಿಸೂಚನೆ ಚೆನ್ನೈ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿರುವ ರಿಟ್ ಅರ್ಜಿಯ ಸಂಖ್ಯೆ: ೧೮೮೧೧ರ ತೀರ್ಪಿಗೆ ಒಳಪಟ್ಟಿದೆ ಎಂದು ಅಧಿಸೂಚನೆಯಲ್ಲಿ ನಮೂದಿಸಿದೆ. ಈ ಘೋಷಣೆಯಾದ ನಂತರ ರಾಜ್ಯದ ಮುಖ್ಯಮಂತ್ರಿಗಳು ೩೦-೧೨-೨೦೦೮ ರಂದು ಪ್ರಧಾನ ಮಂತ್ರಿಗಳಿಗೆ ಪತ್ರ ಬರೆದು ಶಾಸ್ತ್ರೀಯ ಭಾಷೆಗೆ ಸಲ್ಲಬೇಕಾದ ಸೌಲಭ್ಯಗಳನ್ನು ನೀಡುವಂತೆ ಕೋರಿರುತ್ತಾರೆ. ಪುನಃ ರಾಜ್ಯದ ಮುಖ್ಯಮಂತ್ರಿಗಳು ೨೯-೧೦-೨೦೦೯ರಂದು ಪ್ರಧಾನ ಮಂತ್ರಿಗಳಿಗೆ ಪತ್ರ ಬರೆದು ಸೌಲಭ್ಯ ನೀಡುವ ಬಗ್ಗೆ ಹಾಗೂ ಇದಕ್ಕಾಗಿ ಸ್ಟ್ಯಾಂಡಿಂಗ್ ಫೈನಾನ್ಸ್ ಕಮಿಟಿ ರಚಿಸಲು ಸಂಬಂಧಪಟ್ಟ ಇಲಾಖೆಗೆ ಸೂಚನೆ ನೀಡಲು ಹಾಗೂ ಅಧಿಕೃತ ಅಧಿಸೂಚನೆಯನ್ನು ಹೊರಡಿಸಲು ಕೋರಿರುತ್ತಾರೆ. ಕಿನೇ ಬಾರಿಗೆ ೧೧-೦೨-೨೦೧೦ ರಂದು ರಾಜ್ಯದ ಮುಖ್ಯಮಂತ್ರಿಗಳು ಪ್ರಧಾನ ಮಂತ್ರಿಗಳಿಗೆ ಪತ್ರ ಬರೆದು ಶಾಸ್ತ್ರೀಯ ಭಾಷೆಗೆ ಸಲ್ಲಬೇಕಾದ ಅನುದಾನ ಮತ್ತು ಸೌಲಭ್ಯಗಳನ್ನು ಕನ್ನಡ ಭಾಷೆಗೆ ನೀಡುವಂತೆ ಕೋರಿರುತ್ತಾರೆ.

ಈ ಮೂರು ಪತ್ರಗಳಿಗೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರಕ್ಕೆ ಇದುವರೆಗೂ ಯಾವುದೇ ಉತ್ತರ ಬಂದಿರುವುದಿಲ್ಲ ಅಥವಾ ಯಾವುದೇ ನಿರ್ದೇಶನಗಳನ್ನು ನೀಡಿರುವುದಿಲ್ಲ. ಕನ್ನಡ ಭಾಷೆಗೆ ಶಾಸ್ತ್ರೀಯ ಭಾಷೆ ಸ್ಥಾನಮಾನ ನೀಡಿದೆ ಎಂದು ಘೋಷಣೆ ಮಾಡಿದ್ದರೂ ಕೇಂದ್ರ ಸರ್ಕಾರ ಅಧಿಕೃತವಾಗಿ ಅಧಿಸೂಚನೆಯನ್ನು ಇದುವರೆಗೂ ಹೊರಡಿಸಿರುವುದಿಲ್ಲ. ಕೇಂದ್ರ ಸರ್ಕಾರದ ಸಚಿವ ಸಂಪುಟ ಕನ್ನಡ ಭಾಷೆಗೆ ಶಾಸ್ತ್ರೀಯ ಭಾಷೆಯ ಸ್ಥಾನಮಾನ ನೀಡಲು ತೀರ್ಮಾನ ತೆಗೆದುಕೊಂಡ ನಂತರ ಸಚಿವ ಸಂಪುಟದ ತೀರ್ಮಾನಕ್ಕೆ ಅನುಗುಣವಾಗಿ ಗೆಜೆಟ್

ನೋಟಿಫಿಕೇಷನ್ ಹೊರಡಿಸಿದ ನಂತರ ಮುಂದಿನ ಕ್ರಮ ಕೈಗೊಳ್ಳಲು ಕೇಂದ್ರ ಸರ್ಕಾರವು ಒಂದು ಸ್ಥಾಯಿ ಆರ್ಥಿಕ ಸಮಿತಿಯನ್ನು ರಚಿಸಿ ಕ್ರಿಯಾ ಯೋಜನೆಯನ್ನು ರಚಿಸಲು ಸೂಚಿಸಬೇಕಾಗಿದೆ. ನಂತರ ಯೋಜನಾ ಇಲಾಖೆಯ ಅನುಮೋದನೆ ಪಡೆದು, ಅಂತಿಮವಾಗಿ ಕೇಂದ್ರ ಸರ್ಕಾರದ ಗೃಹ ಇಲಾಖೆ ತನ್ನ ಅನುಮೋದನೆಯೊಂದಿಗೆ ಅಧಿಕೃತವಾಗಿ ಅಧಿಸೂಚನೆ ಹೊರಡಿಸಬೇಕಾಗುತ್ತದೆ. ಈ ಪ್ರಕ್ರಿಯೆಗಳು ಕೇಂದ್ರ ಸರ್ಕಾರದಲ್ಲಿ ಜರುಗಬೇಕಾಗುತ್ತದೆ. ಆದಾಗ್ಯೂ ರಾಜ್ಯ ಸರ್ಕಾರ ಕೇಂದ್ರ ಸರ್ಕಾರ ಶಾಸ್ತ್ರೀಯ ಭಾಷೆ ಸ್ಥಾನಮಾನವನ್ನು ಕನ್ನಡಕ್ಕೆ ನೀಡಿದ ಹಿನ್ನೆಲೆಯಲ್ಲಿ ಭಾಷೆಯ ಬೆಳವಣಿಗೆಗೆ ಅನುಕೂಲವಾಗುವಂತೆ ರಾಜ್ಯದ ೧೧ ವಿಶ್ವವಿದ್ಯಾಲಯಗಳಿಗೆ ೩೩.೦೦ ಕೋಟಿ ರೂ. ಅನುದಾನವನ್ನು ಘೋಷಣೆ ಮಾಡಿದ್ದಲ್ಲದೇ ವಿಶ್ವವಿದ್ಯಾನಿಲಯಗಳಿಂದ ಭಾಷೆಯ ಅಭಿವೃದ್ಧಿ ಬಗ್ಗೆ ಕ್ರಿಯಾ ಯೋಜನೆಗಳನ್ನು ತರಿಸಿಕೊಂಡು ಸಚಿವ ಸಂಪುಟದ ಅನುಮೋದನೆ ಪಡೆದು ಉನ್ನತ ಶಿಕ್ಷಣ ಇಲಾಖೆ ಮುಖಾಂತರ ೧೧.೦೦ ಕೋಟಿ ರೂ.ಗಳ ಅನುದಾನವನ್ನು ೧೧ ವಿಶ್ವವಿದ್ಯಾಲಯಗಳಿಗೆ ಬಿಡುಗಡೆ ಮಾಡಿದೆ. ಇದು ಅಲ್ಲದೆ ಸರ್ಕಾರ ಬೇರೆಬೇರೆ ವಿಶ್ವವಿದ್ಯಾಲಯಗಳ ಜೊತೆಗೆ ಸಂಪರ್ಕ ಇಟ್ಟುಕೊಂಡು ವಿಚಾರ ಸಂಕಿರಣ, ಕಾರ್ಯಾಗಾರ ಇತ್ಯಾದಿಗಳನ್ನು ಶಾಸ್ತ್ರೀಯ ಭಾಷೆಗೆ ಸಂಬಂಧಿಸಿದಂತೆ ನಡೆಸಿ ಕ್ರಿಯಾ ಯೋಜನೆಯನ್ನು ಸಿದ್ಧಪಡಿಸಿಕೊಂಡು ಅದನ್ನು ತಕ್ಷಣ ಕೇಂದ್ರ ಸರ್ಕಾರಕ್ಕೆ ಕಳುಹಿಸುತ್ತದೆ. ಆದರೆ ಕೇಂದ್ರ ಸರ್ಕಾರದಿಂದ ಕ್ರಿಯಾ ಯೋಜನೆ ರೂಪಿಸಲಾಗಲಿ ಅಥವಾ ವರದಿಗಳನ್ನು ನೀಡಲು ಯಾವುದೇ ರೀತಿಯ ಸೂಚನೆಗಳು ರಾಜ್ಯ ಸರ್ಕಾರಕ್ಕೆ ಬಂದಿರುವುದಿಲ್ಲ.

ಮೇಲೆ ತಿಳಿಸಿದ ಪ್ರಕ್ರಿಯೆ ಕೇಂದ್ರ ಸರ್ಕಾರದ ಮಟ್ಟದಲ್ಲಿ ನಡೆಯದೇ, ಅಧಿಸೂಚನೆ ಹೊರಬೀಳದೇ ಕ್ರಿಯಾ ಯೋಜನೆ ತಯಾರಿಸಲು ಬರುವುದಿಲ್ಲ. ಇದರಂತೆ ಅಧಿಕೃತವಾಗಿ ಕೆಲಸ ನಿರ್ವಹಿಸಲು ಬರುವುದಿಲ್ಲ. ಇದಕ್ಕೆ ಸಂಬಂಧಪಟ್ಟಂತೆ ೧. ೩೧.೧೦.೨೦೦೮ ರಂದು ಕೇಂದ್ರ ಸರ್ಕಾರ ಕನ್ನಡಕ್ಕೆ ಶಾಸ್ತ್ರೀಯ ಭಾಷೆ ಸ್ಥಾನಮಾನ ನೀಡಿ ಹೊರಡಿಸಿರುವ ಅಧಿಸೂಚನೆ ಪ್ರತಿ ೨. ಸನ್ಮಾನ್ಯ ಮುಖ್ಯಮಂತ್ರಿಗಳು ೩೧.೧೨.೨೦೦೮ರಂದು ಪ್ರಧಾನ ಮಂತ್ರಿಗಳಿಗೆ ಬರೆದ ಪತ್ರದ ಪ್ರತಿ ೩. ಸನ್ಮಾನ್ಯ ಮುಖ್ಯಮಂತ್ರಿಗಳು ೨೯.೧೦.೨೦೦೮ರಂದು ಪ್ರಧಾನ ಮುಖ್ಯಮಂತ್ರಿಗಳಿಗೆ ಬರೆದ ಪತ್ರದ ಪ್ರತಿ ೪. ೧೧.೦೨.೨೦೧೦ರಂದು ಸನ್ಮಾನ್ಯ ಮುಖ್ಯಮಂತ್ರಿಗಳು ಪ್ರಧಾನ ಮಂತ್ರಿಗಳಿಗೆ ಶಾಸ್ತ್ರೀಯ ಭಾಷೆಗೆ ಸಲ್ಲಬೇಕಾದ ಸೌಲಭ್ಯ ಒದಗಿಸಲು ಕೋರಿ ಬರೆದ ಪತ್ರದ ಪ್ರತಿ ೫. ಹಂಪಿ ವಿಶ್ವವಿದ್ಯಾನಿಲಯ ಹೊರತರುತ್ತಿರುವ "ನಮ್ಮ ಕನ್ನಡ" ೬೫ನೇ ಸಂಚಿಕೆಯ ಶೀರ್ಷಿಕೆ "ಕನ್ನಡ ಶಾಸ್ತ್ರೀಯ ಭಾಷೆ: ಅಡಿ ಇಡುವ ಮುನ್ನ" ಎಂಬ ಶೀರ್ಷಿಕೆಯುಳ್ಳ ಲೇಖನದ ಪುಟ ೮, ೯ರಲ್ಲಿ ಕೇಂದ್ರ ಸರ್ಕಾರ ಅನುಸರಿಸಬೇಕಾದ ವಿಚಾರಗಳ ಬಗ್ಗೆ ಚರ್ಚೆ ಮಾಡಿದೆ. ಅದರ ಪ್ರತಿ– ಇವುಗಳನ್ನು ಮಾಹಿತಿಗಾಗಿ ಕಳುಹಿಸಿ ಕೊಡಲಾಗಿದೆ.*

* ಸೌಜನ್ಯ: ಕನ್ನಡ ಪ್ರಭ, ೯.೩.೨೦೧೦.

## ಖುಷಿ ತಂದಿದೆ

ರಾಜ್ಯೋತ್ಸವದ ಮುನ್ನಾ ದಿನ ಕೇಂದ್ರ ಸರ್ಕಾರದ ಘೋಷಣೆ ಖುಷಿ ತಂದಿದೆ. ತಮಿಳರ ಸಂಕುಚಿತ ಮನೋಭಾವದಿಂದ ಇಷ್ಟು ದಿನ ತಡವಾಯಿತು. ಭಾಷೆಗಳು ತಾವು ಬೆಳೆಯಬೇಕು, ಮತ್ತೊಂದು ಭಾಷೆಯ ಬೆಳವಣಿಗೆಗೆ ಅಡ್ಡಿಯಾಗಬಾರದು. ಈ ಸ್ಥಾನದಿಂದ ಬರುವ ಅನುದಾನಗಳನ್ನು ಉತ್ತಮವಾಗಿ ಬಳಸಿಕೊಳ್ಳಬೇಕು. ತಮಿಳಿಗೆ ನೀಡುವಷ್ಟೇ ಅನುದಾನ ಎಲ್ಲರಿಗೂ ನೀಡಬೇಕು.

ಡಾ. ಚೆನ್ನವೀರ ಕಣವಿ

## ಶಾಸ್ತ್ರೀಯ ಭಾಷೆ

# ಕನ್ನಡದ ಮುಂದಿರುವ ಸವಾಲು


ಕಿಕ್ಕೇರಿ ನಾರಾಯಣ

ಕನ್ನಡಕ್ಕೆ ಶಾಸ್ತ್ರೀಯ (ಅಭಿಜಾತ) ಭಾಷೆಯ ಸ್ಥಾನ ಸಿಕ್ಕಿರುವುದು ಸಂತೋಷದ ಮತ್ತು ಸಂಕಟದ ವಿಷಯ. ಸಂತೋಷ ಏಕೆಂದರೆ ಕನ್ನಡದ ಹಿರಿಮೆ, ಹಳಮೆ, ಉತ್ಕೃಷ್ಟತೆಗಳನ್ನು ಭಾರತ ಸರಕಾರವು ಕೊನೆಗೂ ಗುರುತಿಸಿರುವುದು. ಸಂಕಟದ ವಿಷಯವೇಕೆಂದರೆ ಕಾನೂನಿನ ನೆವ ಒಡ್ಡಿ ಶಾಸ್ತ್ರೀಯ ಸ್ಥಾನವನ್ನು ತಡೆಗಟ್ಟಿರುವುದು. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಈಗ ನಾವಿದ್ದೇವೆ. ಈ ಹಿನ್ನೆಲೆಯಲ್ಲಿ ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನಮಾನಕ್ಕೆ ಹೋರಾಡಿದ ವಿದ್ವಾಂಸರ ಮತ್ತು ಕರ್ನಾಟಕ ಸರಕಾರದ ಕೈಗೆ ಸಕ್ಕರೆ ಕಡ್ಡಿಯನ್ನು ಚೀಪಲು ಕೊಟ್ಟಂಥ ಪರಿಸ್ಥಿತಿಯಲ್ಲಿ ನಾವಿದ್ದೇವೆ.

ಒಂದು ಸಂಗತಿಯನ್ನು ನಾನಿಲ್ಲಿ ಸ್ಪಷ್ಟಪಡಿಸಬೇಕು. ಶಾಸ್ತ್ರೀಯ ಭಾಷೆ ಎಂದರೆ ಸಾಹಿತ್ಯ, ಅದರಲ್ಲೂ ಹಳೆಗನ್ನಡ ಸಾಹಿತ್ಯ ಎಂಬ ಸಾಮಾನ್ಯ ನಂಬಿಕೆಯೊಂದು ನಮ್ಮ ವಿದ್ವಾಂಸರಲ್ಲಿ ಮನೆಮಾಡಿದಂತೆ ತೋರುತ್ತಿದೆ. ಇನ್ನೊಂದಿಷ್ಟು ಹಿಂದಕ್ಕೆ ಹೋಗಿ ಶಾಸನಗಳ ಮೂಲಕ ನಮ್ಮ ಭಾಷೆಯ ಹಳಮೆಯನ್ನು ಗುರುತಿಸಿಯಾರು. ಆದರೆ ಇಷ್ಟಕ್ಕೇ ನಮ್ಮ ಚಿಂತನೆ ನಿಂತುಬಿಡಬಾರದು. ನಮ್ಮ ಚಿಂತನೆಯನ್ನು ಇನ್ನೂ ವಿಸ್ತಾರಕ್ಕೆ ಕೊಂಡೊಯ್ಯುವ ಮತ್ತು ಆ ಮೂಲಕ ಕನ್ನಡ ಸಂಸ್ಕೃತಿಯನ್ನು ಸಂಪೂರ್ಣವಾಗಿ ಪುನರ್ ರಚಿಸುವ ಕೆಲಸವಾಗಬೇಕಾಗಿದೆ. ಇದಕ್ಕಾಗಿ ನಮ್ಮ ಸಂಶೋಧನಾ ನೆಲೆಗಳು ಬೇರೆಯಾಗಬೇಕಾಗಿದೆ.

ಹೊಸ ಚಾರಿತ್ರಿಕತೆಯ ಹಿನ್ನೆಲೆಯಲ್ಲಿ ಕನ್ನಡದ ಸಾಂಸ್ಕೃತಿಕ, ರಾಜಕೀಯ ಮತ್ತು ಸಾಮಾಜಿಕ ಪರಿಕಲ್ಪನೆಗಳನ್ನು ಪುನರ್ ಸ್ಥಾಪಿಸಬೇಕಾಗಿದೆ. ಪ್ರಮುಖವಾಗಿ ಭೂತವನ್ನು ವರ್ತಮಾನದ ಜೀವನ ಕ್ರಮಕ್ಕೆ, ಲೋಕದೃಷ್ಟಿಗೆ ಅನ್ವಯವಾಗುವಂತೆ ನಾವು ಸಂಶೋಧನೆ ಕೈಗೊಳ್ಳದಿದ್ದರೆ ಹಳಮೆಯ ಗರಿಮೆಗೆ ಯಾವ ಬೆಲೆಯೂ ಇರುವುದಿಲ್ಲ. ಇವೆರಡು ದೃಷ್ಟಿಕೋನಗಳು ಸೇರಿದಾಗ ನಾವು ಭವಿಷ್ಯದ ಕಡೆಗೆ ಮುನ್ನೋಟ ಹರಿಸಬಹುದು. ಇದಾಗದಿದ್ದರೆ ಈ ಸಂಶೋಧನೆಗಳು ಕೇವಲ ಶೈಕ್ಷಣಿಕ ಕವಾಯತು ಮಾತ್ರವಾಗುವ ಸಂಭವವೇ ಹೆಚ್ಚು. ಇದಕ್ಕಾಗಿ ನಾವು ಕನ್ನಡದ್ದೇ ಆದ ಜ್ಞಾನ ಶಾಖೆಗಳನ್ನು ಅಧ್ಯಯನ ಮಾಡಬೇಕಾಗುತ್ತದೆ.ಅಲ್ಲದೆ ಅವುಗಳನ್ನು ಸಮಗ್ರ ಬದುಕಿನ ಪರಿಕಲ್ಪನೆಯೊಂದಿಗೆ ಬೆಸೆಯಬೇಕಾಗುತ್ತದೆ.

ಶಾಸ್ತ್ರೀಯ ಭಾಷಾ ಅಧ್ಯಯನವೆಂದರೆ ಕನ್ನಡದ ಬರಹ ಸಂಸ್ಕೃತಿಯನ್ನು ಅಧ್ಯಯನ ಮಾಡುವಷ್ಟೇ ಮುಖ್ಯವಾಗಿ ಮೌಖಿಕ ಸಂಪ್ರದಾಯವನ್ನು ಅಧ್ಯಯನ ಮಾಡಬೇಕಾಗುತ್ತದೆ. ಏಕೆಂದರೆ ಕನ್ನಡ ಸಾಹಿತ್ಯ ಸೃಷ್ಟಿ ಈ ಎರಡೂ ಪ್ರಕಾರಗಳಲ್ಲಿ ಆಗಿದೆ. ಹಾಗಾಗಿ ಮೌಖಿಕ ಮತ್ತು ಲಿಖಿತ ಸಾಂಸ್ಕೃತಿಕ ಪಠ್ಯಗಳ ಪೂರಕ ಅಧ್ಯಯನ ಅಗತ್ಯ. ನಮ್ಮಲ್ಲಿ ವಿಶ್ವವಿದ್ಯಾಲಯಗಳು ಬರುವವರೆಗೂ ಈ ಭೇದ ಇರಲಿಲ್ಲ. ಬರಹ ಸಂಸ್ಕೃತಿಯು ಮೌಖಿಕ ಸಂಸ್ಕೃತಿಯ ಒಂದು ಅಂಗವಾಗಿಯೇ ಕೆಲಸ ಮಾಡುತ್ತಿತ್ತು.

ನಮ್ಮ ಹೆಚ್ಚಿನ ಜ್ಞಾನ ಶಾಖೆಗಳಾದ ಜ್ಯಾಮಿತಿ ಶಾಸ್ತ್ರ, ವೈದ್ಯಶಾಸ್ತ್ರ, ಖಗೋಳಶಾಸ್ತ್ರ ಇವೆಲ್ಲವು ಕನ್ನಡದಲ್ಲಿರುವುದು ನಮಗೆ ಗೊತ್ತಿದೆ. ತಲೆತಲಾಂತರದಿಂದ ಇವು ಮೌಖಿಕ ಪರಂಪರೆಯಲ್ಲಿ ಗುರುವಿನಿಂದ ಶಿಷ್ಯನಿಗೆ ಹರಿದು ಬಂದಿವೆ. ಈ ರೀತಿಯ ಜ್ಞಾನ ಪ್ರಸಾರ ಹೇಗೆ ಆಗುತ್ತಿತ್ತು ಎಂಬುದನ್ನು ನಾವು ಕಂಡುಹಿಡಿದುಕೊಳ್ಳಬೇಕಾಗಿದೆ. ಇದರ ಜತೆಗೆ ಹಲವಾರು ಬರಹ ರೂಪದಲ್ಲಿರುವ ಪುಸ್ತಕಗಳು ಲಭ್ಯವಿದೆ. ಇವುಗಳನ್ನು ಅಧ್ಯಯನ ಮಾಡಲು ಹಳೆಗನ್ನಡದ ಪ್ರವೇಶ ಅತ್ಯಂತ ಜರೂರಿನಲ್ಲಿ ಆಗಬೇಕಾಗಿದೆ; ಏಕೆಂದರೆ ನಮ್ಮ ವಿಶ್ವವಿದ್ಯಾಲಯಗಳಲ್ಲಿ ಈಗ ಹಳೆಗನ್ನಡ ಕಲಿಸುವ ಅಧ್ಯಾಪಕರು ಸಿಗುವುದೇ ದುಸ್ತರ.

ನಮ್ಮ ವಿಶ್ವವಿದ್ಯಾಲಯಗಳಲ್ಲಿ ಅಂತರ್‌ಶಿಸ್ತೀಯ ಅಧ್ಯಯನಗಳು ನಡೆಯುತ್ತಲೇ ಇಲ್ಲ. ಇಷ್ಟೇ ಅಲ್ಲದೆ ವೈದ್ಯಕೀಯ, ಎಂಜನಿಯರಿಂಗ್ ವ್ಯಾಸಂಗದಲ್ಲಿ ಸಂಬಂಧಪಟ್ಟ ಸ್ಥಳೀಯ ಜ್ಞಾನ ಶಾಖೆಗಳ ಅಧ್ಯಯನಕ್ಕೆ ಅವಕಾಶ ಇರಬೇಕು. ಒಬ್ಬ ಎಂಜನಿಯರ್ ನಮ್ಮ ಪುರಾತನರ ನಗರ ಯೋಜನೆ, ದೇವಸ್ಥಾನಗಳನ್ನು ಕಟ್ಟಲು ಬಳಸುತ್ತಿದ್ದ ತಂತ್ರಜ್ಞಾನ, ಕೋಟೆ ಕೊತ್ತಲಗಳನ್ನು ರೂಪಿಸಿರುವುದರ ಹಿಂದಿರುವ ಪ್ರಬುದ್ಧ ತಿಳಿವಳಿಕೆ ಮತ್ತು ತಾಂತ್ರಿಕ ಕೌಶಲ, ಇವುಗಳನ್ನು ಅಧ್ಯಯನ ಮಾಡಲು ಸಾಧ್ಯವಾಗಲು ಹಳೆಗನ್ನಡ ಅಧ್ಯಯನ ಮಾಡಬೇಕಾಗುತ್ತದೆ. ಈ ರೀತಿ ಅಧ್ಯಯನ ಮಾಡಿ, ಸಂಶೋಧನೆಗಳನ್ನು ನಡೆಸಿ ಸದ್ಯಕ್ಕೆ ಅದನ್ನು ಹೇಗೆ ಬಳಸಬಹುದು ಎಂಬುದನ್ನು ಕಂಡುಕೊಂಡರೆ ಆಗ ಕನ್ನಡದ ಎಂಜನಿಯರಿಂಗ್ ಸಾಧ್ಯವಾಗುತ್ತದೆ. ಅಲ್ಲದೆ ಕನ್ನಡದ್ದೇ ಪದಗಳು, ಪರಿಕಲ್ಪನೆಗಳು ನಮಗೆ ದೊರೆಯುತ್ತವೆ. ಅಂತೆಯೇ ವೈದ್ಯಕೀಯ ಶಾಸ್ತ್ರದಲ್ಲಿ ಗಜಶಾಸ್ತ್ರ, ಅಶ್ವಶಾಸ್ತ್ರ, ಪ್ರಾಣಿಶಾಸ್ತ್ರ, ಸಸ್ಯಶಾಸ್ತ್ರ ಮುಂತಾದವುಗಳ ಅಧ್ಯಯನವೂ ಹೆಚ್ಚು ಪ್ರಯೋಜನಕಾರಿಯಾಗಬಲ್ಲದು.

ಇತ್ತೀಚೆಗೆ ನಡೆಯುತ್ತಿರುವ ಸಂಶೋಧನೆಗಳಲ್ಲಿ ಪುರಾತತ್ತ್ವಶಾಸ್ತ್ರ ಮುಂಚೂಣಿಯಲ್ಲಿದೆ. ಕರ್ನಾಟಕದ ನೆಲದಲ್ಲಿ ಅದರಲ್ಲೂ ಬಾದಾಮಿಯಿಂದ ರಾಯಚೂರಿನವರೆಗೆ ಇರುವ ಪ್ರದೇಶದಲ್ಲಿ ಆಗುತ್ತಿರುವ ಸಂಶೋಧನೆಯಂತೆ ಕನ್ನಡ ನೆಲದಲ್ಲಿ ಸುಮಾರು ಇಪ್ಪತ್ತು ಸಾವಿರ ವರ್ಷಗಳಿಗಿಂತಲೂ ಹಿಂದೆ ಜನರು ವಾಸಿಸುತ್ತಿದ್ದರು. ಗುಹಾಂತರ ಕಲೆಗಳಿಂದ, ಬೂದಿ ಗುಡ್ಡೆಯ ಅಧ್ಯಯನದಿಂದ ಈ ಅಂಶ ತುಂಬ ಸ್ಪಷ್ಟವಾಗಿಯೇ ತಿಳಿದುಬಂದಿದೆ. ಇಷ್ಟು ಹಳೆಯ ಸಂಸ್ಕೃತಿ ದಕ್ಷಿಣ ಭಾರತದಲ್ಲಿ ಎಲ್ಲೂ ಇನ್ನೂ ಕಂಡುಬಂದಿಲ್ಲ. ಅಂದರೆ ಪ್ರಾಯಶಃ ಕರ್ನಾಟಕದ ಈ ಭಾಗ ಇಡೀ ದಕ್ಷಿಣ ಭಾರತದ ಸಂಸ್ಕೃತಿಯ ಕೇಂದ್ರ ಸ್ಥಾನದಲ್ಲಿ ನಿಲ್ಲುವ ಸಾಧ್ಯತೆ ಇದೆ. ಇಲ್ಲಿಂದ ದಕ್ಷಿಣ ಪ್ರಸ್ಥಭೂಮಿಯ ಬೇರೆ ಬೇರೆ ಭಾಗಗಳಿಗೆ ಜನರು ವಲಸೆ ಹೋಗಿರಬಹುದು. ಇವೆಲ್ಲವು ಬೂದಿಗುಡ್ಡೆಯಲ್ಲಿ ದೊರೆತ ರಾಗಿ, ಹುರುಳಿ ಮುಂತಾದ ಕಾಳುಗಳನ್ನು ಡಿಎನ್‌ಎ ಪರೀಕ್ಷೆಗೆ ಒಳಪಡಿಸಿರುವುದರಿಂದ ಖಚಿತವಾಗಿದೆ. ಈ ಸಂಶೋಧನಾ ಫಲಿತಾಂಶ ನಮ್ಮ ಮುಂದೆ ಇನ್ನೂ ಅನೇಕ ಮಹತ್ವದ ಸಂಗತಿಗಳನ್ನು ಮಂಡಿಸುವ ಸಾಧ್ಯತೆಯೂ ಇದೆ. ಮನುಷ್ಯನು ಮೂಲದಲ್ಲಿ ಪ್ರಕೃತಿಯನ್ನು ಸಂಸ್ಕೃತಿಯನ್ನಾಗಿ ಪರಿವರ್ತಿಸಿಕೊಳ್ಳುವ ಕಲೆಯನ್ನು ಅರಿತಿದ್ದ ಎಂಬುದಂತೂ ಸ್ಪಷ್ಟ ಇದು ಸಣ್ಣ ಸಂಗತಿಯೇನೂ ಅಲ್ಲ.

ಕನ್ನಡಕ್ಕೆ ಶಾಸ್ತ್ರೀಯ ಭಾಷೆಯನ್ನು ಕೊಡುವಲ್ಲಿ ಅಡ್ಡಿಯಾಗಿರುವ ಕಾನೂನಿನ ತೊಡಕುಗಳು ನಿವಾರಣೆಯಾಗುತ್ತವೆ ಎಂಬುದರಲ್ಲಿ ಸಂದೇಹವೇ ಇಲ್ಲ. ಆದರೆ ನಮ್ಮ ಉತ್ಸಾಹ ಅಲ್ಲಿಗೇ ನಿಲ್ಲಬಾರದು.

ಕನ್ನಡ ಶಾಸ್ತ್ರೀಯ ಭಾಷೆಯ ಕೆಲಸ ಯಾವ ದಿಕ್ಕಿನಲ್ಲಿ ಸಾಗಬೇಕು ಎಂಬುದನ್ನು ವಿವರವಾಗಿ ವಿಶ್ಲೇಷಿಸಿ, ಸಂಶೋಧನೆ ಹಾದಿಯನ್ನು ಕಂಡುಕೊಳ್ಳಬೇಕಾದುದು ನಮ್ಮ ವಿದ್ವಾಂಸರ, ಚಿಂತಕರ ಮುಂದಿರುವ ಮಹತ್ವದ ಸವಾಲು. ಹಾಗೆಯೇ ಉಪಭಾಷಾ ನಿಘಂಟುಗಳು, ವೃತ್ತಿ ನಿಘಂಟುಗಳು ಹೀಗೆ ಕೆಲವು ಮುಖ್ಯ ನಿಘಂಟುಗಳು ರೂಪಗೊಳ್ಳಬೇಕು. ನಮ್ಮ ಪುರಾತನ ಸಂಸ್ಕೃತಿಯಲ್ಲಿ ಅಡಗಿರುವ ವಿಜ್ಞಾನ ಮತ್ತು ತಂತ್ರಜ್ಞಾನಗಳನ್ನು ಅರಿತು, ವಿಶ್ಲೇಷಿಸುವ ದಿಕ್ಕಿನಲ್ಲಿಯೂ ಕೆಲಸವಾಗಬೇಕು. ಈ ಜ್ಞಾನವನ್ನು ಕುರಿತಂತ ಹೊತ್ತಗೆಗಳೂ ಕನ್ನಡದಲ್ಲಿ ಪ್ರಕಟವಾಗಬೇಕು. ಹಾಗಾದಾಗಲೇ ಕನ್ನಡದ ಭವ್ಯ ಸೌಧವನ್ನು ಕಟ್ಟಲು ಸಾಧ್ಯವಾಗುವುದು. ಮುಂದಿನ ತಲೆಮಾರು ಸಹ ಉತ್ಸಾಹದಿಂದ ಈ ಕೆಲಸವನ್ನು ಮುಂದುವರಿಸಿಕೊಂಡು ಹೋಗುವುದಕ್ಕೂ ಈ ಬಗೆಯ ಕಾರ್ಯಗಳು ನೆರವು ನೀಡುತ್ತವೆ. ಈ ಎಲ್ಲ ಹಿನ್ನೆಲೆಯಲ್ಲಿ ಮಹತ್ವದ ಯೋಜನೆಗಳು ರೂಪುಗೊಳ್ಳಬೇಕು. ಹತ್ತಾರು ಮನಸ್ಸುಗಳು ಒಂದುಗೂಡಿ ಸೃಜನಶೀಲವಾಗಿ ಕೆಲಸ ಮಾಡಬೇಕು. ಹಾಗಾದಾಗಲೇ ಕನ್ನಡದ ಮುನ್ನಡೆಗೆ ಹೊಸ ಆಯಾಮ ದೊರಕುತ್ತದೆ. ಪಂಪನ ಒಂದು ಮಾತನ್ನು ಉಲ್ಲೇಖಿಸುವುದಾದರೆ ದೇಸಿಯೊಳ್ ಪುಗುವುದು, ಪೊಕ್ಕು ಮಾರ್ಗದೊಳ್ ತಳ್ವುದು..

ದೇಸೀ – ಮಾರ್ಗ ಒಂದಾದಾಗಲೇ ಕನ್ನಡಕ್ಕೆ ಕಿರೀಟ, ಗರಿಮೆ.*

* ಸೌಜನ್ಯ: ವಿಜಯ ಕರ್ನಾಟಕ, ೨೧-೨-೨೦೧೦.
ಕನ್ನಡ ಸಾಹಿತ್ಯ ಸಮ್ಮೇಳನದ
ಗೋಷ್ಠಿಯಲ್ಲಿ ಮಂಡಿಸಿದ ಪ್ರಬಂಧದ ಸಾರಸಂಗ್ರಹ.

## ಔಚಿತ್ಯಪೂರ್ಣ ನಿರ್ಧಾರ

ಕೇಂದ್ರ ತಡವಾದರೂ ಔಚಿತ್ಯಪೂರ್ಣ ನಿರ್ಧಾರ ಪ್ರಕಟಿಸಿದೆ. ರಾಜಕೀಯ ಕಾರಣಗಳಿಗಾಗಿ ತಡ ಮಾಡಿದ ಸರ್ಕಾರವು ಈಗಲಾದರೂ ಕನ್ನಡದ ಪ್ರಾಚೀನತೆಗೆ ಮಣಿದಿರುವುದು ಅಭಿನಂದನೀಯ. ಕನ್ನಡ ತುಂಬಾ ಪ್ರಾಚೀನತೆ ಹೊಂದಿದ್ದರೂ ರಾಷ್ಟ್ರ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ಬೆಳೆಸುವ ಕೆಲಸ ಹಾಕಿಕೊಳ್ಳಬೇಕು. ಕನ್ನಡ ಸಾಹಿತ್ಯ ಕುರಿತ ಸಂಶೋಧನೆ, ಭಾಷೆ ಬೆಳವಣಿಗೆಗೆ ಇದು ಪೂರಕವಾಗಲಿ.

ಡಾ. ಎಂ.ಎಂ. ಕಲಬುರ್ಗಿ

# ಶಾಸ್ತ್ರೀಯ ಭಾಷೆಗಳು: ಒಂದು ಟಿಪ್ಪಣಿ



ಡಾ. ಪುರುಷೋತ್ತಮ ಬಿಳಿಮಲೆ

### ಶಾಸ್ತ್ರೀಯ ಪರಿಭಾಷೆ

೨೦೦೮ರ ಅಕ್ಟೋಬರ ೩೧ರಂದು ಕೇಂದ್ರ ಸರಕಾರವು ಒಲ್ಲದ ಮನಸಿನಿಂದ ಕನ್ನಡವನ್ನು 'ಶಾಸ್ತ್ರೀಯ ಭಾಷೆ' ಎಂದು ಘೋಷಿಸಿತು. ಹಾಗೆ ಘೋಷಿಸುವಾಗ ಕನಿಷ್ಠ ಕನ್ನಡದ ಪತ್ರಕರ್ತರನ್ನಾದರೂ ಕರೆಯಬೇಕೆಂಬ ಸೌಜನ್ಯ ಸರಕಾರಕ್ಕೆ ಇರಲಿಲ್ಲ. ಹಾಗೆ ಘೋಷಿಸಿದ ಆನಂತರವೂ 'ಶಾಸ್ತ್ರೀಯ ಭಾಷೆ'ಯ ಅಭಿವೃದ್ಧಿಗೆ ಸಂಬಂಧಿಸಿದಂತೆ ಅದು ಮೌನವಾಗಿಯೇ ಉಳಿಯಿತು. ಭಾಷೆ ಮತ್ತು ಸಂಸ್ಕೃತಿಯ ವಿಷಯದಲ್ಲಿ ಸರಕಾರದ ದಿವ್ಯ ನಿರ್ಲಕ್ಷ ನಮಗೆಲ್ಲ ತಿಳಿದೇ ಇರುವುದರಿಂದ ಈ ಕುರಿತು ನಾವು ಆತಂಕ ಪಡಬೇಕಾಗಿಲ್ಲ. ಈ ಹಿನ್ನೆಲೆಯಲ್ಲಿ 'ಶಾಸ್ತ್ರೀಯ ಭಾಷೆ' ಯ ಘೋಷಣೆಯ ಆನಂತರ ತಮಿಳು ಮತ್ತು ಸಂಸ್ಕೃತ ಭಾಷೆಗಳಿಗೆ ಕೇಂದ್ರ ಸರಕಾರ ಒದಗಿಸಿದ ಆರ್ಥಿಕ ಸಹಾಯ ಮತ್ತು ಆಯಾ ಭಾಷೆಗಳಲ್ಲಿ ನಡೆದ ಅಧ್ಯಯನಗಳ ಬಗೆಗೆ ಕೆಲವು ಮಾಹಿತಿಗಳನ್ನು ನೀಡಲು ಈ ಲೇಖನದಲ್ಲಿ ಪ್ರಯತ್ನಿಸಲಾಗಿದೆ.

'Classical Language' ಎಂಬ ಆಂಗ್ಲ ಪರಿಭಾಷೆಗೆ ಸಂವಾದಿಯಾಗಿ ನಾವೀಗ 'ಶಾಸ್ತ್ರೀಯ ಭಾಷೆ' ಎಂಬ ಪದವನ್ನು ಬಳಸುತ್ತಿದ್ದೇವೆ. ಲ್ಯಾಟಿನ್ ಭಾಷೆಯಲ್ಲಿ 'Classical' ಅಂದರೆ 'ಅತ್ಯುನ್ನತ ವರ್ಗ' ಎಂಬರ್ಥವಿದ್ದು ಕನ್ನಡದ ಸಂದರ್ಭದಲ್ಲಿ ಅದಕ್ಕೆ 'ಅಭಿಜಾತ' ಎಂಬ ಪದವನ್ನು ನಮ್ಮ ಹಿರಿಯರು ಬಳಸಿದ್ದರು. ಇನ್ನೂ ಕೆಲವರು "ಪಳಮೈಕನ್ನಡ" ಎಂಬ ಪದವನ್ನು ಸೂಚಿಸಿದ್ದರು. ಅದೇನೇ ಇರಲಿ, ನಾವೀಗ, 'ಶಾಸ್ತ್ರೀಯ ಕನ್ನಡ' ಎಂಬ ಪರಿಭಾಷೆಯನ್ನು ಸರಿಸುಮಾರಾಗಿ ಒಪ್ಪಿಕೊಂಡಿದ್ದೇವೆ. ಮಾಧ್ಯಮಗಳೂ ಕೂಡಾ ಇದೇ ಪದವನ್ನು ಪ್ರಚುರಪಡಿಸಿವೆ. ಹೀಗಾಗಿ ಇದನ್ನು ಒಪ್ಪಿಕೊಂಡು ಮುಂದುವರೆಯಬೇಕಾಗಿದೆ.

### ಶಾಸ್ತ್ರೀಯ ಭಾಷೆ : ಹಾಗಂದರೇನು?

ಶಾಸ್ತ್ರೀಯ ಗುಣಗಳುಳ್ಳ ಸಾಹಿತ್ಯವನ್ನು ಹೊಂದಿರುವ ಭಾಷೆಯೇ 'ಶಾಸ್ತ್ರೀಯ ಭಾಷೆ'. ಆದರೆ ಜಗತ್ತಿನಾದ್ಯಂತ ಈ ಪದಕ್ಕೆ ಒಂದೇ ಬಗೆಯ ವ್ಯಾಖ್ಯಾನವನ್ನು ನೀಡಲಾಗಿಲ್ಲ. ಉದಾಹರಣೆಗೆ 'ಶಾಸ್ತ್ರೀಯ ಭಾಷೆಯು ಪ್ರಾಚೀನವಾಗಿರಬೇಕು' ಎಂದು ಹೇಳಲಾಗಿದೆ. ಆದರೆ ಎಷ್ಟು ಪ್ರಾಚೀನವಾಗಿರಬೇಕು ಎಂದು ಕೇಳಿದಾಗ ಅದಕ್ಕೆ ಬಗೆ ಬಗೆಯ ಉತ್ತರಗಳು

ದೊರೆಯುತ್ತವೆ. ಕ್ರಿಪೂ ೨ ನೇ ಶತಮಾನದಿಂದ ಕ್ರಿ.ಶ. ೧೭ ನೇ ಶತಮಾನದವರೆಗಣ ಕಾಲಾವಧಿಯಲ್ಲಿ ಕೆಲವು ಭಾಷೆಗಳು ಶಾಸ್ತ್ರೀಯ ಭಾಷೆಗಳ ಪಟ್ಟಿಗೆ ಸೇರಿವೆ. 'ಶಾಸ್ತ್ರೀಯ ಭಾಷೆಗೆ ತನ್ನದೇ ಆದ ಸ್ವತಂತ್ರ ಸಾಹಿತ್ಯ ಪರಂಪರೆಯಿರಬೇಕು, ಈ ಪರಂಪರೆಯು ಬೃಹತ್ ಮತ್ತು ಶ್ರೀಮಂತವಾಗಿರುವುದರ ಜೊತೆಗೆ ಬೇರಾವುದೇ ಪರಂಪರೆಯ ಉಪ-ಉತ್ಪನ್ನ ಆಗಿರಬಾರದು' ಎಂಬುದು ಅದರ ಇನ್ನೊಂದು ಲಕ್ಷಣ. ಈ ಕುರಿತೂ ನಿಖರವಾದ ವಿವರಣೆ ನೀಡುವುದು ಕಷ್ಟ.

**ಜಗತ್ತಿನ ಶಾಸ್ತ್ರೀಯ ಭಾಷೆಗಳು**

ಈಗಾಗಲೇ ಸ್ಪಷ್ಟವಾಗಿರುವಂತೆ, ಜಗತ್ತಿನ ಬೇರೆ ಬೇರೆ ರಾಷ್ಟ್ರಗಳು ಶಾಸ್ತ್ರೀಯ ಭಾಷೆಗೆ ಸಂಬಂಧಿಸಿದಂತೆ ಭಿನ್ನ ಭಿನ್ನ ನಿಲುವುಗಳನ್ನು ಹೊಂದಿವೆ. ೧೭ ನೇ ಶತಮಾನದವರೆಗೂ ಬದುಕುಳಿದಿದ್ದು ಆನಂತರ ಮರೆಯಾಗಿಬಿಟ್ಟ ಭಾಷೆಗಳನ್ನು ಆಯಾ ಭಾಷೆಗೆ ಸಂಬಂಧಿಸಿದ ರಾಷ್ಟ್ರಗಳು 'ಶಾಸ್ತ್ರೀಯ' ಎಂದು ಘೋಷಿಸಿಕೊಂಡಿವೆ. ಕುತೂಹಲದ ವಿಷಯವೆಂದರೆ ಭಾಷೆ ಮತ್ತು ಸಂಸ್ಕೃತಿಗೆ ಸಂಬಂಧಿಸಿದ ಹಾಗೆ ಕಾಲಕಾಲಕ್ಕೆ ಎಲ್ಲ ರಾಷ್ಟ್ರಗಳಿಗೆ ಸೂಕ್ತ ತಿಳುವಳಿಕೆ ನೀಡುವ ವಿಶ್ವಸಂಸ್ಥೆಯು ಶಾಸ್ತ್ರೀಯ ಭಾಷೆಗೆ ಸಂಬಂಧಿಸಿದಂತೆ ಇದುವರೆಗೆ ಯಾವುದೇ ತೀರ್ಮಾನವನ್ನು ಪ್ರಕಟಿಸದಿರುವುದು. ಏನೇ ಇರಲಿ, ವಿದ್ವಾಂಸರು 'ಶಾಸ್ತ್ರೀಯ' ಎಂದು ಗುರುತಿಸಿದ ಜಗತ್ತಿನ ಪ್ರಮುಖ ಕೆಲವು ಭಾಷೆಗಳು ಇಂತಿವೆ :

೧. ಗ್ರೀಕ್ ೨. ಲ್ಯಾಟಿನ್ ೩. ಶಾಸ್ತ್ರೀಯ ಅರಬಿಕ್ ೪. ಶಾಸ್ತ್ರೀಯ ಚೈನೀಸ್, ೫. ಪರ್ಶಿಯನ್ ೬. ಸಂಸ್ಕೃತ, ೭. ಸುಮೇರಿಯನ್ ೮. ಇಜಿಪ್ಸಿಯನ್ ೯. ಪುರಾತನ ಬ್ಯಾಬಿಲೋನಿಯನ್ ೧೦. ಹಿಬ್ರೂ ೧೧. ತಮಿಳು ೧೨. ಕನ್ನಡ ೧೩.ತೆಲುಗು ೧೪. ಮಾಂಡ್ಯಾಕ್ ೧೫. ಸಿರಿಯಾಕ್ ೧೬. ಅರ್ಮೆನಿಯನ್ ೧೭. ಪುರಾತನ ಜಪಾನೀಸ್ ೧೮. ಐಸ್‌ಲ್ಯಾಂಡಿಕ್ ೧೯. ಗಾಯಿಲೆಕ್ ೨೦. ಶಾಸ್ತ್ರೀಯ ಇಂಗ್ಲಿಷ್ ೨೧. ಅಟ್ಟೋಮನ್ ಟರ್ಕಿಫ್.

ಆಯಾ ರಾಷ್ಟ್ರಗಳ 'ಶಾಸ್ತ್ರೀಯ ಭಾಷೆ' ಘೋಷಣೆಗಳ ಬಗ್ಗೆ ಯುನೆಸ್ಕೋ ಕೂಡಾ ಏನೂ ಹೇಳುವುದಿಲ್ಲ. ಯಾವುದೇ ಒಂದು ನಿರ್ದಿಷ್ಟ ಭಾಷೆಯನ್ನು ಅನೇಕ ರಾಷ್ಟ್ರಗಳು 'ಶಾಸ್ತ್ರೀಯ'ವೆಂದು ಮನ್ನಿಸಿದರೆ, ಆಗ ಯುನೆಸ್ಕೋ ಅದನ್ನು ಗಮನಿಸುತ್ತದೆ ಎಂದು ಹೇಳಲಾಗಿದೆ. ಇದನ್ನು ಗಮನಿಸಿದ ತಮಿಳರು ದಕ್ಷಿಣ ಪೂರ್ವದ ಕೆಲವು ದೇಶಗಳು ತಮಿಳನ್ನು 'ಶಾಸ್ತ್ರೀಯ ಭಾಷೆ' ಎಂದು ಘೋಷಿಸಲು ಒತ್ತಾಯ ಹೇರುತ್ತಿದ್ದಾರೆ.

**ಶಾಸ್ತ್ರೀಯ ಭಾಷೆಯಾಗಿ ತಮಿಳು : ಒಂದು ಅವಲೋಕನ**

ತಮಿಳಿಗೆ ಶಾಸ್ತ್ರೀಯ ಭಾಷೆಯ ಮನ್ನಣೆ ನೀಡಬೇಕೆಂದು ಆ ಭಾಷೆಯ ವಿದ್ವಾಂಸರು ಕಳೆದ ಶತಮಾನದಿಂದಲೇ ಬೇಡಿಕೆ ಮುಂದಿಟ್ಟಿದ್ದರು. ಬರ್ಕ್‌ಲೀ ವಿಶ್ವವಿದ್ಯಾಲಯದಲ್ಲಿ ತಮಿಳು ಪ್ರಾಧ್ಯಾಪಕರಾಗಿರುವ ಪ್ರೊ. ಜಾರ್ಜ್ ಹಾರ್ಟ್ ಎಂಬವರು ಈ ಕುರಿತು ಒಂದು ಲೇಖನ ಬರೆದು 'ಯಾವುದೇ ಮಾನದಂಡಗಳನ್ನು ಆಧರಿಸಿದರೂ ಕೂಡಾ ತಮಿಳನ್ನು ಶಾಸ್ತ್ರೀಯ ಭಾಷೆ ಎಂದು ಮಾನ್ಯ ಮಾಡಬಹುದು' ಎಂದು ಹೇಳಿದರು. ಅವರ ವಾದದ ಮುಖ್ಯಾಂಶಗಳನ್ನು ಈ ಕೆಳಗೆ ನೀಡಲಾಗಿದೆ:

'ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯದ ತಮಿಳು ಅಧ್ಯಯನ ಪೀಠದಲ್ಲಿ ೧೯೭೫ರಿಂದ ನಾನು ತಮಿಳು ಪ್ರಾಧ್ಯಾಪಕನಾಗಿ ಕೆಲಸ ಮಾಡುತ್ತಿದ್ದೇನೆ. ಅದಕ್ಕೆ ಮುನ್ನ ೧೯೭೦ರಲ್ಲಿ ನಾನು ಹಾರ್ವರ್ಡ್ ವಿಶ್ವವಿದ್ಯಾಲಯದಲ್ಲಿ ಸಂಸ್ಕೃತವನ್ನು ಅಭ್ಯಾಸ ಮಾಡಿದ್ದೇನೆ. ಈ ಎರಡೂ

ಭಾಷೆಗಳಲ್ಲದೆ ನನಗೆ ಶಾಸ್ತ್ರೀಯ ಭಾಷೆಗಳಾದ ಲ್ಯಾಟಿನ್ ಮತ್ತು ಗ್ರೀಕ್ ಕೂಡಾ ತಿಳಿದಿದೆ. ಆಧುನಿಕ ಯುರೋಪಿನ ಅನೇಕ ಭಾಷೆಗಳೂ ನನಗೆ ಗೊತ್ತು. ಆಧುನಿಕ ಭಾರತೀಯ ಭಾಷೆಗಳಲ್ಲಿ ಅದರಲ್ಲೂ ತೆಲುಗು ಭಾಷೆಯ ಬಗೆಗೆ ನಾನು ಸಾಕಷ್ಟು ತಿಳಿದುಕೊಂಡಿದ್ದೇನೆ.

ನನ್ನ ಜೀವಮಾನದುದ್ದಕ್ಕೂ ಅಂದರೆ ೧೯೬೩ರಿಂದ ನಾನು ಸಂಸ್ಕೃತವನ್ನು ಗಂಭೀರವಾಗಿ ಅಭ್ಯಾಸ ಮಾಡುತ್ತಿದ್ದೇನೆ. ಕಾಳಿದಾಸ, ಮಾಘ, ಭಾರವಿ, ಹರ್ಷರನ್ನು ನಾನು ಓದಿದ್ದೇನೆ. ಋಗ್ವೇದ, ಉಪನಿಷತ್ತುಗಳು, ಮಹಾಭಾರತ, ಕಥಾಪರಿತ್ಸಾಗರ ಮತ್ತು ಆದಿಶಂಕರರ ಬರಹಗಳನ್ನು ನಾನು ಮೂಲದಲ್ಲಿ ಓದಿರುವೆ. ಈ ಅನುಭವಗಳ ಹಿನ್ನೆಲೆಯಲ್ಲಿ ತಮಿಳು ಭಾಷೆಯು ಯಾವುದೇ ಮಾನ ದಂಡಗಳಿಂದ ನೋಡಿದರೂ ಶಾಸ್ತ್ರೀಯ ಭಾಷೆಯಾಗುವ ಅರ್ಹತೆಯನ್ನು ಪಡೆದಿದೆ ಎಂದು ನಾನು ಹೇಳ ಬಲ್ಲೆ. ಇಂಥದ್ದೊಂದು ಶ್ರೀಮಂತ ಭಾಷೆಗೆ ಸಲ್ಲಬೇಕಾದ ಗೌರವವನ್ನು ಕೊಡದಿರುವುದೆಂದರೆ ಭಾರತೀಯ ಸಂಸ್ಕೃತಿಯ ಶ್ರೀಮಂತಿಕೆ ಮತ್ತು ದೊಡ್ಡತನವನ್ನು ಅಲ್ಲಗಳೆದಂತೆ ಎಂದು ನಾನು ಭಾವಿಸುವೆ. ನಾನು ಹೀಗೆ ಹೇಳಲು ಮುಖ್ಯ ಕಾರಣಗಳೆಂದರೆ–

೧. ಆಧುನಿಕ ಭಾರತದ ಬೇರಾವುದೇ ಭಾಷೆಗಳಿಗಿಂತ ತಮಿಳು ಹೆಚ್ಚು ಪ್ರಾಚೀನವಾದುದು.

೨. ತಮಿಳು ಭಾಷೆಯು ತನ್ನದೇ ಆದ ಅನನ್ಯವಾದ ಶ್ರೀಮಂತ ಸಾಹಿತ್ಯ ಪರಂಪರೆಯನ್ನು ಹೊಂದಿದೆ. ಪರಂಪರೆಯು ಬೇರಾವುದೇ ಸಾಹಿತ್ಯ ಪರಂಪರೆಯ ಉಪ ಉತ್ಪನ್ನ ಅಲ್ಲ.

೩. ತಮಿಳಿನ ಪ್ರಾಚೀನ ಕೃತಿ 'ತೋಳ್ಕಾಪ್ಪಿಯುಂ' ಕ್ರಿ.ಶ. ಪೂರ್ವ ೨೦೦ರಲ್ಲಿ ರಚಿತವಾಗಿದೆ. ಪ್ರಖ್ಯಾತವಾದ 'ಸಂಗಂ ಸಾಹಿತ್ಯ' ಮತ್ತು 'ಪತ್ತುಪ್ಪಾಟ್ಟು'ಗಳು ಕ್ರಿ.ಶ. ಒಂದು – ಎರಡನೇ ಶತಮಾನದಲ್ಲಿ ರಚಿತವಾಗಿದೆ. ಇವು ಕಾಳಿದಾಸನ ಸಂಸ್ಕೃತ ರಚನೆಗಳಿಗಿಂತಲೂ ಸುಮಾರು ೨೦೦ ವರ್ಷ ಹಳೆಯದು.

೪. ತಮಿಳು ಪೂರ್ತಿಯಾಗಿ ಭಾರತದ ದೇಸೀ ಸಾಹಿತ್ಯ ಪರಂಪರೆಗೆ ಸೇರಿದೆ. ಅದು ಸಂಸ್ಕೃತ ಜನ್ಯವಲ್ಲ. ಸಂಸ್ಕೃತವು ದಕ್ಷಿಣ ಭಾರತದಲ್ಲಿ ಪ್ರಚಾರಕ್ಕೆ ಬರುವ ಮೊದಲೇ ಇಲ್ಲಿ ತಮಿಳು ವ್ಯಾಪಕ ಪ್ರಭಾವ ಬೀರಿತ್ತು. ತಮಿಳಿಗೆ ಅದರದ್ದೇ ಆದ ಕಾವ್ಯಮೀಮಾಂಸೆಯಿದೆ. ಸಾಹಿತ್ಯ ಸಿದ್ಧಾಂತವಿದೆ. ವ್ಯಾಕರಣ ಪರಂಪರೆಯಿದೆ, ಸೌಂದರ್ಯಮೀಮಾಂಸೆಯಿದೆ ಮತ್ತು ಎಲ್ಲಕ್ಕಿಂತ ಮಿಗಿಲಾಗಿ ಅದರದ್ದೇ ಆದ ಅನನ್ಯವಾದ ಬೃಹತ್ ಸಾಹಿತ್ಯ ಶರೀರವಿದೆ. ಇದು ಭಾರತದ ಮೂಲ ಸಂವೇದನೆಗಳನ್ನು ತಿಳಿಸಿ ಹೇಳುತ್ತದೆ ಮತ್ತು ಈ ಸಂವೇದನೆ ಸಂಸ್ಕೃತ ಅಥವಾ ಇತರ ಆಧುನಿಕ ಭಾಷೆಗಳ ಸಂವೇದನೆಗಳಿಗಿಂತ ಪೂರ್ತಿ ಭಿನ್ನವಾಗಿದೆ.

೫. ತಮಿಳಿನ ಸಾಂಸ್ಕೃತಿಕ ಗುಣಮಟ್ಟ ಉತ್ಕೃಷ್ಟವಾಗಿದ್ದು, ಅದು ಸಂಸ್ಕೃತ, ಗ್ರೀಕ್, ಲ್ಯಾಟಿನ್, ಚೈನೀಸ್, ಪರ್ಶಿಯನ್ ಮತ್ತು ಅರೆಬಿಕ್ ಭಾಷೆಗಳ ಗುಣಮಟ್ಟವನ್ನು ಮೀರಿಸಬಲ್ಲುದಾಗಿದೆ. ಜೊತೆಗೆ ಈ ಸಾಹಿತ್ಯಕ್ಕೆ ಒಂದು ಬಗೆಯ ವಿಶ್ವಾತ್ಮಕ ಅಯಾಮವೂ ಇದೆ. ಈ ಸಾಹಿತ್ಯ ಪರಂಪರೆಯಲ್ಲಿ ಶೋಧಿತವಾಗದ, ಚರ್ಚಿಸಲಾರದ ಮಾನವೀಯ ಅಂಶಗಳೇ ಇಲ್ಲ.

೬. ಭಾರತೀಯ ಸಂಸ್ಕೃತಿ ಮತ್ತು ಪರಂಪರೆಯನ್ನು ತಿಳಿಯಬಯಸುವವರಿಗೆ ತಮಿಳು ಮೂಲ ಮತ್ತು ಸ್ವತಂತ್ರ ಆಕರ. ತಮಿಳು ಹಿಂದೂ ಕಲ್ಪನೆಯೇ ಮುಂದೆ ಆಧುನಿಕ ಹಿಂದೂ ಪರಿಕಲ್ಪನೆಯನ್ನು ಬೆಳೆಸಲು ನೆರವಾಯಿತು. ದಕ್ಷಿಣ ಭಾರತದ ವೈಷ್ಣವ ದೇವಾಲಯಗಳಲ್ಲಿ ಹೇಳಲಾಗುವ ಪವಿತ್ರ ಮಂತ್ರಗಳು ವೈದಿಕ ಮಂತ್ರಗಳಷ್ಟೇ ಮಹತ್ವವಾದುವು. ಸಂಸ್ಕೃತ

It is also notified that 'Sanskrit Language' satisfies the above criteria and will be classified as a 'Classical Language'.

High antiquity of its early texts/recorded history over a thousand years.

A body of ancient literature/texts, which is considered a valuable heritage by generations of speakers.

The literary tradition be original and not borrowed from another speech community.

The classical language and literature being distinct from modern, there may also be a discontinuity between the classical language and its later forms or its offshoots.

ಹೇಗೆ ಇಂಡೋ-ಆರ್ಯನ್ ಭಾಷೆಗಳಿಗೆ ಮೂಲವೋ ಹಾಗೆಯೇ ತಮಿಳು ಕೂಡಾ ದ್ರಾವಿಡ ಭಾಷೆಗಳಿಗೆ ಮೂಲ ಆಕರ.

೭. ಇಂಥ ಭಾಷೆಯನ್ನು ಕೇವಲ ರಾಜಕೀಯ ಕಾರಣಗಳಿಗಾಗಿ ಮಾತ್ರವೇ ಶಾಸ್ತ್ರೀಯ ಭಾಷೆ ಎಂದು ಗುರುತಿಸಲಾಗದೇ ಉಳಿಸಲಾಯಿತು. ತಮಿಳಿಗೆ ಅಂಥ ಮನ್ನಣೆ ನೀಡಿದರೆ ಇತರ ಭಾಷೆಗಳ ಜನರೂ ಬೇಡಿಕೆ ಸಲ್ಲಿಸಬಹುದು ಎಂಬ ಭಯ ರಾಜಕಾರಣಿಗಳದ್ದು. ಆದರೆ ಈ ಭಯಕ್ಕೆ ಕಾರಣಗಳಿಲ್ಲ. ಗ್ರೀಕನ್ನು ಶಾಸ್ತ್ರೀಯ ಭಾಷೆ ಎಂದು ಗುರುತಿಸಿದಾಗ ಫ್ರೆಂಚರೂ, ಇಂಗ್ಲಿಷರೂ ಗಲಭೆ ಎಬ್ಬಿಸಲಿಲ್ಲವಲ್ಲ?'

೨೦೦೦ನೇ ಇಸವಿ ಏಪ್ರಿಲ್ ೧೧ರಂದು ಹಾರ್ಟ್ ಬರೆದ ಪತ್ರವು ಮುಂದೆ ಬಹುಬಗೆಯ ಚರ್ಚೆಗೊಳಗಾಗಿ, ೨೦೦೪ರ ಅಕ್ಟೋಬರ್ ೧೨ರಂದು ತಮಿಳನ್ನು 'ಶಾಸ್ತ್ರೀಯ ಭಾಷೆ' ಎಂದು ಘೋಷಿಸಲಾಯಿತು.

**ತಮಿಳಿಗಾದ ಪ್ರಯೋಜನಗಳು**

ಯಾವುದೇ ಭಾಷೆಯನ್ನು 'ಶಾಸ್ತ್ರೀಯ' ಎಂದು ಘೋಷಿಸಿದಾಗ ಆ ಭಾಷೆಯ ಅಭಿವೃದ್ಧಿಗೆ ಸಾಕಷ್ಟು ಯೋಜನೆಗಳನ್ನು ರೂಪಿಸಲು ಅವಕಾಶವಾಗುತ್ತದೆ. ಸರಕಾರವೂ ಉದಾರವಾಗಿ ಧನ ಸಹಾಯ ಮಾಡುತ್ತದೆ. ಆದರೆ ಈ ವಿಷಯದಲ್ಲಿ ಕೇಂದ್ರ ಸರಕಾರದ ಅಧಿಕಾರಿಗಳು ಮುಕ್ತವಾಗಿ ವ್ಯವಹರಿಸುತ್ತಾರೆ ಎಂದೇನೂ ಹೇಳುವಂತಿಲ್ಲ. ಉದಾಹರಣೆಗೆ ೨೦೦೯ರ ಜುಲೈ ತಿಂಗಳಲ್ಲಿ ನಾನು ಕೇಂದ್ರ ಸರಕಾರದ ಮಾನವ ಸಂಪನ್ಮೂಲ ಇಲಾಖೆಗೆ ಹೋಗಿ ' ಕಳೆದ ನಾಲ್ಕು ವರ್ಷಗಳಲ್ಲಿ ತಮಿಳಿನ ಅಭಿವೃದ್ಧಿಗೆ ಎಷ್ಟು ಹಣ ನೀಡಲಾಗಿದೆ, ನನ್ನ ಸಂಶೋಧನೆಗೆ ಈ ವಿವರ ಬೇಕೆಂದು' ಅಲ್ಲಿನ ಅಧಿಕಾರಿಗಳನ್ನು ಕೇಳಿದೆ. ಆದರೆ ಅಧಿಕಾರಿಗಳು ವಿವರ ನೀಡಲು ನಿರಾಕರಿಸಿದರು. ಆನಂತರ ನಾನು ನನ್ನ ವಕೀಲ ಗೆಳೆಯ ಸಿ.ಎಸ್. ನಾಗೇಶರ ಮೂಲಕ ಮಾಹಿತಿ ಹಕ್ಕು ಕಾಯಿದೆಯಡಿಯಲ್ಲಿ ದಿನಾಂಕ ೧೦-೮-೨೦೦೯ರಂದು ಅರ್ಜಿ ಸಲ್ಲಿಸಬೇಕಾಯಿತು. ಈ ಅರ್ಜಿಗೆ ೨೧-೧೦-೨೦೦೯ ರಂದು ಉತ್ತರ ಬಂತು. ಆ ಪತ್ರದ ಪ್ರಕಾರ ೨೦೦೫-೦೬ ರಿಂದ ಅಕ್ಟೋಬರ ೨೦೦೯ ರ ವರೆಗೆ ಕೇಂದ್ರ ಸರಕಾರವು ತಮಿಳಿನ ಅಭಿವೃದ್ಧಿಗೆ ಈ ಕೆಳಗಿನಂತೆ ಹಣ ಬಿಡುಗಡೆ ಮಾಡಿದೆ:

- ೨೦೦೫-೨೦೦೬ : ೪೬ ಲಕ್ಷ ರೂಪಾಯಿಗಳು
- ೨೦೦೬-೨೦೦೭ : ೨೮೨.೪೬ ಲಕ್ಷ ರೂಪಾಯಿಗಳು
- ೨೦೦೭-೨೦೦೮ : ೪೦೧.೪೬ ಲಕ್ಷ ರೂಪಾಯಿಗಳು
- ೨೦೦೮-೨೦೦೯ ; ೪೪೭.೪೬ ಲಕ್ಷ ರೂಪಾಯಿಗಳು
- ೨೦೦೯-೧೦ : (ಅಕ್ಟೋಬರ ೨೦೦೯ ರ ವರೆಗೆ): ೪೦೫.೪೬ ಲಕ್ಷ ರೂಪಾಯಿಗಳು.

ಹೀಗೆ ಕಳೆದ ನಾಲ್ಕು ವರ್ಷಗಳಲ್ಲಿ ಒಟ್ಟು ೧೫ ಕೋಟಿ ೮೧ ಲಕ್ಷ ರೂಪಾಯಿಗಳನ್ನು ತಮಿಳಿನ ಅಭಿವೃದ್ಧಿಗೆ ಬಿಡುಗಡೆ ಮಾಡಲಾಗಿದೆ.

**ತಮಿಳಿನ ಅಭಿವೃದ್ಧಿ ಕೆಲಸಗಳು**

ಸ್ಥೂಲವಾಗಿ ಶಾಸ್ತ್ರೀಯ ತಮಿಳಿನ ಅಭಿವೃದ್ಧಿಗೆ ಈ ಕೆಳಗಿನ ಕೆಲಸಗಳನ್ನು ಮಾಡಲಾಗಿದೆ.

ತಮಿಳು ಭಾಷೆಯನ್ನು ಶಾಸ್ತ್ರೀಯ ಭಾಷೆ ಎಂದು ಘೋಷಿಸಿದ ಬೆನ್ನಲ್ಲೇ ಕೇಂದ್ರ ಸರ್ಕಾರವು ಮೈಸೂರಿನ ಭಾರತೀಯ ಭಾಷಾ ಅಧ್ಯಯನ ಕೇಂದ್ರ (CIIL) ದಲ್ಲಿ "The Centre of Excellence for Classical Tamil" (CECT) ಎಂಬ ಕೇಂದ್ರವನ್ನು ತೆರೆದು ಕ್ರಿ.ಪೂ. ೩ನೇ ಶತಮಾನದಿಂದ ಕ್ರಿ.ಶ. ೬ನೇ ಶತಮಾನದ ಅವಧಿಯ ನಡುವಿನ ಶಾಸ್ತ್ರೀಯ ತಮಿಳು ಸಾಹಿತ್ಯದ ಅಧ್ಯಯನಕ್ಕೆ ಈ ಕೆಳಗಿನ ೧೦ ಪ್ರಮುಖ ಯೋಜನೆಗಳನ್ನು ಕೈಗೆತ್ತಿಕೊಳ್ಳಲು ನಿರ್ಣಯಿಸಲಾಯಿತು. .

- ಶಾಸ್ತ್ರೀಯ ತಮಿಳು ಕೃತಿಗಳ ಮರು ಸಂಪಾದನೆ
- ಪ್ರಾಚೀನ ತಮಿಳು ಕೃತಿಗಳ ಅನುವಾದ.
- ತಮಿಳಿನ ಚಾರಿತ್ರಿಕ ವ್ಯಾಕರಣ ಸಂಪುಟದ ಸಿದ್ಧತೆ
- ತಮಿಳಿನ ಪ್ರಾಚೀನತೆ: ಒಂದು ಅಂತರಶಾಸ್ತ್ರೀಯ ಅಧ್ಯಯನ.
- ತಮಿಳು ಉಪಭಾಷೆಗಳ ಅಧ್ಯಯನ.
- ಭಾಷಾ ವಲಯವಾಗಿ ಭಾರತ.
- ಪ್ರಾಚೀನ ತಮಿಳು ಕೃತಿಗಳ ಡಿಜಿಟಲ್ ಗ್ರಂಥಾಲಯದ ಸ್ಥಾಪನೆ
- ಶಾಸ್ತ್ರೀಯ ತಮಿಳಿನ ಆನ್-ಲೈನ್ ಪಾಠ
- ಶಾಸ್ತ್ರೀಯ ತಮಿಳು ಅಧ್ಯಯನಗಳ ಸಂಗ್ರಹ.
- ಶಾಸ್ತ್ರೀಯ ತಮಿಳು ಕೃತಿಗಳನ್ನಾಧರಿಸಿದ ವಿಡಿಯೋಗಳ ತಯಾರಿ

ಮುಂದೆ ಅಗಸ್ಟ್ ೧೮, ೨೦೦೭ರಂದು ಕೇಂದ್ರ ಸರ್ಕಾರವು ಮೈಸೂರಿನ ಭಾರತೀಯ ಭಾಷಾ ಅಧ್ಯಯನ ಕೇಂದ್ರ (CILL) ದಲ್ಲಿದ್ದ ಈ ಸಂಸ್ಥೆಯನ್ನು 'ಸೆಂಟ್ರಲ್ ಇನ್ಸ್ಟಿಟ್ಯೂಟ್ ಅಫ್ ಕ್ಲಾಸಿಕಲ್ ತಮಿಳ್' (Classical Institute of Classical Tamil - CICT) ಎಂಬ ಹೆಸರಲ್ಲಿ ಚೆನ್ನೈಗೆ ವರ್ಗಾಯಿಸಿ, ತಮಿಳು ಸಂಶೋಧನೆಗೆ ಇನ್ನಷ್ಟು ನೆರವನ್ನು ನೀಡಿತು. ಈ ಕೇಂದ್ರವು ಇದೀಗ ನಡೆಸುತ್ತಿರುವ ಕೆಲವು ಯೋಜನೆಗಳು ಇಂತಿವೆ:

**ಶಿಷ್ಯ ವೇತನಗಳ ನೀಡಿಕೆ**

ಕೇಂದ್ರವು ಶಾಸ್ತ್ರೀಯ ತಮಿಳಿನ ಮೇಲೆ ಪಿಎಚ್.ಡಿ. ಪದವಿಗಾಗಿ ಅಧ್ಯಯನ ನಡೆಸುವ ೧೦ ಸಂಶೋಧನಾ ವಿದ್ಯಾರ್ಥಿಗಳಿಗೆ ತಿಂಗಳೊಂದರ ರೂ. ೧೦,೦೦೦ ರೂಪಾಯಿಗಳಂತೆ ಗರಿಷ್ಠ ಎರಡು ವರ್ಷಗಳಿಗೆ ಶಿಷ್ಯವೇತನ ನೀಡುತ್ತದೆ. ಇವರಿಗೆ ಪ್ರತಿವರ್ಷ ೧೦,೦೦೦ ರೂಪಾಯಿಗಳನ್ನು ಇತರ ಖರ್ಚುಗಳಿಗಾಗಿ ನೀಡುತ್ತದೆ. ಇದುವರೆಗೆ ಇಂತಹ ೨೦ ಶಿಷ್ಯ ವೇತನಗಳನ್ನು ನೀಡಲಾಗಿದೆ. ಈಗಾಗಲೇ ಪಿಎಚ್.ಡಿ. ಪದವಿ ಪಡೆದಿರುವ ಹಿರಿಯ ಸಂಶೋಧಕರಿಗೆ ತಿಂಗಳೊಂದರ ೧೨,೦೦೦ರೂಪಾಯಿಗಳ ಶಿಷ್ಯವೇತನವನ್ನು ಎರಡು ವರ್ಷಗಳ ಅವಧಿಗೆ ನೀಡುವುದು. ಇತರ ಖರ್ಚುಗಳಿಗೆ ರೂ. ೨೦,೫೦೦/- ರೂಪಾಯಿಗಳನ್ನು ವರ್ಷವೊಂದಕ್ಕೆ ನೀಡಲಾಗುವುದು.

**ಶಾಸ್ತ್ರೀಯ ಕೃತಿಗಳು ಆಯ್ಕೆ**

ತಮಿಳು ವಿದ್ವಾಂಸರು ಕ್ರಿ.ಶ. ಪೂರ್ವ ಎರಡನೇ ಶತಮಾನದಿಂದ ಕ್ರಿ.ಶ. ಆರನೇ ಶತಮಾನದ ನಡುವಣ ಅವಧಿಯಲ್ಲಿ ರಚಿತವಾದ ೪೧ ಕೃತಿಗಳನ್ನು 'ಶಾಸ್ತ್ರೀಯ ತಮಿಳು ಕೃತಿಗಳು' ಎಂದು ಗುರುತಿಸಿಕೊಂಡಿದ್ದಾರೆ. ಕೆಲವು ಕೃತಿಗಳ ಹೆಸರುಗಳು:

೧. ತೋಲ್ಕಾಪ್ಪಿಯಂ ವ್ಯಾಕರಣ ಗ್ರಂಥ.
೨. ಎಟ್ಟ್‌ತೋಟ್ಟೈ (ಎಂಟು ಸಂಗ್ರಹಗಳು)
೩. ಪತ್ತ್ ಪಾಟ್ಟ್ ( ಹತ್ತು ಪದಗಳು)
೪. ಶಿಲಪ್ಪದಿಕಾರಂ
೫. ಮಣಿ ಮೇಖಲೈ
೬. ತಿರುಕ್ಕುರುಳ್
೭. ಕಮರ್‌ಪಾಟ್ಟು
೮. ತಿಣೈಮೋಲಿ ಐಂಪಾಟ್ಟು
೯. ಅಯಿತಿ ಇತ್ಯಾದಿ.

**'ಶಾಸ್ತ್ರೀಯ ತಮಿಳು ಪ್ರಶಸ್ತಿ'ಗಳ ನೀಡಿಕೆ**

ಕೇಂದ್ರವು ಒಂದು ಲಕ್ಷದಿಂದ ಐದು ಲಕ್ಷದವರೆಗಿನ ಮೊತ್ತದ 'ಶಾಸ್ತ್ರೀಯ ತಮಿಳು ಪ್ರಶಸ್ತಿ'ಗಳನ್ನು ಶಾಸ್ತ್ರೀಯ ತಮಿಳಿನಲ್ಲಿ ಕೆಲಸ ಮಾಡಿದ ವಿದ್ವಾಂಸರಿಗೆ ಈ ಕೆಳಗೆ ತೋರಿಸಿದಂತೆ ಪ್ರತಿ ವರ್ಷ ನೀಡುತ್ತಿದೆ:

೧. ತೊಲ್ಕಾಪ್ಪಿಯರ್ ಪ್ರಶಸ್ತಿ (೫ ಲಕ್ಷ ರೂಪಾಯಿಗಳು) : ಒಬ್ಬರಿಗೆ
೨. ಕುರಲ್ ಪೀಠಂ ಪ್ರಶಸ್ತಿ (೫ ಲಕ್ಷ ರೂಪಾಯಿಗಳು) : ಇಬ್ಬರಿಗೆ
೩. ಯುವ ಪ್ರಶಸ್ತಿ (೧ ಲಕ್ಷ ರೂಪಾಯಿಗಳು) : ೫ ಜನರಿಗೆ

ಭಾರತದ ರಾಷ್ಟ್ರಪತಿಗಳು ಈ ಪ್ರಶಸ್ತಿಗಳನ್ನು ಪ್ರದಾನ ಮಾಡುತ್ತಾರೆ.

**ಯೋಜನೆಗಳಿಗೆ ಹಣಕಾಸಿನ ನೆರವು**

ಸಂಸ್ಥೆಯು ಇದೀಗ ವಿವಿಧ ಯೋಜನೆಗಳಿಗೆ ಹಣಕಾಸಿನ ನೆರವನ್ನು ನೀಡುತ್ತಿದೆ. ೨೦೦೮-೨೦೦೯ನೇ ಇಸವಿಯಲ್ಲಿ ನೀಡಲಾದ ಕೆಲವು ಯೋಜನೆಗಳು ಇಂತಿವೆ:

೧. ಪ್ರಾಚೀನ ತಮಿಳು ಸಮಾಜದಲ್ಲಿ ಸಮರಕಲೆ (ರೂ. ೨,೫೦,೦೦೦)
೨. ಸಂಗಂ ಕಾಲದ ತಮಿಳು ಸಾಹಿತ್ಯ ಪರಿಸರದಲ್ಲಿ ಚಿತ್ರಕಲೆ (ರೂ. ೨,೫೦,೦೦೦)
೩. ಸಂಗಂ ಕವನಗಳಲ್ಲಿನ ನಾಟಕೀಯ ಅಂಶಗಳು (ರೂ. ೨,೫೦,೦೦೦)
೪. ತಮಿಳು ಮ್ಯಾಗಜಿನ್‌ಗಳ ಸೂಚಿಕೆ (Indesign) ಸಿದ್ಧತೆ (೨೫,೦೦೦)
೫. ತಮಿಳು ಮತ್ತು ಪಶ್ಚಿಮದ ಸೆಮೆಟಿಕ್ ಭಾಷೆಗಳು (೨೫,೦೦೦)
೬. ಅವಳಿ ಮಹಾಕಾವ್ಯದಲ್ಲಿ ಲಿಂಗ ಸ್ವರೂಪ (೧,೩೦,೦೦೦)
೭. ಮರ ನಾನೂರಿನ ಉರ್ದು ಅನುವಾದ (೨,೫೦,೦೦೦)
೮. ೧೦ನೇ ಶತಮಾನದ ವರೆಗಣ ತಮಿಳು ಲಿಪಿಯ ವೈವಿಧ್ಯ, ಬೆಳವಣಿಗೆ ಮತ್ತು ಸಾಮಾನ್ಯೀಕರಣ (೨೫೦೦೦೦)
೯. ತೊಲ್ಕಾಪ್ಪಿಯಂನಿಂದ ಶಿಲಪ್ಪದಿಕಾರಂವರೆಗೆ ತಮಿಳು ಸಂಗೀತ ಶಾಸ್ತ್ರದ ಮನರ್ ಅಧ್ಯಯನ (೨೫೦,೦೦೦)
೧೦. ತೊಲ್ಕಾಪ್ಪಿಯಂನ ಕನ್ನಡ ಅನುವಾದ (೨,೫೦,೦೦೦)
೧೧. ಭಾರತೀಯ ವ್ಯಾಕರಣ ಕ್ಷೇತ್ರದಲ್ಲಿ ತೋಲ್ಕಾಪ್ಪಿಯಂನ ಸ್ಥಾನ (೨,೫೦,೦೦೦)

**ವಿಚಾರ ಸಂಕಿರಣ ಮತ್ತು ಕಮ್ಮಟಗಳಿಗೆ ಸಹಾಯ**

ಕೇಂದ್ರವು ೨೦೦೮-೦೯ರಲ್ಲಿ ಆರ್ಥಿಕ ಅನುದಾನ ನೀಡಲಾದ ಕೆಲವು ಯೋಜನೆಗಳು ಇಂತಿವೆ.

೧. ಅಗಂ-ಮರಂಗಳಲ್ಲಿನ ತುರೈ ಪರಿಕಲ್ಪನೆ
೨. ಶಾಸ್ತ್ರೀಯ ತಮಿಳು ಸಾಹಿತ್ಯದ ಕಾಲ ನಿರ್ಣಯ
೩. ೫೦ ಸಂಗೀತ ವಿದ್ಯಾರ್ಥಿಗಳಿಗೆ ಸಂಗಂ ಸಾಹಿತ್ಯ.
೪. ಅಧ್ಯಾಪಕರಿಗೆ ಸಂಗಂ ಸಾಹಿತ್ಯ
೫. ಅಧ್ಯಾಪಕರಿಗೆ ಶಾಸ್ತ್ರೀಯ ತಮಿಳು ಸಾಹಿತ್ಯ
೬. ಶಿಲಪ್ಪದಿಕಾರಂ ಒಂದು ಬಹುಶಿಸ್ತೀಯ ಅಧ್ಯಯನ
೭. ಭಕ್ತಿ ಚಳುವಳಿಗೆ ಸಂಗಂ ಸಾಹಿತ್ಯದ ಕೊಡುಗೆ
೮. ಸಂಗಂ ಸಾಹಿತ್ಯದ ಸಾಮಾಜಿಕ ಅಧ್ಯಯನ

೯. ಸಂಗಂ ಭಾಷೆ ಮತ್ತು ಸಾಹಿತ್ಯಕ್ಕೆ ಮಲೆಯಾಳಂನ ಪ್ರಸ್ತುಕತೆ.
೧೦. ಭಾರತೀಯ ಸಂಸ್ಕೃತಿಗೆ ತಮಿಳಿನ ಕೊಡುಗೆ
೧೧. ತಮಿಳು ಶಾಸ್ತ್ರೀಯ ಸಾಹಿತ್ಯದ ಆರ್ಥಿಕ ಅನ್ವೇಷಣೆ
೧೨. ಸಂಸ್ಕೃತ ಮತ್ತು ತಮಿಳು ಶಾಸ್ತ್ರೀಯ ಕೃತಿಗಳ ತೌಲನಿಕ ಅಧ್ಯಯನ. ಇತ್ಯಾದಿ.

ಭಾಷೆಗೆ ಸಂಬಂಧಿಸಿ ತಮಿಳು ವಿದ್ವಾಂಸರು ನಡೆಸಿದ ಸಂಶೋಧನೆಗಳಿಂದ ಕನ್ನಡಿಗರು ಪ್ರೇರಣೆ ಪಡೆಯಲು ಸಂಕೋಚಬೇಕಾಗಿಲ್ಲ.

**ಶಾಸ್ತ್ರೀಯ ಭಾಷೆಯಾಗಿ ಸಂಸ್ಕೃತ**

ಭಾರತದ ಸಂವಿಧಾನದ ೩೫೧ನೇ ವಿಧಿಯಲ್ಲಿ ನೀಡಲಾದ ಅವಕಾಶಗಳನ್ನು ಬಳಸಿಕೊಂಡು ಸಂಸ್ಕೃತ ಭಾಷೆಯ ಅಭಿವೃದ್ಧಿಗೆ 'ಶಾಸ್ತ್ರೀಯ ಭಾಷೆ'ಯ ಅಧಿಕೃತ ಹಣೆಪಟ್ಟಿ ಇಲ್ಲದೆ ಕೂಡಾ ಹೇರಳವಾಗಿ ಧನ ಸಹಾಯ ಒದಗಿಸಲಾಗಿದೆ. ಜೊತೆಗೆ ತಮಿಳಿಗೆ ಶಾಸ್ತ್ರೀಯ ಭಾಷೆಯ ಮನ್ನಣೆ ದೊರಕಿದ ಆನಂತರ, ೨೦೦೫ರಲ್ಲಿ ಸಂಸ್ಕೃತಕ್ಕೆ ಶಾಸ್ತ್ರೀಯ ಭಾಷೆಯ ಅಧಿಕೃತ ಸ್ಥಾನ ನೀಡಲಾಯಿತು. ಪ್ರಸ್ತುತ ಸಂಸ್ಕೃತದ ಅಭಿವೃದ್ಧಿಗೆ ಕೇಂದ್ರ ಸರ್ಕಾರ (ಮಾನವ ಸಂಪನ್ಮೂಲ ಸಚಿವಾಲಯ) ನೀಡುತ್ತಿರುವ ಅನುದಾನದ ಬಗ್ಗೆ ಕೆಳಗೆ ಕೆಲವು ವಿವರಗಳನ್ನು ನೀಡಲಾಗಿದೆ:

ಭಾರತ ಸರ್ಕಾರವು ರಾಷ್ಟ್ರೀಯ ಸಂಸ್ಕೃತ ಪ್ರತಿಷ್ಠಾನದ ಮೂಲಕ ಸಂಸ್ಕೃತ ಭಾಷೆಯ ಅಭಿವೃದ್ಧಿಗೆ ಸಹಕರಿಸುತ್ತಿದೆ. ಈ ಸಂಸ್ಕೃತ ಪ್ರತಿಷ್ಠಾನಕ್ಕೆ ಜಮ್ಮು, ಜೈಪುರ, ಶೃಂಗೇರಿ, ಮುಂಬೈ, ಅಲಹಾಬಾದ್, ತ್ರಿಶೂರು, ಲಕ್ನೋ, ಗಾರ್ಲಿ, ಪುರಿ ಮತ್ತು ಭೋಪಾಲಗಳಲ್ಲಿ ಶಾಖೆಗಳಿವೆ.

೨೦೦೮–೨೦೦೯ರಲ್ಲಿ ಸಂಸ್ಕೃತ ಪ್ರತಿಷ್ಠಾನವು ಈ ಕೆಳಗಿನ ಕೆಲಸಗಳಿಗೆ ಅನುದಾನ ನೀಡಿದೆ.

೧. ಸಂಸ್ಕೃತವನ್ನು ಬಿ.ಎ. ಮತ್ತು ಎಂ.ಎ. ಹಂತಗಳಲ್ಲಿ ಓದುವ ಸುಮಾರು ೧೫೦೦೦ ಮಂದಿಗೆ ಸಹಾಯ.

೨. ಸಂಸ್ಕೃತದ ಅಭಿವೃದ್ಧಿಗೆ ಕೆಲಸ ಮಾಡುವ ೮೭೩ ಸಂಸ್ಥೆಗಳಿಗೆ ಅನುದಾನ. ಇಲ್ಲಿ ಕೆಲಸ ಮಾಡುವ ಅಧ್ಯಾಪಕರಿಗೆ ತಿಂಗಳೊಂದರ ರೂ. ೬೦೦೦/–ಗಳ ವೇತನ. ಓದುವ ವಿದ್ಯಾರ್ಥಿಗಳಿಗೆ ತಿಂಗಳೊಂದರ ರೂ. ೩೦೦೦/–ಗಳ ಶಿಷ್ಯವೇತನ. ಇದರಿಂದ ೫೦೦೦೦ಕ್ಕೂ ಹೆಚ್ಚು ವಿದ್ಯಾರ್ಥಿಗಳು ಪ್ರಯೋಜನ ಪಡೆದಿದ್ದಾರೆ.

೩. ಪೂನಾದ ಸಂಸ್ಕೃತ ನಿಘಂಟು ಯೋಜನೆಗೆ ಅನುದಾನ

೪. ೨೦ ಸಾವಿರ ವಿದ್ಯಾರ್ಥಿಗಳಿಗೆ ೫,೭೧,೯೪,೬೫೦ ರೂಗಳ ಶಿಷ್ಯವೇತನ ನೀಡಿಕೆ.

೫. ವರ್ಷಕ್ಕೆ ರೂ. ೨೪,೦೦೦/– ರೂಗಳ ಸಹಾಯಧನವನ್ನು ೨೪೦ ಸಂಸ್ಕೃತ ಪಂಡಿತರಿಗೆ ನೀಡಿದ್ದು.

೬. ಭಾರತದ ರಾಷ್ಟ್ರಪತಿಗಳ ಮೂಲಕ ೧೫ ರಾಷ್ಟ್ರೀಯ, ಅಂತಾರಾಷ್ಟ್ರೀಯ ಪ್ರಶಸ್ತಿ ನೀಡಿಕೆ.

೭. ರೂ. ೫೦ಲಕ್ಷದ ೩೨ ಸಾವಿರ ರೂಪಾಯಿಗಳನ್ನು ಸರ್ಕಾರೇತರ ಸಂಸ್ಥೆಗಳಿಗೆ ಹಾಗೂ ಡೀಮ್ಡ್ ವಿಶ್ವವಿದ್ಯಾಲಯಗಳಿಗೆ ನೀಡಲಾಗಿದೆ.

೮. ಸಂಸ್ಕೃತ ಸಾಫ್ಟ್‌ವೇರ್ ಅಭಿವೃದ್ಧಿಗೆ ಸಹಾಯ.

೯. ೧೦,೨೧,೦೯,೨೪೭ ರೂಪಾಯಿಗಳನ್ನು ಸಂಸ್ಕೃತಪರ ಚಟುವಟಿಕೆಗಳಿಗಾಗಿ ಸಹಾಯಧನವಾಗಿ ನೀಡಲಾಗಿದೆ.

೧೦. ರೂ. ೭೫ಲಕ್ಷದ ೧೬ ಸಾವಿರ ರೂಪಾಯಿಗಳನ್ನು ೧೨೩ ಅಧ್ಯಾಪಕರಿಗೆ ಮತ್ತು ೮೪೪ ವಿದ್ಯಾರ್ಥಿಗಳಿಗೆ ವೈದಿಕ ಅಧ್ಯಯನದ ಮೌಖಿಕ ರೂಪಗಳ ಸಂರಕ್ಷಣೆಗಾಗಿ ವ್ಯಯಿಸಲಾಗಿದೆ.

೧೧. ವೈದಿಕ ಸಂಘ-ಸಂಸ್ಥೆಗಳಿಗೆ ಸಹಾಯ.

೧೨. ವಿಚಾರ ಸಂಕಿರಣಗಳಿಗೆ ಅನುದಾನ

೧೩. ವೈದಿಕ ಸಮ್ಮೇಳನಗಳಿಗೆ ಸಹಾಯಧನ.

೧೪. ಹೊಸ ಶೈಕ್ಷಣಿಕ ಕಾರ್ಯಕ್ರಮಗಳು ಹಾಗೂ ಸಂಸ್ಥೆಗಳ ಸ್ಥಾಪನೆಗೆ ಸಹಾಯ.

೧೫. ಸಂಸ್ಕೃತ ಭಾಷೆಯಲ್ಲಿ ದೂರ ಶಿಕ್ಷಣ ನೀಡಲು ಅನುದಾನ.

೧೬. ಈಶಾನ್ಯ ಭಾರತದಲ್ಲಿ ವೈದಿಕ ಜ್ಞಾನದ ಪ್ರಸಾರಕ್ಕೆ ಅನುದಾನ.

೧೭. ವೃದ್ಧ ವೈದಿಕ ವಿದ್ವಾಂಸರಿಗೆ ೫.೫೦ ಲಕ್ಷ ರೂಪಾಯಿಗಳ ಸಹಾಯಧನ.

೧೮. ಮನೆಯಲ್ಲಿ 'ನಿತ್ಯಾಗ್ನಿ ಹೋತ್ರ' ನಡೆಸುವ ನಿತ್ಯಾಗ್ನಿ ಹೋತ್ರಿಗಳಿಗೆ ಆರ್ಥಿಕ ಸಹಾಯ.

೧೯. ಸಂಸ್ಕೃತ ನಿಘಂಟು ಮತ್ತು ಭಾರತೀಯ ಉಪ ಭಾಷೆಗಳು ಯೋಜನೆ, ಸಂಸ್ಕೃತ ಸಾಹಿತ್ಯದ ಇ. ಡಾಟಾ ಬ್ಯಾಂಕ್, ಸಂಸ್ಕೃತ ವಾರ್ತಾ ತ್ರೈಮಾಸಿಕದ ಪ್ರಕಟನೆ ಮತ್ತಿತರ ಯೋಜನೆಗಳಿಗೆ ಧನಸಹಾಯ.

ಹೀಗೆ ಶಾಸ್ತ್ರೀಯ ಮನ್ನಣೆಯಿಂದ ಭಾಷೆಯ ಅಧ್ಯಯನಕ್ಕೆ ಪ್ರಯೋಜನವಾಗುತ್ತಿದೆ. ಕನ್ನಡ ಈ ಅವಕಾಶಗಳಿಂದ ವಂಚಿತವಾಗಿದೆ *

---

* ಈ ಲೇಖನ ಸಿದ್ಧತೆಗೆ ಮಾಹಿತಿಗಳನ್ನು ಒದಗಿಸಿದ ಗೆಳೆಯ ವೈ. ಅವನೀಂದ್ರನಾಥ ರಾವ್ ಅವರಿಗೆ ಕೃತಜ್ಞತೆಗಳು

## ಐತಿಹಾಸಿಕ ತೀರ್ಮಾನ

ಕೇಂದ್ರ ಸರ್ಕಾರ ಐತಿಹಾಸಿಕ ತೀರ್ಮಾನ ತೆಗೆದುಕೊಂಡಿದ್ದು, ಕನ್ನಡಿಗರಿಗೆ ಗೌರವ ತೋರಿದಂತಾಗಿದೆ.
ಸತತ ಹೋರಾಟ ಕೈಗೊಂಡ ಕಾರಣ ಕನ್ನಡ ಭಾಷೆಗೆ ಕೊನೆಗೂ ನ್ಯಾಯ ಸಿಕ್ಕಿದೆ.
ರಾಷ್ಟ್ರೀಯ ಮತ್ತು ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಕನ್ನಡದ ಅಭಿವೃದ್ಧಿಗೆ ಇದರಿಂದ ಅನುಕೂಲ.
ಕೇಂದ್ರ ಸರ್ಕಾರ ಕೈಗೊಂಡಿರುವ ನಿರ್ಣಯ ಅಭಿನಂದನೀಯ.

- ಡಾ. ಸಿದ್ಧಲಿಂಗಯ್ಯ
ಅಧ್ಯಕ್ಷ, ಕನ್ನಡ ಪುಸ್ತಕ ಪ್ರಾಧಿಕಾರ.

# ಕನ್ನಡ ಭಾಷೆ - ಸಾಹಿತ್ಯದ ಪ್ರಾಚೀನತೆ



ಎಚ್. ದಂಡಪ್ಪ

ಈ ಲೇಖನವು ಕರ್ನಾಟಕ ಸರ್ಕಾರವು ಕನ್ನಡಕ್ಕೆ ಶಾಸ್ತ್ರೀಯ ಭಾಷೆ ಸ್ಥಾನಮಾನ ನೀಡುವಂತೆ ಒತ್ತಾಯಿಸಿ ಭಾರತ ಸರ್ಕಾರಕ್ಕೆ ಸಲ್ಲಿಸಿದ ಪರಿಣತರ ವರದಿಯನ್ನು ಆಧಾರಿಸಿದೆ. ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನಮಾನ ನೀಡಲು ಅನುಕೂಲವಾಗುವಂತೆ ವರದಿಯೊಂದನ್ನು ಸಿದ್ಧಪಡಿಸಲು ಕರ್ನಾಟಕ ಸರ್ಕಾರವು ಸುಪ್ರಸಿದ್ಧ ಭಾಷಾ ತಜ್ಞರಾದ ಡಾ. ಎಂ. ಚಿದಾನಂದಮೂರ್ತಿ ಹಾಗೂ ಹೆಸರಾಂತ ವಿದ್ವಾಂಸರಾದ ಪ್ರೊ. ಎಲ್.ಎಸ್. ಶೇಷಗಿರಿರಾವ್ ಅವರನ್ನು ವಿನಂತಿಸಿತು. ಈ ಕಾರ್ಯದಲ್ಲಿ ಇವರಿಗೆ ನೆರವಾಗಲು ವಿದ್ವಾಂಸರಾದ ಡಾ. ಬಿ.ಬಿ. ರಾಜಪುರೋಹಿತ ಮತ್ತು ಪ್ರೊ. ಎನ್.ಎಸ್. ತಾರಾನಾಥ ಅವರನ್ನು ಕೋರಿತು. ಅದರಂತೆ ಈ ತಜ್ಞರು ಸಿದ್ಧಪಡಿಸಿದ ವರದಿಯೇ Experts Report submitted to the Government of Karnataka on the subject of the recogition of Kannada as a Calssical Language. ಅನಂತರ ಈ ವರದಿಯನ್ನು ಕರ್ನಾಟಕ ಸರ್ಕಾರವು ಭಾರತ ಸರ್ಕಾರಕ್ಕೆ ಸಲ್ಲಿಸಿತು.

ಈ ವರದಿಯ ಯಥಾ ಪ್ರತಿಯನ್ನು ಕನ್ನಡ ಪುಸ್ತಕ ಪ್ರಾಧಿಕಾರವು ೨೦೦೭ರಲ್ಲಿ ಪ್ರಕಟಿಸಿತು. ಸುಮಾರು ಮುನ್ನೂರು ಪುಟಗಳಿಗೂ ಮಿಕ್ಕ ಈ ವರದಿಯು ಅನೇಕ ಸಂಸ್ಕೃತ ಇಂಗ್ಲಿಷ್ ಹಾಗೂ ಹಳಗನ್ನಡ ಆಕರಗಳನ್ನು ಒಳಗೊಂಡಿದೆ. ಕನ್ನಡ ಭಾಷೆಯ ಪ್ರಾಚೀನತೆಯನ್ನು ಸುಸ್ಥಾಪಿಸುವ ಈ ವರದಿಯನ್ನು ಆಧಾರಿಸಿ ಕನ್ನಡ ಓದುಗರನ್ನು ಗಮನದಲ್ಲಿರಿಸಿಕೊಂಡು ಈ ಸಂಕ್ಷಿಪ್ತ ಲೇಖನವನ್ನು ಸಿದ್ಧಪಡಿಸಲಾಗಿದೆ. ಅನೇಕ ಸಂದರ್ಭಗಳಲ್ಲಿ ಹೊಸ ಆಕರಗಳನ್ನು ಬಳಸಿಕೊಂಡು ಒಟ್ಟಾರೆ ಲೇಖನವನ್ನು ಸುಪುಷ್ಟಗೊಳಿಸಲಾಗಿದೆ.

ಭಾರತ ಸರ್ಕಾರವು ಶಾಸ್ತ್ರೀಯ ಭಾಷೆಗೆ ನಿಗದಿಪಡಿಸಿರುವ ಮಾನದಂಡಗಳಿಗೆ ಅನುಗುಣವಾಗಿ ಪರಿಣತರು ವರದಿಯನ್ನು ಸಿದ್ಧಪಡಿಸಿದ್ದಾರೆ. ಈಗ ಒಂದೊಂದಾಗಿ ಮಾನದಂಡಗಳನ್ನು ಹಾಗೂ ಅವುಗಳಿಗೆ ಸಮರ್ಥನೆಯಾಗಿ ನೀಡಲಾಗಿರುವ ಆಕರ ಸಾಹಿತ್ಯವನ್ನು ಪರಿಶೀಲಿಸಬಹುದು.

(i) आकर्षः कुन्तलश्चैव । (ಸಭಾಪರ್ವ, ೩೧-೧೧.)
(ii) द्रविडाः सह कुन्तलैः । (ಉದ್ಯೋಗಪರ್ವ, ೧೩೪-೨೫)
(iii) कुन्तलैश्च दशार्णैश्च । (ಭೀಷ್ಮಪರ್ವ, ೫೧-೧೨)

ಮಾನದಂಡ ೧:

**ಭಾಷೆಯ ದಾಖಲಿತ ಚರಿತ್ರೆ/ಪ್ರಾಚೀನ ದಾಖಲೆಗಳು ಒಂದೂವರೆ ಸಾವಿರದಿಂದ ಎರಡು ಸಾವಿರ ವರ್ಷಗಳಿಗೂ ಹಿಂದಿನದಾಗಿರಬೇಕು.**

ಪ್ರಾಚೀನ ಭಾರತದ ಇತಿಹಾಸದಲ್ಲಿ ಕರ್ನಾಟಕಕ್ಕೆ ವಿಶಿಷ್ಟವಾದ ಸ್ಥಾನವಿದೆ. ಕರ್ಣಾಟ ಅಥವಾ ಕರ್ನಾಟಕವೆಂಬ ಉಲ್ಲೇಖ ಮಹಾಭಾರತ ಕಾವ್ಯದಲ್ಲಿ ಹಲವು ಸಲ ಕಂಡುಬರುತ್ತದೆ. ಸಭಾ ಪರ್ವದ ಸಂದರ್ಭದಲ್ಲಿ 'ಕರ್ನಾಟಕ'ವೆಂಬುದನ್ನು ಕರ್ಣಾಟ ದೇಶದ ಅರಸರ ಬಗ್ಗೆ ಉಲ್ಲೇಖಿಸಲಾಗಿದೆ. ಅಲ್ಲದೆ ಭೀಷ್ಮ ಪರ್ವದಲ್ಲಿ ದ್ರಾವಿಡ, ಕೇರಳ ಇತರರೊಡನೆ ದಕ್ಷಿಣ ಭಾರತದ ಜನ ಅಥವಾ ಪ್ರದೇಶವೆಂಬರ್ಥದಲ್ಲಿ ಕರ್ಣಾಟಕವು ಹೇಳಲ್ಪಟ್ಟಿದೆ.

ಅಥಾಪರೇ ಜನಪದಾ ದಕ್ಷಿಣಾ ಭರತರ್ಷಭ।
ದ್ರವಿಡಾಃ ಕೇರಲಾಃ ಪ್ರಾಚ್ಯಾಭೂಷಿಕಾ ವನವಾಸಿಕಾಃ॥
ಕರ್ನಾಟಕ ಮಹಿಷಿಕಾ ವಿಕಲ್ಪ ಮೂಷಕಾಸ್ತಥಾ।
ಝಿಲ್ಲಿಕಾಃ ಕುನ್ತಲಾಶ್ಚೈವ ಸೌಹೃದ ನವಕಾನನಾಃ॥

ದಕ್ಷಿಣ ಭಾಗದಲ್ಲಿ ಇರುವ ವನವಾಸಿಕ, ಮಹಿಷಿಕ ಹಾಗೂ ಕುಂತಲ ಇವು ಕ್ರಮವಾಗಿ ಬನವಾಸಿ, ಮೈಸೂರು ಮತ್ತು ಉತ್ತರ ಕರ್ನಾಟಕಗಳಾಗಿದ್ದು ಕನ್ನಡ ಮಾತನಾಡುತ್ತಿದ್ದ ವಿಶಾಲ ಪ್ರದೇಶಗಳು ಇವಾಗಿದ್ದವೆಂದು ತಿಳಿಯಬಹುದು.

ಪ್ರಾಚೀನ ಮಹಾಕಾವ್ಯವಾದ ರಾಮಾಯಣದಲ್ಲಿ ಪ್ರದೇಶ ಅಥವಾ ಜನರನ್ನು ಸೂಚಿಸುವ ಹಾಗೆ ಕರ್ಣಾಟಕ ಎಂಬ ಹೆಸರು ಬರುವುದಿಲ್ಲವಾದರೂ ಡಿ.ಆರ್. ಭಂಡಾರ್‌ಕರ್ ಮುಂತಾದವರು ಕಿಷ್ಕಿಂದೆಯು ಹಂಪಿಯ ಹತ್ತಿರದ ಆನೆಗೊಂದಿ ಇರಬಹುದು ಎಂದು ಹೇಳುತ್ತಾರೆ. ಮಹಾಭಾರತದ ಕಾಲವನ್ನು ವಿಂಟರ್‌ನಿಟ್ಸ್ ಅವರು ತಮ್ಮ A History of Indian Literature ಸಂಪುಟ ೧ – ಪುಟ ೪೬೫ರಲ್ಲಿ "ಕ್ರಿ.ಪೂ. ೪ನೇ ಶತಮಾನಕ್ಕಿಂತ ಮುಂಚೆ ಹಾಗೂ ಕ್ರಿ.ಶ. ೪ನೇ ಶತಮಾನದ ತರುವಾಯವಾಗಲಿ ಇಂದಿನ ರೂಪವನ್ನು ಪಡೆದಿರುವುದು ಶಕ್ಯವಿಲ್ಲ" ಎಂದು ಅಭಿಪ್ರಾಯಪಟ್ಟಿದ್ದಾರೆ. ಆದುದರಿಂದ ಕರ್ನಾಟಕದ ಪ್ರಾಚೀನತೆಯನ್ನು ಮಹಾಭಾರತ ಕಾಲಕ್ಕೆ ಒಯ್ಯಬಹುದಾಗಿದೆ. ರಾಮಾಯಣದ ಕಾಲ ಮಹಾಭಾರತದಂತೆ ಕ್ರಿ.ಪೂ. ೩ ಅಥವಾ ೪ನೇ ಶತಮಾನವೆಂದು ಮ್ಯಾಕ್‌ಡೊನೆಲ್, ವಿಂಟರ್‌ನಿಟ್ಸ್ ಕ್ರಮವಾಗಿ A History of Sanskrit Literature ಪುಟ–೩೦೬, A History of Indian Literature ಸಂ. ೧., ಪುಟ–೫೧೬ರಲ್ಲಿ ಹಾಗೂ ವಿನ್ಸೆಂಟ್ ಸ್ಮಿತ್ ಅವರು The Oxford History of India ಪುಟ ೩೦ರಲ್ಲಿ ರಾಮಾಯಣದ ಕಾಲ ಕ್ರಿ.ಪೂ. ೩ ಇಲ್ಲವೇ ೪ನೇ ಶತಮಾನವೆಂದು ಹೇಳುತ್ತಾರೆ. ಆದುದರಿಂದ ಕರ್ನಾಟಕದ ಪ್ರಾಚೀನತೆ ಕ್ರಿ.ಪೂ. ೩ನೇ ಶತಮಾನದಕ್ಕೂ ಹೆಚ್ಚು ಎಂಬುದು ಕೆಲ ವಿದ್ವಾಂಸರ ಅಭಿಪ್ರಾಯ. ಕ್ರಿ.ಪೂ. ೭೦೦ರಲ್ಲಿದ್ದ ಪಾಣಿನಿಯು "ಕರ್ನಾಟಕ"ವನ್ನು ಗೋತ್ರನಾಮವನ್ನಾಗಿ ಉಲ್ಲೇಖಿಸುತ್ತಾನೆ. (ಗಣಪಥ II ಅಧ್ಯಾಯ IV ಸೂತ್ರ ೬೩) ಇದು ಅಂದಿನ ಪ್ರಾಚೀನ ಕರ್ಣಾಟಕದ ಉಲ್ಲೇಖವೆಂಬುದು ಕೆಲವು ವಿದ್ವಾಂಸರ ಅಭಿಪ್ರಾಯ. ಪಾತಂಜಲಿ (ಕ್ರಿ.ಪೂ. ೧೫೦) ಕಾತ್ಯಾಯನ (ಕ್ರಿ.ಪೂ. ೪೦೦) ಇವರು 'ಮಹಿಷ್ಮತ್'ನ್ನು ಉಲ್ಲೇಖಿಸುತ್ತಾರೆ. ಇದು 'ಮೈಸೂರು' ಎಂದು ಹೇಳುತ್ತಾರೆ. ಇದರಿಂದ ಸ್ಪಷ್ಟವಾಗುವುದೇನೆಂದರೆ ಪ್ರಾಚೀನ ಭಾರತದ ಮಹತ್ವದ ಭಾಗವಾಗಿ ಕರ್ನಾಟಕವು ಬೆಳೆದಿದೆ ಎಂಬ ವಿಚಾರ.

ಕರ್ನಾಟಕದ ಕೆಲವು ಸ್ಥಳಗಳಲ್ಲಿ ಚಕ್ರವರ್ತಿ ಅಶೋಕನ ಕೆಲವು ಶಾಸನಗಳು ದೊರೆತಿವೆ. ಅದರಲ್ಲಿ ಬ್ರಹ್ಮಗಿರಿ ಶಿಲಾಶಾಸನವೂ ಒಂದು. ಈ ಶಾಸನವು ಕ್ರಿ.ಪೂ. ೨೫೨ರಲ್ಲಿ ರಚನೆಯಾಗಿರುವಂತಹದ್ದು.

ಇದರ ಮೊದಲನೇ ಸಾಲಿನಲ್ಲಿರುವ 'ಇಸಿಲ' ಎಂಬ ಸ್ಥಳನಾಮವು 'ಎಸಿಲ್' ಎಂಬ ಕನ್ನಡ ಪದದ ಪ್ರಾಕೃತ ರೂಪವಾಗಿದೆ. ಈ ವಿಚಾರವನ್ನು ಬಿ.ಎಲ್. ರೈಸ್ ಅವರು (ಎಪಿಗ್ರಾಫಿಯಾ ಕರ್ನಾಟಕ ಸಂಪುಟ-XI, ಚಿತ್ರದುರ್ಗಜಿಲ್ಲೆ, ೧೯೦೩ರಲ್ಲಿ ಪ್ರಕಟ) ಇದರಲ್ಲಿ ಹೇಳುತ್ತಾರೆ.

೧೯೬೮ರಲ್ಲಿ ಪ್ರಕಟವಾಗಿರುವ 'ಕರ್ನಾಟಕ ಪರಂಪರೆ' ಎಂಬ ಗ್ರಂಥದಲ್ಲಿ 'ಇಸಿಲ' ಎಂಬ ಸ್ಥಳನಾಮವು ಕನ್ನಡ ಭಾಷೆ ಕ್ರಿ.ಪೂ. ೩ನೇ ಶತಮಾನದಲ್ಲಿ ಅಸ್ತಿತ್ವದಲ್ಲಿತ್ತು ಎಂಬುದನ್ನು ತೀನಂಶ್ರೀ ಅವರು ಸಾಧಾರವಾಗಿ ವಿವರಿಸಿದ್ದಾರೆ. "ಕನ್ನಡ ಒಂದು ಸ್ವತಂತ್ರ ಭಾಷೆಯಾಗಿ ಬೆಳೆದ ಮೇಲೆ ಅನೇಕ ಶತಮಾನಗಳ ಕಾಲ ಲಿಖಿತ ರೂಪಕ್ಕಿಳಿಯದೆ ಕೇವಲ ಆಡುನುಡಿಯಾಗಿಯೇ ಉಳಿದಿದ್ದಂತೆ ತೋರುತ್ತದೆ. ಸು.ಕ್ರಿ.ಶ. ೪೫೦ರ ಹಲ್ಮಿಡಿ ಶಾಸನವು ಸದ್ಯಕ್ಕೆ ಲಭ್ಯವಾಗಿರುವ ಅತ್ಯಂತ ಪ್ರಾಚೀನವಾಗಿರುವ ಕನ್ನಡ ಲೇಖನವಾಗಿದೆ. ಆದರೆ ಕೆಲವರು ವಿದ್ವಾಂಸರು ಇನ್ನೂ ಪ್ರಾಚೀನವಾದ ಪ್ರಾಕೃತ ಮತ್ತು ಸಂಸ್ಕೃತ ಶಾಸನಗಳಿಂದಲೂ ಕೆಲವು ವಿದೇಶಿ ಮೂಲಗಳಿಂದಲೂ ಕನ್ನಡದ ಕೆಲವಾದರೂ ರೂಪಗಳನ್ನು ಪಡೆಯುವುದು ಸಾಧ್ಯವಿದೆಯೆಂದು ಅಭಿಪ್ರಾಯಪಡುತ್ತಾರೆ. ಅಶೋಕನ ಬ್ರಹ್ಮಗಿರಿ ಶಾಸನದಲ್ಲಿ ದೊರೆಯುವ 'ಇಸಿಲ' ಅಂಥ ಒಂದು ಶಬ್ದ. 'ಇಸಿಲ' ಎನ್ನುವುದು ಈಗ ಆಡುನುಡಿಯಾಗಿರುವ ಪ್ರದೇಶದೊಳಗೆ ಇದ್ದ ಒಂದು ಸ್ಥಳದ ಹೆಸರು. ಕೆಲವು ವಿದ್ವಾಂಸರು ಅದು ಚಿತ್ರದುರ್ಗ ಜಿಲ್ಲೆಯಲ್ಲಿರುವ ಸಿದ್ದಾಪುರ ಎಂಬುದಾಗಿ ಹೇಳುತ್ತಾರೆ. ಇಸಿಲ ಎಂಬ ಶಬ್ದವನ್ನು ಪ್ರಾಕೃತವೆಂದು ಹೇಳಿ 'ರಿಷಿ' ಎಂಬ ಶಬ್ದದಿಂದ ನಿಷ್ಪನ್ನವಾಗಿದೆಯೆಂದು ಹೇಳುವುದು ರೂಢಿ. ಆದರೆ ಈ ನಿಷ್ಪತ್ತಿಯಲ್ಲಿ ಕೆಲವು ತೊಂದರೆಗಳಿವೆ. ಪ್ರೊ.ಡಿ.ಎಲ್. ನರಸಿಂಹಾಚಾರ್ (ಖಚಿತ ಕಾಲದ ಪ್ರಾಚೀನತಮ ಕನ್ನಡ ಶಬ್ದ ಎಂಬ ತಮ್ಮ ಅಪ್ರಕಟಿತ ಲೇಖನದಲ್ಲಿ) ತಮಿಳಿನ 'ಎಯಿಲ್' ಎಂಬ ಶಬ್ದಕ್ಕೆ ಕೋಟೆ ಎಂಬ ಅರ್ಥವಿದ್ದು ಅದರ ಜ್ಞಾತಿ ಶಬ್ದವಾದ ಕನ್ನಡ ಎಸಿಲ್ ಎಂಬ ಶಬ್ದವೇ ಆರ್ಯೀಕರಣಗೊಂಡು 'ಇಸಿಲ' ಎಂಬ ರೂಪ ತಾಳಿದೆ ಎಂದು ಪ್ರತಿಪಾದಿಸಿದ್ದಾರೆ. ಪ್ರೊ. ಡಿ.ಎಲ್. ನರಸಿಂಹಾಚಾರ್ ಅವರ ವಿದ್ವತ್ಪೂರ್ಣವಾದ ಊಹೆ ಸರಿಯಾಗಿದ್ದ ಪಕ್ಷದಲ್ಲಿ (ಇದನ್ನು ಅಲ್ಲಗಳೆಯುವ ಬೇರಾವುದೂ ಸಮರ್ಥ ಪ್ರತಿಪಾದನೆಗಳಿರುವುದು ಈ ಲೇಖಕನಿಗೆ ತಿಳಿಯದು) 'ಎಸಿಲ್' ಎನ್ನುವುದು ವಿಶ್ವಾಸಾರ್ಹವಾದ ಮೊದಲ ಕನ್ನಡ ಪದಗಳಲ್ಲಿ ಒಂದೆಂದು ಹೇಳಬಹುದು. (ಕರ್ನಾಟಕದ ಭಾಷೆಗಳು: ಅನುವಾದ, ಡಾ. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ)

ತಮಿಳು ಶಾಸನತಜ್ಞರು ಹಾಗೂ ವಿದ್ವಾಂಸರಾದ ಶ್ರೀ ಐರಾವತಮ್ ಮಹಾದೇವನ್ ಅವರು (ಪ್ರಾಚೀನ ತಮಿಳು ಶಾಸನಗಳು-೨೦೦೩) ಹಳಗನ್ನಡ ಪ್ರಭಾವ ತಮಿಳು ಭಾಷೆಯ ಮೇಲೆ ಯಾವ ರೀತಿ ಆಗಿದೆ ಎಂಬುದನ್ನು ಇಲ್ಲಿಯವರೆಗೂ ಯಾರೂ ಶಂಕಿಸಲಾಗದಂತಹ ಅತ್ಯುದ್ಭುತವಾದ ವಿಚಾರಗಳನ್ನು ಮಂಡಿಸಿದ್ದಾರೆ. ಕ್ರಿ.ಪೂರ್ವದ ಕೊನೆಯ ಎರಡು ಮೂರು ಶತಮಾನಗಳಲ್ಲಿ ಕನ್ನಡ ಪದಕೋಶ, ವ್ಯಾಕರಣ ಪ್ರಯೋಗ ಸಂಬೋಧಕ ಪ್ರಕ್ರಿಯೆಗಳು ಎಷ್ಟರ ಮಟ್ಟಿಗೆ ಬೆಳೆದಿದ್ದವು ಹಾಗೂ ಜೈನ ವಲಸೆಗಾರರ ಮೂಲಕ ಸಮಕಾಲೀನ ತಮಿಳು ಬ್ರಾಹ್ಮೀ ಮೇಲೆ ಯಾವ ರೀತಿಯಲ್ಲಿ ಪರಿಣಾಮ ಬೀರಿದ್ದವು ಎಂಬುದನ್ನು ಅವರು ಸಾದರಪಡಿಸಿದ್ದಾರೆ. ಅವರ ವಾದವನ್ನು ಈ ರೀತಿ ಸಂಕ್ಷಿಪ್ತವಾಗಿ ಹೇಳಬಹುದು.

'ಎರುಮಿ ನಾಟು' ಎಂಬ ಕನ್ನಡ ಪದದ ತಮಿಳು ರೂಪಾಂತರ 'ಎರುಮೈನಾಟು'.
'ಕವುಟ' ಎಂಬುದು ಒಬ್ಬ ವ್ಯಕ್ತಿಯ ಇಲ್ಲವೇ ಮನೆತನದ ಹೆಸರು ಇದು
'ಗವುಡಿ' ಗೌಡಿಗೆ ಸಮಾನವಾಗಿದೆ.
'ಪೊಶಿಲ್' ಎಂದರೆ ದ್ವಾರ ಅಥವಾ ಬಾಗಿಲು-ಇದು ಕನ್ನಡದ
'ಹೊಸಿಲು'ವಿನಿಂದ ಪಡೆದುಕೊಳ್ಳಲಾಗಿದೆ.
'ತಾಯಿಯರ್' ಎಂಬ ಗೌರವ ಸೂಚಕ ಪದವು ಕನ್ನಡ ಮೂಲದ್ದು.

ವ್ಯಕ್ತಿನಾಮ ಮತ್ತು ಗೌರವಸೂಚಕ ತಮಿಳು ಪದಗಳ ಮೇಲೆ ಕನ್ನಡದ ಪ್ರಭಾವ ಇದೆ. ಹೀಗೆ ಪಟ್ಟಿಯನ್ನು ಬೆಳೆಸಬಹುದು. ಈ ಹಿನ್ನೆಲೆಯಲ್ಲಿ ಕನ್ನಡ ಭಾಷೆಯ ಹಾಗೂ ಕನ್ನಡ ನಾಡಿನ ಪ್ರಾಚೀನತೆಯನ್ನು ಶಂಗಂ ಕಾಲಕ್ಕೂ ಒಯ್ಯಬಹುದು. ಷ. ಷಟ್ಟಕ್ ಅವರು ತಮ್ಮ 'ಶಂಗಂ-ತಮಿಳುಗಂ' ಕೃತಿಯಲ್ಲಿ ಇದನ್ನು ಸಾಧಾರವಾಗಿ ವಿವರಣಾತ್ಮಕವಾಗಿ ವಿವರಿಸಿದ್ದಾರೆ. ಇದರ ಪ್ರಕಾರ ಕನ್ನಡ ಭಾಷೆಯ ಪ್ರಾಚೀನತೆಯು ಕ್ರಿ.ಪೂ. ೩ನೇ ಶತಮಾನಕ್ಕೆ ತಲುಪುತ್ತದೆ.

ಕನ್ನಡದ ಪ್ರಸಿದ್ಧ ಸಂಶೋಧಕರಾದ ಡಾ.ಡಿ.ಎಲ್. ನರಸಿಂಹಾಚಾರ್ ಅವರು 'ಕರ್ನಾಟಕ ದರ್ಶನ' ಪುಟ ೮೩ರಲ್ಲಿ ಹಳಗನ್ನಡ ಸಾಹಿತ್ಯ ಲಘುಸಮೀಕ್ಷೆ ಎಂಬ ಲೇಖನ ಬರೆದಿದ್ದಾರೆ. ಈ ಲೇಖನದ ಭಾಗವನ್ನು 'ಕರ್ನಾಟಕ ಪರಂಪರೆ' ಸಂಪುಟ-೧ರಲ್ಲಿ ಕನ್ನಡ (ಆದಿಕಾಲ) ಎಂಬ ಲೇಖನದಲ್ಲಿ ಎಂ. ಕೇಶವಭಟ್ ಅವರು ಉಲ್ಲೇಖಿಸಿದ್ದಾರೆ. ಇದರಲ್ಲಿ ಕನ್ನಡ ಭಾಷೆ ಮತ್ತು ಕರ್ನಾಟಕದ ಪ್ರಾಚೀನತೆಯ ಬಗ್ಗೆ ಹಲವಾರು ವಿಚಾರಗಳಿವೆ.

"ಕನ್ನಡ ಭಾಷಾ ಸಾಹಿತ್ಯಗಳು ಬಹು ಪ್ರಾಚೀನವಾದವು. ಅದರ ಪ್ರಾಚೀನತೆ ಸಂಸ್ಕೃತ ಹಾಗೂ ಪ್ರಾಕೃತಗಳಿಗೆ ಮಾತ್ರ ಎರಡನೆಯದಾಗಿದೆ. ಕನ್ನಡನಾಡು ಮತ್ತು ಸಂಸ್ಕೃತಿಗಳನ್ನು ಕುರಿತ ಹಳೆಯ ಉಲ್ಲೇಖಗಳನ್ನು ಬೌದ್ಧಧರ್ಮದ ದಾಖಲಾತಿಗಳಲ್ಲೂ ತಮಿಳಿನ ಮಹಾಕಾವ್ಯಗಳಲ್ಲೂ ಕಾಣಬಹುದಾಗಿದೆ. ಕ್ರಿ.ಪೂ. ೩ನೇ ಶತಮಾನದಲ್ಲಿ ಮೌರ್ಯಚಕ್ರವರ್ತಿ ಅಶೋಕನ, ವನವಾಸಕ್ಕೆ (ಅಂದರೆ ಬನವಾಸಿಗೆ) ರಖ್ಖಿತನೆಂಬ ಬೌದ್ಧಬಿಕ್ಷುವನ್ನು ಮಹಿಷಮಂಡಲಕ್ಕೆ (ಅಂದರೆ ಮೈಸೂರಿಗೆ) ಮಹಾದೇವನೆಂಬ ಭಿಕ್ಷುವನ್ನೂ ಧರ್ಮಪ್ರಚಾರಕ್ಕಾಗಿ ಕಳುಹಿಸಿಕೊಟ್ಟನೆಂದು ಮಹಾವಂಶದಿಂದ ಗೊತ್ತಾಗುತ್ತದೆ. ಕ್ರಿ.ಪೂ. ೨೦೫ರಲ್ಲಿ 'ಮೂಳ' ಎಂಬ ಚೋಳದೊರೆ ಸಿಂಹಳವನ್ನು ಆಕ್ರಮಿಸಿದಾಗ ಮೈಸೂರಿನ ದೊರೆ ಸೈನ್ಯದಿಂದ ನೆರವು ಪಡೆದಂತೆ ಸಿಂಹಳದ ಚಾರಿತ್ರಿಕ ದಾಖಲೆಗಳಿಂದ ತಿಳಿದುಬರುತ್ತದೆ. (ಗೇಗರ್ ಅವರ ಮಹಾವಂಶ ಪುಟ-೮೨) ಇಳಂಗೋ ಅಡಿಗಳ (ಸು. ಕ್ರಿ.ಶ. ೪೬೫) ಶಿಲಪ್ಪದಿಕಾರಂ ಮಹಾ ಕಾವ್ಯದಲ್ಲಿ ಕ್ರಿ.ಶ. ೩ನೇ ಶತಮಾನದಲ್ಲಿದ್ದ ಚೇರರಾಜ ಶೆಂಗುಟ್ಟವನು ಕನ್ನಡಿಗರ ನೃತ್ಯವೊಂದನ್ನು ವೀಕ್ಷಿಸಿದನೆಂಬ ಪ್ರಸ್ತಾಪ ಬರುತ್ತದೆ. ಆರ್. ನರಸಿಂಹಾಚಾರ್ (History of Kannada Language ಪುಟ-೪೭-೪೮) ಕ್ರಿ.ಶ. ಎರಡನೇ ಶತಮಾನದಲ್ಲಿದ್ದ ಅವ್ವೈಯಾರ್ ಹೆಸರಿಗೆ ಆರೋಪಿಸಲಾದ ಮತ್ತು ತೊಲಕಾಪ್ಪಿಯಮ್ ಗ್ರಂಥದ (ಇದು ತಮಿಳು ಗ್ರಂಥಗಳಲ್ಲಿ ಅತ್ಯಂತ ಪ್ರಾಚೀನ) ವ್ಯಾಖ್ಯಾನವೊಂದರಲ್ಲಿ ಉದ್ಧೃತವಾದ ಹೇಳಿಕೆಯೊಂದರಲ್ಲಿ ಕನ್ನಡಿಗರನ್ನು ಕುರಿತ ಅನುದಾರವಾದ ಒಂದು ಪ್ರಸ್ತಾಪವಿದೆ. ಆ ಪದ್ಯದಲ್ಲಿ ಹೀಗೆ ಹೇಳಿದೆ; ಬುದ್ಧಿವಂತರು ಈ ಕೆಳಗಿನ ಆರು ಕಡೆ ಸುಳಿಯುವುದಿಲ್ಲ. ವಡೂಗರ್ (ತೆಲುಗರು) ಅರುವಲರ್ (ಒಂದು ಮೂಲದ ತಮಿಳು ನಿವಾಸಿಗಳು) ಕರುನಾಟರ್ (ಕನ್ನಡಿಗರು)". (ಅನುವಾದ: ಡಾ. ಕೆ. ಮರುಳಸಿದ್ದಪ್ಪ)

ಡಿ.ಎಲ್. ನರಸಿಂಹಾಚಾರ್ ಅವರ ಪ್ರಕಾರ ಕನ್ನಡ ಭಾಷೆ ಮತ್ತು ಸಾಹಿತ್ಯವು ಕ್ರಿ.ಪೂ.ದಿಂದಲೂ ಅನುಷ್ಠಾನದಲ್ಲಿತ್ತು ಎಂಬುದು ಸ್ಪಷ್ಟವಾಗುತ್ತದೆ.

The Oxyrhynchus Papyri Part II ಎಂಬ ಗ್ರಂಥದಲ್ಲಿ ೪೧೩ನೆಯ ಸಂಖ್ಯೆಯ ಒಂದು ವಲ್ಕ ಲೇಖವಿದೆ. ಇದರಲ್ಲಿ ಚಿಕ್ಕದೊಂದು ಗ್ರೀಕ್ ಪ್ರಹಸನ ಬರೆಯಲ್ಪಟ್ಟಿದೆ. ಇದರಲ್ಲಿ ಕಂಡುಬರುವ ಗ್ರೀಕೇತರವಾದ ಹಾಗೂ ಅಪರಿಚಿತವಾದ ಕೆಲವು ಪದಗಳು ಕನ್ನಡ ಭಾಷೆಯದಾಗಿರಬಹುದೆಂಬ ಅಭಿಪ್ರಾಯವನ್ನು ಶಾಸನತಜ್ಞ E. ಹುಲ್ಷ್ ಎಂಬ ವಿದ್ವಾಂಸರು Remarks on a papyrus from Oxyrhynchus ಪುಟ-೩೦೯-೪೦೫ರಲ್ಲಿ ಹೇಳುತ್ತಾರೆ. ಬಿ.ಎಲ್. ರೈಸ್, ಗ್ರಿಯರ್ಸನ್, ಆರ್. ನರಸಿಂಹಾಚಾರ್, ಇ.ಪಿ. ರೈಸ್, ಸಾಲತ್ತೊರೆ, ಗೋವಿಂದ ಪೈ ಇದನ್ನು ಒಪ್ಪಿದ್ದಾರೆ. ಪೈ ಅವರಂತೂ ಈ ಬಗ್ಗೆ 'ಗ್ರೀಕ್ ಪ್ರಹಸನದಲ್ಲಿ ಕನ್ನಡ ಮಾತುಗಳು' ಎಂಬ (ಪ್ರಬುದ್ಧ ಕರ್ನಾಟಕ ೧೧-೧-೧೯೨೯ರಲ್ಲಿ,) ಒಂದು ಲೇಖನವನ್ನೇ ಬರೆದು ಅವು ಕನ್ನಡ ಪದಗಳೆಂದು ವಾದಿಸಿದ್ದಾರೆ.

ಕ್ರಿ.ಶ. ೧೧೫ರಲ್ಲಿದ್ದ ಗ್ರೀಕ್ ಭೂಗೋಳಶಾಸ್ತ್ರಜ್ಞ ಹಾಗೂ ಖಗೋಳ ಶಾಸ್ತ್ರಜ್ಞನು ತನ್ನ ಪ್ರಾಚೀನ ಭಾರತದ ಭೂಗೋಳಶಾಸ್ತ್ರ ಎಂಬ ಗ್ರಂಥದಲ್ಲಿ ಕರ್ನಾಟಕದ ಕೆಲವು ಪಟ್ಟಣ ಮತ್ತು ಭೂಭಾಗಗಳ ಹೆಸರನ್ನು ಉಲ್ಲೇಖಿಸುತ್ತಾನೆ. Badiamaioi (ಬಾದಾಮಿ) Inde (ಇಂಡಿ) Kalligeria (ಕಲಿಕೇರಿ) Modogoulla (ಮುದಗಲ್ಲ) Petiragula (ಪಟ್ಟದಕಲ್ಲು) Banaovosei (ಬನವಾಸಿ) Tagara (ತಗರ) Baithana (ಬೈರೂರು) Sirimalagu (ಮಳಖೇಡ) Aloe (ಎಲ್ಲಾಪುರ) ಮತ್ತು Pasage (ಪಲಸಿಗೆ)ಗಳ ಹೆಸರನ್ನು ಹೇಳುತ್ತಾನೆ. (ಟಾಲೆಮಿಯ ಹಿಪೋ ಕೌರಾ - ಗೋವಿಂದ ಪೈ - ಪ್ರಬುದ್ಧ ಕರ್ನಾಟಕ ಸಂ. ೩೩, ಸಂಚಿಕೆ. ೧) ಇವು ಪ್ರಾಚೀನ ಕರ್ನಾಟಕದ ಪಟ್ಟಣಗಳು ಮೇಲಿನ ಊರುಗಳೆಲ್ಲಾ ಕನ್ನಡ ಮೂಲದವಾಗಿದ್ದು ಕ್ರಿ.ಪೂ.ದಲ್ಲಿಯೇ ವ್ಯಾಪಾರ ಸಂಪರ್ಕಗಳನ್ನು ಬೆಳೆಸಿದ್ದ ಅಭ್ಯುದಯ ನಾಡನ್ನು ಸೂಚಿಸುತ್ತವೆ. ಟಾಲೆಮಿಯ ಇದೇ ಗ್ರಂಥದಲ್ಲಿ ಪೌನ್ನಾಟ (ಪೂನ್ನಾಟ)ದ ವಿಷಯ ಬರುತ್ತದೆ. ಇದು ವಜ್ರ ವೈಡೂರ್ಯಗಳನ್ನೂ ಸೂಚಿಸುತ್ತದೆ. Malippala ಹೆಸರು ಮಲ್ಪೆಯಾಗಿರಬಹುದು. Larika ಮತ್ತು Kandaloi ನಾಡುಗಳ ಹೆಸರನ್ನು ಉಲ್ಲೇಖಿಸುತ್ತಾನೆ. ಇವು ಕ್ರಮವಾಗಿ ರಾಷ್ಟ್ರಿಕ ಮತ್ತು ಕುಂತಲಗಳು ಎಂದು ಹೇಳುತ್ತಾರೆ. Arika Sadinon ಎಂಬ ಪ್ರಸ್ತಾಪವು ಆರ್ಯಕ ಶಾತಕರ್ಣಿಯದಾಗಿರಬಹುದು. ಪೈಠಣ, ಬನವಾಸಿ, ಬಾದಾಮಿ, ಪಟ್ಟದ ಕಲ್ಲು ಮೊದಲಾದವು ಪ್ರಸಿದ್ಧ ವ್ಯಾಪಾರ ಕೇಂದ್ರಗಳಾಗಿದ್ದು ಕರ್ನಾಟಕವು ಸಾಂಬಾರ ಪದಾರ್ಥಗಳು, ಶ್ರೀಗಂಧ, ಬಟ್ಟೆಗಳನ್ನು ಇಟಲಿಯ ರೋಮ್ ಪಟ್ಟಣಕ್ಕೆ ರಫ್ತು ಮಾಡುತ್ತಿತ್ತೆಂಬ ವಿಚಾರಗಳು ಟಾಲೆಮಿ ಮತ್ತು ಇತರ ಗ್ರಂಥಗಳಿಂದ ತಿಳಿದುಬರುತ್ತದೆ. (Mac-Grimelle; Ancient India as Discribed by Ptolemy ಪುಟ-೧೬೭, ೧೭೧, ೧೭೫, ೧೭೬, ೧೮೦, ೧೮೧, ೩೩೪.)

ಹಾಲರಾಜನ 'ಗಾಥಾಸಪ್ತಶತಿ' (ಕ್ರಿ.ಶ. ೨೦೦)ಯಲ್ಲಿ ಪೊಟ್ಟತುಪ್ಪದಂತಹ ಕನ್ನಡ ಶಬ್ದಗಳು, ತೀರ್ ಅಂದರೆ ಸಮರ್ಥವಾಗು, ಪಿಟ್ಟು ಅಂದರೆ 'ಬಡಿ' ಇಂತಹ ಪ್ರಾಚೀನ ಕನ್ನಡ ಧಾತುಗಳು ಕಂಡುಬರುತ್ತವೆ. ಈ ಪ್ರಾಕೃತ ಗ್ರಂಥದಲ್ಲಿನ 'ಕನ್ನಡ ಪದಗಳು ಕ್ರಿ.ಶ.ಕ್ಕಿಂತ ಪೂರ್ವದಲ್ಲಿಯೇ ಬೆಳೆಯುತ್ತಿದ್ದ ಕನ್ನಡ ಭಾಷೆ ಸ್ವರೂಪವನ್ನು ಸೂಚಿಸುತ್ತವೆ' ಎಂಬ ಅಭಿಪ್ರಾಯವನ್ನು ಗೋವಿಂದ ಪೈ, ರಂ.ಶ್ರೀ. ಮುಗಳಿ ಮುಂತಾದ ವಿದ್ವಾಂಸರು ವ್ಯಕ್ತಪಡಿಸಿದ್ದಾರೆ.

"ವೇದಕಾಲದಲ್ಲಿಯೂ ಕನ್ನಡ ಭಾಷೆ ಇತ್ತೆಂದು ಸ್ಥಾಪಿಸಲು ಹಿಂದೆ ಪ್ರಯತ್ನಗಳು ನಡೆದಿದ್ದವು. ರೆ| ಹೆರಾಸ್ ಅಂಥ ಘನವಿದ್ವಾಂಸರು ವೇದಪೂರ್ವಕಾಲದ ಮೊಹೆಂಜೋದಾರೋ ಮತ್ತು ಹರಪ್ಪ ಸಂಸ್ಕೃತಿಗಳಿಗೆ ಸೇರಿದ ಮುದ್ರಿಕೆಗಳಲ್ಲಿ ಕನ್ನಡ ಜನಗಳ ಉಲ್ಲೇಖವಿದೆಯಂದು ಭಾವಿಸಿದ್ದರು. ಆದರೆ ಇವೆಲ್ಲಾ ಇನ್ನೂ ಊಹಾಪೋಹಗಳು. ಈಜಿಪ್ಟಿನ ಆಕ್ಸಿರಿಂಖಸಿನಲ್ಲಿ ದೊರೆತ ಗ್ರೀಕ್ ಪ್ರಹಸನವೊಂದರಲ್ಲಿ ಸಿಕ್ಕುವ ಸಾಮಗ್ರಿಯೇ ಕನ್ನಡದ ಆರಂಭಕ್ಕೆ ಸಂಬಂಧಿಸಿದ ಮೊಟ್ಟಮೊದಲನೆಯ ಆಧಾರವೆಂಬುದು ಕೆಲವರ ಅಭಿಪ್ರಾಯ. ಭಾರತದ ಕರಾವಳಿ ಪ್ರದೇಶಕ್ಕೆ ಓಡಿಸಿಕೊಂಡು ಬಂದ ಗ್ರೀಕ್ ಹುಡುಗಿಯೊಬ್ಬಳ ಕತೆಯನ್ನು ಕುರಿತದ್ದು ಈ ಪ್ರಹಸನ. ಈ ಕತೆ ನಡೆಯುವ ಸ್ಥಳ ಮೈಸೂರು ಕರಾವಳಿ ಪ್ರದೇಶದ ಉಡುಪಿಯ ಹತ್ತಿರ ಮಲ್ಪೆ. ಈ ಪ್ರಹಸನ ಕ್ರಿ.ಶ. ೩ನೇ ಶತಮಾನಕ್ಕೆ ಸೇರಿದ್ದೆಂದು ನಿರ್ಧರಿಸಲಾಗಿದೆ. ಈ

ಪ್ರಹಸನದ ಸಾಕಷ್ಟು ಭಾಗದ ಸಂಭಾಷಣೆ ಗ್ರೀಕ್ ಭಾಷೆಗಿಂತ ಬೇರೆಯಾದ ಮತ್ತೊಂದು ಭಾಷೆಯಲ್ಲಿದೆ. ಈ ಭಾಷೆ ಕನ್ನಡವೆಂದು ದಿ. ಡಾ. ಹುಲ್ಷ್ ಅವರು (ಜರ್ನಲ್ ಆಫ್ ದಿ ರಾಯಲ್ ಏಷ್ಯಾಟಿಕ್ ಸೊಸೈಟಿ ೧೯೦೪–ಪು. ೩೯೯) ನಿರ್ಧರಿಸಿದರು. ಈ ನಿಲುವನ್ನೇ ದಿ. ಗೋವಿಂದ ಪೈ ಅವರು ಸಮರ್ಥಿಸಿದರು. ಅವರು ಗ್ರೀಕ್ ಪ್ರಹಸನದಲ್ಲಿ ಬರುವ ಆ ಗ್ರೀಕೇತರ ಭಾಷೆಯನ್ನು ಆಳವಾಗಿ ಅಭ್ಯಾಸ ಮಾಡಿ ಅದು ಕನ್ನಡವೇ ಎಂದು ಅದು ಬೇರೆ ಯಾವ ಭಾಷೆಯಾದರೂ ಆಗಿರಲು ಸಾಧ್ಯವಿಲ್ಲವೆಂದು ಇದು ಕೊನೆಯ ತೀರ್ಮಾನವೆಂದು ಸ್ಪಷ್ಟವಾಗಿ ಪ್ರಬುದ್ಧ ಕರ್ನಾಟಕ ಸಂಪುಟ ೧೧ರಲ್ಲಿ ಹೇಳಿದ್ದಾರೆ. ಈ ವಿಷಯದಲ್ಲಿ ಆಕ್ಷೇಪಣೆಯೆತ್ತುವ ಬೇರೆ ಕೆಲವು ಸೂಚನೆಗಳು ತಲೆದೋರುತಿದ್ದವಾದರೂ ಕ್ರಮೇಣ ಅಭಿಪ್ರಾಯ ಮಾರ್ಪಡುತ್ತಾ ಬಂದು ಇಲ್ಲಿ ಚರ್ಚೆಗೆ ವಿಷಯವಾಗಿರುವ ಭಾಷೆ ಕನ್ನಡವಾಗಿರುವುದು ಅಸಂಭವವೇನಲ್ಲ ಎಂಬ ಅಭಿಪ್ರಾಯಕ್ಕೆ ಹೆಚ್ಚು ಹೆಚ್ಚು ಹತ್ತಿರವಾಗುತ್ತಾ ಬಂತು. ಈ ಆಧಾರದ ಮೇಲೆ ಡಾ. ಎಲ್.ಡಿ. ಸ್ವಾಮಿಕಣ್ಣು ಪಿಳ್ಳೆಯವರು ದಿಟ್ಟತನದಿಂದ ಕನ್ನಡವು ತಮಿಳಿನ ಸೋದರಿಯಾಗಿದ್ದಿರಬೇಕೆಂದು ಹೇಳಿರುವುದನ್ನು ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ ಅವರು "The Beginings of South Indian History ಪುಟ–೨೯೩ರಲ್ಲಿ ಉಲ್ಲೇಖಿಸಿದ್ದಾರೆ. ಕ್ರಿ.ಶ. ಒಂದು ಅಥವಾ ಎರಡನೇ ಶತಮಾನಕ್ಕೆ ಸೇರಿದ ಪ್ರಾಕೃತ ಗ್ರಂಥ 'ಗಾಥಾ ಸಪ್ತಶತಿ'ಯಲ್ಲಿ ಪ್ರಯೋಗವಾಗಿರುವ ಅನೇಕ ಶಬ್ದಗಳ ಮೂಲ ಯಾವುದೆಂಬುದರಲ್ಲಿ ಸಂದೇಹಾಸ್ಪದವಿದೆ. ಉದಾಹರಣೆಗೆ ತುಪ್ಪ, ಪೊಟ್ಟೆ, ತೀರ್ ಮುಂತಾದುವುಗಳು ಇವು ಪ್ರಾಕೃತದಲ್ಲಿ ಯಾವ ಅರ್ಥದಲ್ಲಿ ಪ್ರಯೋಗವಾಗಿದೆಯೋ ಅದೇ ಅರ್ಥದಲ್ಲಿ ಕನ್ನಡ ಪ್ರೌಢಕಾವ್ಯಗಳಲ್ಲಿ ಪ್ರಯೋಗಿಸಲ್ಪಟ್ಟಿವೆ. ಈ ಪದಗಳು ಕನ್ನಡದಿಂದ ಪ್ರಾಕೃತಕ್ಕೆ ಸ್ವೀಕೃತ ಪದಗಳಾಗಿ ಹೋಗಿರಬಹುದೆಂಬ ಊಹೆಯನ್ನು ಸಂದೇಹಿಸಬಹುದಾದರೂ ಪೂರ್ತಿಯಾಗಿ ನಿರಾಕರಿಸುವಂತಿಲ್ಲ. ಕ್ರಿ.ಶ. ಆರಂಭ ಕಾಲದಲ್ಲಿ ಪ್ರಾಕೃತ ಭಾಷೆ ಕರ್ನಾಟಕದಲ್ಲೆಲ್ಲಾ ಹರಡಿ ವಿಶೇಷವಾಗಿ ವ್ಯಾಪಿಸಿರುವ ಫಲವಾಗಿ ಪರಸ್ಪರ ಪ್ರತಿಕ್ರಿಯೆ ನಡೆದು ಕೊಳುಕೊಡೆಯೇರ್ಪಟ್ಟು ಅಂದಿನ ಪ್ರಾದೇಶಿಕ ಭಾಷೆಯಾದ ಕನ್ನಡ ಗ್ರಾಂಥಿಕ ಅಥವಾ ಆಡುಮಾತಿನಲ್ಲಿದ್ದ ಶಬ್ದಗಳು ಅತಿಥಿ ಭಾಷೆಯಲ್ಲಿ ಸೇರಿ ಹೋಗಿದ್ದಿರಬೇಕು. ಹಾಗೆಯೇ ಪ್ರಾಕೃತದ ಶಬ್ದಗಳು ಕನ್ನಡದಲ್ಲಿ ಸೇರಿ ಹೋಗಿರಬೇಕು." (ಕರ್ನಾಟಕ ಪರಂಪರೆ: ಕನ್ನಡ (ಆದಿಕಾಲ) ಎಂ. ಕೇಶವಭಟ್ಟ, ಅನು–ಡಾ. ಕೆ.ಎಂ. ಮರುಳಸಿದ್ಧಪ್ಪ.

ಚಿತ್ರದುರ್ಗ ಬಳಿಯ ಚಂದ್ರವಳ್ಳಿಯಲ್ಲಿ ನಡೆದ ಸಂಶೋಧನೆಯಲ್ಲಿ ಪ್ರಾಚೀನ ರಾಜಧಾನಿಯಾದ ಪಟ್ಟಣವೊಂದು ದೊರೆತಿದೆ. ಅಲ್ಲಿ ಶಾತವಾಹನ ಕಾಲದ ನಾಣ್ಯ ಹಾಗೂ ಇತರೆ ಅವಶೇಷಗಳು ದೊರೆತಿವೆ. ಅವೆಲ್ಲವೂ ಕ್ರಿಸ್ತಶಕಕ್ಕಿಂತ ಪೂರ್ವದಿಂದಲೇ ಅಂದು ಪ್ರಮುಖ ಪಟ್ಟಣಗಳಾಗಿದ್ದು ಇಟಲಿ ಚೀನಾ ದೇಶಗಳೊಡನೆ ವ್ಯಾಪಾರವನ್ನು ಸಾಗಿಸುತ್ತಿದ್ದ ಒಂದು ರಾಜ್ಯದ ರಾಜಧಾನಿಯನ್ನು ಸೂಚಿಸುತ್ತದೆ ಎಂದು ಡಾ. ಎಂ.ಎಚ್. ಕೃಷ್ಣ Pre Historic Dakhan ಪುಟ–೨೩೪ರಲ್ಲಿ ಹೇಳುತ್ತಾರೆ.

ಕ್ರಿ.ಶ. ೨೦೦ರ ಆಸುಪಾಸಿಗೆ ಸಂಬಂಧಿಸಿದ ತಮಿಳಿನ ಪ್ರಾಚೀನ ಗ್ರಂಥ ಶಿಲಪ್ಪದಿಕಾರಂನಲ್ಲಿ ಕರ್ನಾಟಕದ ಜನರಿಗೆ ಸಂಬಂಧಿಸಿದ 'ಕರುನಾಟಕ್' ಎಂಬ ಶಬ್ದ ಎರಡು ಸಲ ಬಂದಿದೆ. ವಿ.ಆರ್.ಆರ್. ದೀಕ್ಷಿತಾರ್ ಅವರಿಂದ ಸಂಪಾದಿತವಾಗಿರುವ ಈ ಗ್ರಂಥದಲ್ಲಿ ಅಧ್ಯಾಯ ೨೬ ಸಾಲು ೧೦೫ ರಿಂದ ೧೧೫, ಪುಟ ೨೯೬–೨೮೭ ಮತ್ತು ೧೫೮ನೇ ಸಾಲು ಪುಟ ೨೮೯ರಲ್ಲಿ ಕಾಣಿಸಿಕೊಳ್ಳುತ್ತದೆ.

ಶೂದ್ರಕನ ಮೃಚ್ಛಕಟಿಕದಲ್ಲಿ ವೀರಕ ಚಂದನಕರ (ಅಂಕ ೬–೨೦–೨೧ ಶ್ಲೋಕಗಳ ನಡುವೆ) ಸಂಭಾಷಣೆಗಳ ನಡುವೆ ಕರ್ನಾಟಕವೆಂಬ ಪದ ಎರಡು ಸಲ ಬರುತ್ತದೆ. ಮೃಚ್ಛ ಕಟಿಕದ ಕಾಲ ಕ್ರಿ.ಪೂ. ಅಥವಾ ಕ್ರಿಶಕದ ತೀರ ಪ್ರಾರಂಭ ಕಾಲದಲ್ಲಿ ಎಂದು ತೀರ್ಮಾನವಾದರೆ ಇದು ಅತ್ಯಂತ ಪ್ರಾಚೀನ ಉಲ್ಲೇಖವಾಗುತ್ತದೆ. 'ಕರ್ನಾಟಕ' ಪದವು ಸೋಮದೇವನ ಕಥಾ ಸರಿತ್ಸಾಗರ (ಕ್ರಿ.ಶ. ೧೬೦೦) ಕಂಡುಬರುವುದು. ಇದು ಗುಣಾಢ್ಯನ ಪೈಶಾಚಿ ಭಾಷೆಯ ಬೃಹತ್ಕಥೆಯನ್ನು ಆಧರಿಸಿದೆ. ಆದುದರಿಂದ 'ಕರ್ನಾಟಕ' ಪದದ ಬಳಕೆಯು ಕ್ರಿ.ಶ.ದ ಒಂದು ಅಥವಾ ಎರಡನೇ ಶತಮಾನದಷ್ಟು ಹಿಂದೆ ಹೋಗುತ್ತದೆ. ವಿಂಟರ್‌ನಿಟ್ಸ್ A History of Indian Literature ಅವರ ಸಂಪುಟ ೧, ಪುಟ. ೫೫೬–

೬೦ರಲ್ಲಿ ಮಾರ್ಕೇಂಡೇಯ ಪುರಾಣದಲ್ಲಿ ಕುಂತಲವು ಮಧ್ಯದೇಶಗಳೊಡನೆ ಪ್ರಸ್ತಾಪಿಸಲ್ಪಟ್ಟಿದೆ ಎಂದು ಹೇಳಿದೆ. ಆದರೆ 'ವನವಾಸಿಕ'ವನ್ನು ಮಹಾರಾಷ್ಟ್ರ ಮತ್ತು ಮಹಿಷಕಗಳೊಡನೆ ದಕ್ಷಿಣ ದೇಶಗಳಲ್ಲಿಯೂ ಒಳಗೊಳಿಸಲಾಗಿದೆ. ಮುಂದೆ ಕರ್ನಾಟಕವು ಮಹಾರಾಷ್ಟ್ರದೊಡನೆ ಹೆಸರಿಲ್ಪಟ್ಟಿದೆ. ಇದರಿಂದಾಗಿ ಕನ್ನಡ ಭಾಷೆಯು ಕ್ರಿ.ಶ.ದ ಪ್ರಾರಂಭದ ಕೆಲವು ಶತಮಾನಗಳಿಗೆ ಸೇರಿದ್ದೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಫಾದರ್ ಹೆರಾಸ್ ಅವರು ತಮ್ಮ Karnataka and Mahenjodaro ಎಂಬ ಲೇಖನದಲ್ಲಿ (The Karnataka Historical Review Vol IV, No. 1-2, Page. 1-2) ಮೊಹೆಂಜೋದಾರುವಿನ ಮುದ್ರಿಕೆಯೊಂದರಲ್ಲಿ ಕರ್ನಾಟಕದ ಜನರ ಪರಿಚಯವನ್ನು ನಾಡಿನಲ್ಲಿಯ ಪ್ರಾಚೀನ ಕುಲಗಳಲ್ಲಿ ಒಂದೆಂದು ಕೊಟ್ಟಂತೆ ಇದೆ. 'ಕಣ್ಣ ನೀರ್' ಎಂಬ ಪದ ಬರುತ್ತದೆ. ಇಂದಿಗೂ ಕೂಡ ಕರ್ನಾಟಕದ ಜನರನ್ನು ಹೆಸರಿಸುವಂತಹ ಕನ್ನಡಿಗರೆಂಬ ಹಳೆಯ ಶಬ್ದವು 'ಕಣ್ಣ ನೀರ್' ಎಂಬುದರ ಸಂಸ್ಕೃತದ ಬದಲು ರೂಪವೆಂದು ಫಾದರ್ ಹೆರಾಸ್ ಅವರು ಅಭಿಪ್ರಾಯಪಡುತ್ತಾರೆ. ಅವರ ಮತ್ತೊಂದು ಗ್ರಂಥ (The Religion of the Mahenjodaro People According to the Inscriptions (Bombay University Journal ಸಂಪುಟ ೫, ಪು. ೧) ಇರುವನ್, ವಿಡುಕಣ್, ಎಣ್ಮೆಯ್, ಮೀನ್, ಕಣ್ ಮುಂತಾದ ವಿಶೇಷಣಗಳನ್ನು ಉಲ್ಲೇಖಿಸಿದ್ದಾರೆ. ಈ ಶಬ್ದಗಳು ತಮಿಳಿನವು ಎನ್ನಿಸಿದರೂ ಹಳಗನ್ನಡ ಪದಗಳಿಗೆ ಸಮೀಪವಾಗಿದೆ ಎಂಬುದರಲ್ಲಿ ಸಂಶಯವಿಲ್ಲ.

ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರಿಯವರು ತಮ್ಮ 'ಅಭಿಜಾತ ಭಾಷೆಯಾಗಿ ಕನ್ನಡ' ಎಂಬ ಲೇಖನದಲ್ಲಿ ಡಾ. ಹರಿಲಾಲ್ ಜೈನ್ ಅವರು ಸಂಪಾದಿಸಿರುವ ಪ್ರಾಕೃತ ಗ್ರಂಥ Chatkhandagama ಒಂದು ಅಥವಾ ಎರಡನೇ ಶತಮಾನಕ್ಕೆ ಸಂಬಂಧಿಸಿದ್ದೆಂದು ಹೇಳುತ್ತಾ ಇದರಲ್ಲಿರುವ ಉಲ್ಲೇಖಗಳನ್ನು ಕರ್ನಾಟಕ, ಕನ್ನಡ ಭಾಷೆಯ ಉಲ್ಲೇಖಗಳನ್ನು ಪ್ರಸ್ತಾಪಿಸುತ್ತಾರೆ. ಅವು ಹೀಗಿವೆ.

ಪ್ರಾಕೃತ ಸಂಸ್ಕೃತ ಕರ್ನಾಟಭಾಷಯಾ ಪದ್ಧತಿ ಕ್ಷರಾ ರಚಿತಾ। ಕರ್ನಾಟಭಾಷ ಯಾಕೃತ ಮಹತೀಂ ಚೂಡಾಮಣಿಂ ವ್ಯಾಖ್ಯಾನಂ।
ಇವು ಕನ್ನಡ ಭಾಷೆಯ ಬಗ್ಗೆ ಹೇಳುತ್ತವೆ.




ಡಾ. ಶಂಬಾ ಜೋಶಿ ಅವರು ತಮ್ಮ 'ಕನ್ನಡದ ನೆಲೆ' ಎಂಬ ಗ್ರಂಥದಲ್ಲಿ ವೈದಿಕ ಪುರಾಣ ಹಾಗೂ ನಿರುಕ್ತ (ಶಬ್ದಶಾಸ್ತ್ರ)ಗಳ ಅಭ್ಯಾಸ ಮಾಡಿ ಕನ್ನಡ ಜನರ ಹಾಗೂ ಭಾಷೆಯ ಪ್ರಾಚೀನತೆಯನ್ನು ವೈದಿಕ ಕಾಲದಲ್ಲಿ ಕಾಣುವಂತಹ ವಿಚಾರಗಳನ್ನು ಮಂಡಿಸಿದ್ದಾರೆ. ಅವರ ಹೇಳಿಕೆಯ ಸಂಕ್ಷಿಪ್ತರೂಪ ಇದು:

"ಕರ್ನಾಟಕವೆಂಬುದು ಕನ್ನಡ ಎಂಬುದರ ಸಂಸ್ಕೃತರೂಪ. ಕನ್ನಡವೆಂಬುದು ಕನ್+ನಾಡು ಎಂಬ ಎರಡು ಶಬ್ದಗಳಿಂದ ಉಂಟಾಗಿದ್ದು ಮೂಲತಃ ಕನ್ನಡ ದೇಶವನ್ನು ಹೇಳುತ್ತದೆ. 'ಕನ್' ಎಂಬುದು ತರುವಾಯದ ಕನ್ನಡ ಜನಕ್ಕೆ

ಮೂಲವಾದ ಕನ್ನ (ಕಣ್ಣ) ಕುಲದ ಹೆಸರು. ಕನ್ನರು ತೀರಾ ಪ್ರಾಚೀನ ಆರ್ಯಪೂರ್ವ ದ್ರಾವಿಡರಾದ ಕಳವರ ಅಥವಾ ಕಳ್ಳರದೇ ಒಂದು ಕವಲು. ಕಳ್ಳರು ಋಗ್ವೇದ ಕಾಲದವರು. ದನಕರುಗಳನ್ನು ಸಾಕುವುದು ಮತ್ತು ಅವುಗಳನ್ನು ಎತ್ತಿ ಹಾಕುವುದೇ ಅವರ ಉದ್ಯೋಗ. ರುದ್ರಶಿವನೇ ಅವರ ದೇವತೆ ಎಂಬುದು "ಸ್ತೇನಾನಾಂ ಪತಯೇ ನಮಃ" ಮುಂತಾದ ಮಂತ್ರಗಳಿಂದ ತಿಳಿದು ಬರುತ್ತದೆ. ಕಳವರ ಕುಲವು ಮೂಲ ದ್ರಾವಿಡವಾದರೆ ಕನ್ನರ ಕುಲವು ಆರ್ಯದ್ರಾವಿಡ. ಅದು ಋಗ್ವೇದ ಕಾಲದಲ್ಲಿಯೇ ಪ್ರಾರಂಭವಾಗಿ ಕರ್ನಾಟಕ ಸಂಸ್ಕೃತಿಗೆ ಜನ್ಮವಿತ್ತ ಆರ್ಯದ್ರಾವಿಡ ವಂಶಗಳ ಮಿಶ್ರಣದ ಫಲ" (ಕನ್ನಡದ ನೆಲೆ ಪು. ೨೪)

ಡಾ. ಜಾಕೋಬಿ ಮತ್ತು ಡಾ.ಆರ್.ಡಿ. ಭಂಡಾರ್ಕರ್ ಅವರ ಮಾತುಗಳನ್ನು Some Linguistic Notes - 1HQ. ಸಂ. ೯, ಸಂಚಿಕೆ–೧ರಲ್ಲಿ ಉಲ್ಲೇಖಿಸಿರುವ ಡಾ. P.C. Bagchi ಅವರು ವೇದ ಹಾಗೂ ಉಪನಿಷತ್ತುಗಳಲ್ಲಿ ಬರುವ ಮಟಚೆಯು ಮಿಡಿಚೆ ಎಂಬ ಕನ್ನಡ ಶಬ್ದದ ಸಂಸ್ಕೃತ ರೂಪವೆಂದು ಗ್ರಹಿಸಿದ್ದಾರೆ.

ಡಾ. ಬೇಂದ್ರೆಯವರು ತಮ್ಮ 'ಸಾಹಿತ್ಯ ಸಂಶೋಧನೆ' ಪುಟ. ೧೫೬–೧೫೭ರಲ್ಲಿ "ಇತಿಹಾಸ ಪುರಾಣ ಕತೆಗಳಿಗೆ ಪರಿಚಿತರಾದ ಕಣ್ವರು ಅಥವಾ ಕಾಲೆಯರು ಮತ್ತು ನರ ಅಥವಾ ನಾಟರೇ ಅವರು. ನಾಟರು ಕಾಲೆಯರೊಡನೆ ಬೆರೆತು, ಕಾಳಿಂದ ಪರ್ವತ, ಕಾಳಿಂದೀನದಿ, ಕಲಿಂಗ ದೇಶದಿಂದ ಪಶ್ಚಿಮ ಸಮುದ್ರದವರೆಗಿನ ಎಲ್ಲಾ ಕ್ಷೇತ್ರಗಳಲ್ಲಿ ವ್ಯಾಪಿಸಿದ್ದು ಮತ್ತು ಕರ್ನಾಟಕದ ಕುಲದ ಬೆಳವಣಿಗೆಗೆ ಕಾರಣರಾದರು ಮೇಲೆ ಹೇಳಿದ ಕುಲಗಳಲ್ಲಿ ಕಳ್ ಮತ್ತು ನಾಡ ಎಂಬ ಕನ್ನಡ ಶಬ್ದದ ಮಿಶ್ರಣ. ಈ ವಂಶ ಮಿಶ್ರಣವನ್ನು ಸೂಚಿಸುವುದರಿಂದ ಈ ಕುಲಗಳನ್ನು ವೇದಪೂರ್ವ ಕಾಲದಲ್ಲಿ ಸಹ ಕಾಣಿಸಲಾಗಿರುವುದರಿಂದ ಈ ಮಿಶ್ರಕುಲವಾದ ಕನ್ನಡ ಜನವು ಎಷ್ಟೋ ಶತಮಾನಗಳ ಹಿಂದೆಯೇ ಇದ್ದಿರಬಹುದು" ಎಂಬ ವಿಚಾರವನ್ನು ಮಂಡಿಸುತ್ತಾರೆ.

ಇದೇ ರೀತಿಯಾಗಿ ಡಾ. ಭ. ಕೃಷ್ಣಮೂರ್ತಿ, ಡಾ. ಎಂ.ಎಸ್. ಆಂಡ್ರೋನೋವ್ (ರಷ್ಯಾದ ಪ್ರಸಿದ್ಧ ವಿದ್ವಾಂಸ) ಬಿ.ಎಲ್. ರೈಸ್, ರೆವರೆಂಡ್ ಕಿಟ್ಟೆಲ್, ಜೆ.ಎಫ್. ಫ್ಲೀಟ್, ಡಾ. ಕೆ. ಕುಶಾಲಪ್ಪಗೌಡ ಇವರೆಲ್ಲರೂ ತಮ್ಮ ಸಂಶೋಧನಾ ಕೃತಿಗಳಲ್ಲಿ ಕನ್ನಡವು ಕ್ರಿ.ಪೂ. ೩ನೇ ಶತಮಾನದಿಂದ ತನ್ನ ಅಸ್ತಿತ್ವವನ್ನು ಕಂಡುಕೊಂಡು ಹಂತಹಂತವಾಗಿ ಬೆಳೆದು ಕ್ರಿ.ಶ. ನಾಲ್ಕನೇ ಶತಮಾನದಷ್ಟೊತ್ತಿಗೆ ಅದು ಆಡಳಿತ ಭಾಷೆಯಾಗುವಷ್ಟು ಸಾಮರ್ಥ್ಯವನ್ನು ಪಡೆದುಕೊಂಡಿತು. ಹಾಗೆಯೇ ಅದರಲ್ಲಿ ಹೇರಳವಾದ ಸಾಹಿತ್ಯ ಸೃಷ್ಟಿಯೂ ಆಯಿತು ಹಾಗೂ ೧೫೫೦ ವರ್ಷಗಳಷ್ಟು ಹಿಂದೆಯೇ ಸಾಹಿತ್ಯ ರಚನೆಯೂ ಕೂಡಾ ಆಗಿತ್ತು ಎಂಬುದನ್ನು ಆಧಾರಗಳೊಂದಿಗೆ ವಿವರಿಸಿದ್ದಾರೆ.

ಶ್ರೀ ಪಿ.ಎಸ್. ಸುಬ್ರಹ್ಮಣ್ಯಂ ಅವರ Dravidian Morphology, A Comparative Study (ಅಣ್ಣಾ ಮಲೈ ವಿಶ್ವವಿದ್ಯಾಲಯ–೧೯೭೧) ಗ್ರಂಥದಲ್ಲಿ ಮೊದಲು ಒಂದೇ ಆಗಿದ್ದ ದ್ರಾವಿಡ ಭಾಷೆಗಳು ಯಾವ ರೀತಿ ಟಿಸಿಲೊಡೆದವು ಎಂಬುದನ್ನು ವಿವರವಾಗಿ ಚರ್ಚಿಸಿದ್ದಾರೆ. ಅದರಲ್ಲಿ ಕನ್ನಡ ಮತ್ತು ತಮಿಳು ಏಕಕಾಲದಲ್ಲಿ ಟಿಸಿಲೊಡೆದು ಸ್ವತಂತ್ರ ಭಾಷೆಗಳಾಗಿ ಬೆಳೆದವು ಎಂಬುದನ್ನು ಹೇಳಿದ್ದಾರೆ. ಆದುದರಿಂದ ಕನ್ನಡವು ತಮಿಳಿನಷ್ಟೇ ಪ್ರಾಚೀನವಾದದ್ದು ಎಂಬುದರಲ್ಲಿ ಎರಡು ಮಾತಿಲ್ಲ.

ಪ್ರಾಚ್ಯ ಸಂಶೋಧನೆಯಿಂದ ಚಂದ್ರವಳ್ಳಿ, ಬ್ರಹ್ಮಗಿರಿ, ಮಾಸ್ಕಿ, ಹೆರಕಲ್ ಮುಂತಾದ ಸ್ಥಳಗಳಲ್ಲಿ ದೊರೆತಿರುವ ಮಾಹಿತಿಗಳು ಅವಶೇಷ ಸ್ಮಾರಕ ಹಾಗೂ ಶಾಸನಗಳಿಂದ ಕರ್ನಾಟಕವು ಸಾವಿರಾರು ವರ್ಷಗಳ ವೈಭವಪೂರ್ಣವಾದ ಇತಿಹಾಸವನ್ನೊಳಗೊಂಡಿದೆ ಎಂದು ಹೇಳಬಹುದು. ಈ ದಿಕ್ಕಿನಲ್ಲಿ ಎಂ.ಎಚ್. ಕೃಷ್ಣ ಅವರ Pre Historic Dakhan ಎಂಬ ಸಂಶೋಧನಾತ್ಮಕ ಗ್ರಂಥದಲ್ಲಿನ ವಿಚಾರಗಳು ಹೆಚ್ಚು ಅಧಿಕೃತವಾದವುಗಳು. ಅವರ ಮಾತುಗಳು ಹೀಗಿವೆ:

"ಮೈಸೂರಿನ ಪೂರ್ವೇತಿಹಾಸ ಪುರಾತನ ಶಿಲಾಯುಗದ ಕಾಲಕ್ಕೆ ಹೋಗುತ್ತದೆ. ಪುರಾತನ ಮಧ್ಯ ಅರ್ವಾಚೀನ ಹಾಗೂ ನವಶಿಲಾಯುಗ ಮತ್ತು ಲೋಹ ಯುಗಗಳ ಸಂಸ್ಕೃತಿಯನ್ನು ಹೋಲುವ ಪ್ರಮಾಣಗಳು ಇತಿಹಾಸದ ಪ್ರಾರಂಭಕ್ಕಿಂದ ಮುಂಚೆ ದೊರಕುತ್ತವೆ". ಪುಟ–೨೩.

"ನಾನು 'ಇಸಿಲ' ಸಂಸ್ಕೃತಿಯೆಂದು ಕರೆದಿದ್ದ ಅಥವಾ ಇತಿಹಾಸ ಪೂರ್ವ 'ಆಯಸ' ಸಂಸ್ಕೃತಿಯು ಮೈಸೂರು ಸಂಸ್ಥಾನದ ಉತ್ತರ ಜಿಲ್ಲೆಗಳಿಂದ ಹಿಡಿದು ಹೈದರಾಬಾದಿನ ನೈರುತ್ಯದ ಜಿಲ್ಲೆಗಳವರೆಗೆ, ಮುಂಬಯಿ ಪ್ರಾಂತ್ಯದ ಆಗ್ನೇಯ ಜಿಲ್ಲೆಗಳಿಂದ ಮದ್ರಾಸ್ ಪ್ರಾಂತ್ಯದ 'ದತ್ತ ಮಂಡಲ'ಗಳವರೆಗೆ ವ್ಯಾಪಿಸಿತ್ತು (ಪುಟ–೨೫೧.)
ಮೇಲಿನ ವಿಚಾರಗಳ ಹಿನ್ನೆಲೆಯಲ್ಲಿ ರಂ.ಶ್ರೀ. ಮುಗಳಿಯವರು "ದಕ್ಷಿಣದ ಪೂರ್ವೇತಿಹಾಸದಲ್ಲಿ ಕರ್ನಾಟಕವು ಸ್ವತಂತ್ರವಾದ ವ್ಯಕ್ತಿತ್ವ ಪಡೆದುದರ ಚರಿತ್ರೆ ಇನ್ನೂ ಅಜ್ಞಾತವಾಗಿದೆ. ಆದರೂ ಇತಿಹಾಸ ಕಾಲಕ್ಕೆ ಸಮೀಪವಾದ ಇತಿಹಾಸ ಪೂರ್ವ ಕಾಲದಲ್ಲಿ ಪ್ರಾಚೀನ ಕರ್ನಾಟಕವು ಬಾಳಿದ್ದಿರಬೇಕು ಹಾಗೂ 'ಇಸಿಲ' ಸಂಸ್ಕೃತಿ ಎಂಬುದು ದೂರದ ಭೂತಕಾಲದಲ್ಲಿ ಕನ್ನಡ ಜನವು ಮುಟ್ಟಿದ ನಾಗರಿಕತೆಯ ತೀರ ಮೊದಲಿನ ಅವಸ್ಥೆಯಾಗಿದ್ದಿರಬೇಕೆಂಬುದು ನ್ಯಾಯವಾದದ್ದು" ಎಂದಿದ್ದಾರೆ.

ಮೇಲಿನ ಎಲ್ಲಾ ವಿವರಗಳಿಂದ ನಮಗೆ ಕನ್ನಡ ಭಾಷೆಯ ದಾಖಲಿತ ಚರಿತ್ರೆ/ಪ್ರಾಚೀನ ದಾಖಲೆಗಳು ಒಂದೂವರೆ ಸಾವಿರದಿಂದ ಎರಡು ಸಾವಿರ ವರ್ಷಗಳಿಗೂ ಹಿಂದಿನದಾಗಿದೆ ಎಂಬುದು ಸ್ಪಷ್ಟವಾಗುತ್ತದೆ.

**ಮಾನದಂಡ–೨**

**ಆ ಭಾಷೆಯನ್ನಾಡುವ ಜನರು ಮೌಲಿಕವೆಂದು ಭಾವಿಸುವ ಪ್ರಾಚೀನ ಸಾಹಿತ್ಯ ಅಥವಾ ಗ್ರಂಥಗಳು ಆ ಭಾಷೆಯಲ್ಲಿರಬೇಕು**

ಕನ್ನಡದ ಮೊದಲ ಉಪಲಬ್ಧ ಸಾಹಿತ್ಯ ಕೃತಿಯೆಂದರೆ 'ಕವಿರಾಜ ಮಾರ್ಗ'. ಇದರ ಕಾಲ ಕ್ರಿ.ಶ. ೮೫೦. ಇದರ ಕರ್ತೃ ಶ್ರೀವಿಜಯ. ಇವನು ರಾಷ್ಟ್ರಕೂಟ ರಾಜನಾದ ನೃಪತುಂಗನ (ಕ್ರಿ.ಶ. ೮೧೪–೮೭೭) ಆಸ್ಥಾನಕವಿಯಾಗಿದ್ದನು. ಈ ಕೃತಿಯಲ್ಲಿ ಕನ್ನಡ ನಾಡಿನ ವಿಸ್ತಾರಗಳನ್ನು ಸೂಚಿಸಿರುವುದಲ್ಲದೆ ಕನ್ನಡ ಸಾಹಿತ್ಯ ಸಂಸ್ಕೃತಿಯ ಬಗೆಗೆ ಹಲವಾರು ವಿಚಾರಗಳನ್ನು ತಿಳಿಸುತ್ತಾನೆ. ಈ ಗ್ರಂಥದ ಒಂದನೇ ಆಶ್ವಾಸದ ಪದ್ಯ ೩೨, ೪೮, , ೭೫ರಲ್ಲಿ ತನಗೂ ಮುಂಚಿನ' 'ಪಳವಿಗನ್ನಡ'ದ ಪುರಾತನ ಕವಿ ಪೂರ್ವಾಚಾರ್ಯರ ಉಲ್ಲೇಖ ಬರುತ್ತದೆ. ಕನ್ನಡದಲ್ಲಿ ಗದ್ಯಪದ್ಯ ರಚನೆ ಮಾಡಿದ ಅನೇಕರ ಹೆಸರುಗಳು ಆಶ್ವಾಸ ೧ರ ಪದ್ಯ ೨೯, ೩೩ರ ಪದ್ಯಗಳಲ್ಲಿ ಬಂದರೆ ಪ್ರಸಿದ್ಧರಾದ ಪೂರ್ವಕವಿಗಳು ಗದ್ಯಪದ್ಯ ಮಿಶ್ರಣವಾದ 'ಗದ್ಯಕಥಾ' ಪ್ರಬಂಧವೆಂಬ ಪ್ರಕಾರವೊಂದನ್ನು ರಚಿಸಿದ್ದಾರೆಂಬ ವಿಚಾರವನ್ನು ಒಂದನೇ ಆಶ್ವಾಸದ ೨೭ನೇ ಪದ್ಯದಲ್ಲಿ ವಿವರಿಸಲಾಗಿದೆ. ಕನ್ನಡಕ್ಕೆ ವಿಶಿಷ್ಟವಾದ ದೇಸಿ ಸಾಹಿತ್ಯ ರೂಪಗಳಾದ ಚತ್ತಾಣ ಮತ್ತು ಬೆದಂಡೆಯ ಬಗ್ಗೆ ಒಂದನೇ ಆಶ್ವಾಸದ ಪದ್ಯ ೩೨, ೩೪ ಮತ್ತು ೩೫ನೇ ಪದ್ಯದಲ್ಲಿ ಹೇಳಲಾಗಿದೆ. ಈ ಅಂಶಗಳಿಂದ ಕವಿರಾಜಮಾರ್ಗಕಾರನಿಗಿಂತ ಹಿಂದೆ ಕನ್ನಡದಲ್ಲಿ ಅಪಾರ ಸಾಹಿತ್ಯ ಸೃಷ್ಟಿಯಾಗಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ಕವಿರಾಜ ಮಾರ್ಗಕಾರನು ತನಗಿಂತ ಹಿಂದೆ ಇದ್ದ ಶ್ರೀವಿಜಯ, ಕವೀಶ್ವರ, ಪಂಡಿತ ಚಂದ್ರ ಮತ್ತು ಲೋಕಪಾಲ ಎಂಬ ಕವಿಗಳನ್ನು ವಿಮಲೋದಯ, ನಾಗಾರ್ಜುನ ಜಯಬಂಧು ಮತ್ತು ದುರ್ವಿನೀತ ಎಂಬ ಗದ್ಯಲೇಖಕರನ್ನು ಪಟ್ಟಿಮಾಡಿ ಹೇಳುತ್ತಾನೆ.

ದುರ್ವಿನೀತನು ಗಂಗವಂಶದ ರಾಜನಾಗಿದ್ದು ಇವನ ಕಾಲ ಕ್ರಿ.ಶ. ೫೨೦. ಇವನು ದಕ್ಷಿಣ ಕರ್ನಾಟಕದಲ್ಲಿ ಆಳ್ವಿಕೆ ನಡೆಸುತ್ತಿದ್ದು ಉತ್ತಮ ವಿದ್ವಾಂಸನಾಗಿದ್ದನು. ಭಾರವಿಯ ಕಿರಾತಾರ್ಜುನೀಯಕ್ಕೆ ವ್ಯಾಖ್ಯಾನವನ್ನು ಬರೆದನೆಂಬ ದಾಖಲೆಗಳು ಲಭ್ಯವಾಗಿವೆಯಾದರೂ ಆ ಬಗೆಗಿನ ಗ್ರಂಥ ದೊರೆತಿಲ್ಲ.

ಆದರೆ ಮೇಲಿನ ಮಾಹಿತಿಯಿಂದ ಕವಿರಾಜಮಾರ್ಗಕ್ಕಿಂತ ಹಿಂದೆ ಅಂದರೆ ಕ್ರಿ.ಶ. ೮೫೦ಕ್ಕಿಂತ ಹಿಂದೆ ಕನ್ನಡ ಭಾಷೆಯಲ್ಲಿ ಅಪಾರವಾದ ಸಾಹಿತ್ಯ ಸೃಷ್ಟಿಯಾಗಿತ್ತು ಎಂದು ಹೇಳಬಹುದು.

ಪ್ರಾಕ್ತನ ಶಾಸ್ತ್ರ ಸಂಶೋಧನಾ ಸಂಸ್ಥೆ, ಮೈಸೂರು ಇಲ್ಲಿ ನಿರ್ದೇಶಕರಾಗಿದ್ದ ರಾವ್ ಬಹದ್ದೂರ್ ಆರ್. ನರಸಿಂಹಾಚಾರ್ ಅವರು ಅಂದಿನ ಭಾರತ ಸರ್ಕಾರದ ಗೌರವಾನ್ವಿತ ಪ್ರತಿನಿಧಿಯಾಗಿಯೂ ಕಾರ್ಯನಿರ್ವಹಿಸುತ್ತಿದ್ದರು. ಅವರ ಕರ್ನಾಟಕ 'ಕವಿಚರಿತೆ' ಗ್ರಂಥದಲ್ಲಿ ಕನ್ನಡ ಸಾಹಿತ್ಯದ ಪ್ರಾಚೀನತೆ ಕುರಿತ ಒಂದು ಸಂಕ್ಷಿಪ್ತ ಟಿಪ್ಪಣಿ ಇದೆ. ಅದರಲ್ಲಿ ಕವಿರಾಜ ಮಾರ್ಗಕ್ಕಿಂತ ಹಿಂದೆ ಇದ್ದಿರಬಹುದಾದ ಕವಿಗಳ ಮತ್ತು ಗದ್ಯ ಲೇಖಕರನ್ನು ಹೆಸರಿಸುತ್ತಾರೆ. ಅಷ್ಟೇ ಅಲ್ಲ ಅವರ History of Kannada Literature ಪುಸ್ತಕದ ಪುಟ ೧೧ರಲ್ಲಿ "ಕನ್ನಡ ಸಾಹಿತ್ಯವು ತಮಿಳೊಂದನ್ನು ಬಿಟ್ಟು ದಕ್ಷಿಣ ಭಾರತದ ಏಕೆ? ಇಡೀ ಭಾರತದ ಯಾವುದೇ ದೇಶೀಯ ಸಾಹಿತ್ಯಕ್ಕಿಂತ ಹೆಚ್ಚು ಪ್ರಾಚೀನವಾಗಿದೆ" ಎಂದು ಹೇಳುತ್ತಾರೆ. "ಕನ್ನಡಕ್ಕೆ ಅನೇಕ ಭಾರತೀಯ ಭಾಷೆಗಳಿಗಿಂತ ಹೆಚ್ಚು ವಿಸ್ತಾರವೂ ಅನೇಕ ಐರೋಪ್ಯಭಾಷೆ ಹಾಗೂ ಒಂದೆರಡನ್ನು ಬಿಟ್ಟರೆ ಉಳಿದ ಭಾರತದ ಪ್ರಾಚೀನತೆಯ ಭಾಷೆಗಳಿಗಿಂತ ಹೆಚ್ಚು ದೀರ್ಘ ಕಾಲದ್ದೂ ಆದ ಸಾಹಿತ್ಯವಿದೆ" ಎಂದು ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ಅವರು ತಮ್ಮ Popular Culture in Karnataka ಪುಟ–೭ರಲ್ಲಿ ಹೇಳುತ್ತಾರೆ. ಇದರಿಂದಾಗಿ ಕನ್ನಡ ಸಾಹಿತ್ಯವು ೧೫೦೦ ವರ್ಷಗಳ ಪ್ರಾಚೀನತೆಯನ್ನು ಉಳ್ಳದ್ದಾಗಿರುವುದಲ್ಲದೆ ಕನ್ನಡ ಸಾಹಿತ್ಯ ಪರಂಪರೆಯೂ ಎಷ್ಟು ದೀರ್ಘವಾದದ್ದು ಚಲನಶೀಲವಾದದ್ದು ಎಂಬುದು ಸ್ಪಷ್ಟವಾಗುತ್ತದೆ.

'ಕವಿರಾಜಮಾರ್ಗ'ದಲ್ಲಿ ಹೆಸರಿಸಲ್ಪಟ್ಟಿರುವ ಗದ್ಯ ಕವಿ ದುರ್ವಿನೀತನು ಸು ಕ್ರಿ.ಶ. ೬೦೦ರಲ್ಲಿದ್ದ ಗಂಗ ದುರ್ವಿನೀತನೇ ಆಗಿರಬೇಕು. ಶಾಸನಗಳಲ್ಲಿ ಇವನನ್ನು ಬಹುಶ್ರುತ ಪಂಡಿತನೆಂದೂ ಪ್ರತಿಭಾವಂತ ಕವಿಯೆಂದೂ ಅವನ ಪ್ರಸಿದ್ಧಿ ಇದೆ. ತುಂಬುಲಾಚಾರ್ಯ (ಸುಮಾರು ಕ್ರಿ.ಶ. ೭೦೦) ರಿಂದ ರಚಿತವಾಗಿರುವ ೯೬೦೦೦ ಪದ್ಯಗಳುಳ್ಳ 'ತತ್ವಾರ್ಥ ಮಹಾಶಾಸ್ತ್ರ'ವೆಂಬ ಜೈನಟೀಕಾ ಗ್ರಂಥ 'ಕವಿರಾಜ ಮಾರ್ಗ'ಕ್ಕಿಂತ ಹಿಂದಿನದೆಂದು ಸಂಶೋಧಕರು ಹೇಳುತ್ತಾರೆ. ಈ ಕೃತಿಯನ್ನು ಚೂಡಾಮಣಿ ಎಂದೂ ಕರೆಯಲಾಗುತ್ತದೆ. ಇದರ ಬಗ್ಗೆ ಆರ್. ನರಸಿಂಹಾಚಾರ್ ಅವರು ೭ನೇ ಶತಮಾನದ ಈ ಬೃಹದ್ಗ್ರಂಥವು ಅದಕ್ಕೂ ಮುಂಚಿನ ಸಾಹಿತ್ಯ ಮತ್ತು ವಿಸ್ತೃತ ಭಾಷಾ ಕೃಷಿಯನ್ನು ಸೂಚಿಸುತ್ತದೆ (History of Kannada Literature ಪುಟ–೫) ಎಂದು ಹೇಳುತ್ತಾರೆ.

ಕ್ರಿ.ಶ. ೫೦೦ಕ್ಕಿಂತ ಮುಂದೆ ಬಂದಂತೆ ಕಾವ್ಯಮಯ ವರ್ಣನೆಯಿಂದ ಕೂಡಿರುವ ಕನ್ನಡ ಶಾಸನಗಳು ಹೆಚ್ಚು ಹೆಚ್ಚಾಗಿ ದೊರೆತಿವೆ. ಕ್ರಿ.ಶ. ೪೫೦ರ ಹಲ್ಮಿಡಿ ಶಾಸನವು ಕನ್ನಡದ ಮೇಲೆ ಆಗಿರುವ ಸಂಸ್ಕೃತದ ಪ್ರಭಾವ ಕೆಲವು ಪೂರ್ವದ ಹಳಗನ್ನಡ ರೂಪಗಳಲ್ಲೂ ಕಂಡುಬರುತ್ತವೆ. ಅಷ್ಟೇ ಅಲ್ಲ ಈ ಶಾಸನವು ಕನ್ನಡ ಸಾಹಿತ್ಯದ ಪ್ರಾರಂಭದ ಮೇಲೆ ಬೆಳಕು ಬೀರಿದೆ. ಕನ್ನಡ ಭಾಷೆ ಮತ್ತು ಸಾಹಿತ್ಯ ಕೆಲ ಶತಮಾನದದಿಂದ ಬೆಳೆದು ಬಂದಿರುವ ಹಾಗೂ ಅಭಿವ್ಯಕ್ತಿಯ ಸ್ವರೂಪದ ಬಗ್ಗೆ ಸೂಚನೆಗಳು ದೊರೆಯುತ್ತವೆ. ಹೀಗಾಗಿ ಕನ್ನಡ ಸಾಹಿತ್ಯವು ಕ್ರಿ.ಶ. ೫೦೦ರಷ್ಟಾದರೂ ಹಳೆಯದಾಗಿದೆಯೆಂದೂ 'ಕವಿರಾಜಮಾರ್ಗ' ಒಂದು ಲಕ್ಷಣ ಗ್ರಂಥವಾಗಿದ್ದು ಇದರ ರಚನೆಗೆ ಸಹಜ ಕಾರಣವನ್ನೊದಗಿಸಿದ ಹಿಂದಿನ ಒಂದು ಸಾಹಿತ್ಯ ಪರಂಪರೆ ಇದ್ದಿರಬೇಕೆಂಬ ಸೂಚನೆ ದೊರಕುತ್ತದೆ.

ಗೋವಿಂದ ಪೈ ಅವರು ಕನ್ನಡಭಾಷೆ ಸಾಹಿತ್ಯಗಳು ಕ್ರಿ.ಶ.ಕ್ಕೆ ಪೂರ್ವದಿಂದಲೂ ಇದ್ದವೆಂದು ಇದಕ್ಕೆ ಪ್ರಾಚೀನ ಶಾಸನಗಳು ಸು. ಕ್ರಿ.ಶ. ೨೦೯ ಮತ್ತು ಕ್ರಿ.ಶ. ३೦೦ಕ್ಕೆ ಸೇರಿದ ಹಾಲರಾಜನ 'ಗಾಥಾ ಸಪ್ತಶತಿ'ಯಲ್ಲಿ ಕೆಲ ಕನ್ನಡ ಶಬ್ದಗಳು ಕಂಡುಬಂದಿರುವುದು ಇದಕ್ಕೆ ಆಧಾರ ಎಂದು ಹೇಳುತ್ತಾರೆ. (ಕನ್ನಡ ಸಾಹಿತ್ಯದ ಪ್ರಾಚೀನತೆ–ಉದಯ ಭಾರತ ಸಂಪುಟ ೧೧, ಸಂಚಿಕೆ ೫ ಪುಟ ೧೧೧–೧೧೭ ಮತ್ತು ಮೂರು ಉಪನ್ಯಾಸಗಳು ಪುಟ–೧೦೧–೧೩೮) ಅದೇ ರೀತಿ ಬೌದ್ಧ ಧರ್ಮಗ್ರಂಥವಾದ ದೀಘನಿಕಾಯದಲ್ಲಿ ಬತ್ತ, ಕಜ್ಜಾಯ, ಕೀರು ಎಂಬ ಪದಗಳು ಕನ್ನಡಕ್ಕಿರುವ ಅರ್ಥದಲ್ಲಿಯೇ ಬಳಕೆಯಾಗಿವೆ. (ಶ್ರೀ ಎಚ್.ವಿ. ರಂಗರಾಜ್ ಅನುವಾದ: ದೀಘನಿಕಾಯ ಸಂಪುಟ ೧) ಇದನ್ನು ಒಪ್ಪಿದರೆ 'ಗಾಥಾ ಸಪ್ತಶತಿ'ಗಿಂತ ಹಿಂದಿನ ದಾಖಲೆಯಾಗಿ 'ಇಸಿಲ'ದ ಬಳಿಕದ ದಾಖಲೆಯಾಗಿ

ಉಳಿಯುತ್ತದೆ. ಆದ್ದರಿಂದ ಕನ್ನಡದಲ್ಲಿ ಸಾಹಿತ್ಯ ರಚನೆ ಕ್ರಿ.ಪೂರ್ವದಿಂದಲೂ ರಚನೆಯಾಗುತ್ತಿದ್ದಿರಬೇಕು. ಕನ್ನಡ ಸಾಹಿತ್ಯವು ಭಾರತೀಯ ಭಾಷಾ ಸಾಹಿತ್ಯದಲ್ಲಿಯೇ ಹಳೆಯದು. ಸಂಸ್ಕೃತ ಪ್ರಾಕೃತ ಸ್ವಲ್ಪಮಟ್ಟಿಗೆ ತಮಿಳನ್ನು ಬಿಟ್ಟರೆ ಕನ್ನಡ ಸಾಹಿತ್ಯವೇ ಪ್ರಾಚೀನವಾದದ್ದು. ಇದು ತನ್ನದೇ ಆದ ಇತಿಹಾಸ ಮತ್ತು ಪರಂಪರೆಯನ್ನು ಹೊಂದಿದ್ದು ೧೫೦೦ ವರ್ಷಗಳಿಂದ ಸತತವಾಗಿ ಬೆಳೆಯುತ್ತಾ ಬಂದಿದೆ ಎಂದು ಡಿ.ಎಲ್. ನರಸಿಂಹಾಚಾರ್ ಅವರು Old Kannada Literature-A brief Survey ಎಂಬ ಲೇಖನದಲ್ಲಿ ಹೇಳುತ್ತಾರೆ.

ಶಿವಕೋಟ್ಯಾಚಾರ್ಯರ 'ವಡ್ಡಾರಾಧನೆ'ಯು ಕವಿರಾಜಮಾರ್ಗಕಾರ ಹೇಳಿರುವ ಗದ್ಯ ಕಥೆಯ ಪ್ರಕಾರವನ್ನು ಸೂಚಿಸುವ ಗ್ರಂಥ. ಹಿಂದೆಯೂ ಕೂಡಾ ಇಂತಹ ಗದ್ಯ ಕತೆಯ ರೂಪಗಳು ಇದ್ದಿರಬೇಕು. ಆದರೆ ವಡ್ಡಾರಾಧನೆಯೇ ಲಭ್ಯವಾಗಿರುವ ಕೃತಿ. ಇದರ ಕಾಲವನ್ನು ಆ.ನೆ. ಉಪಾಧ್ಯೆ ಮತ್ತು ಗೋವಿಂದ ಪೈ ಅವರು ೯ನೇ ಶತಮಾನದ ತರುವಾಯದ ಕೃತಿ ಎಂದು ಗುರುತಿಸುತ್ತಾರೆ. ಇದರಲ್ಲಿಯ ಕಥೆಗಳು ಉತ್ಕೃಷ್ಟವಾದ ಗದ್ಯ ಶೈಲಿಯಲ್ಲಿವೆ.

ಕನ್ನಡದ ಮೊಟ್ಟ ಮೊದಲು ಉಪಲಬ್ಧ ಕಾವ್ಯವೆಂದರೆ ಪಂಪ ಮಹಾಕವಿಯ 'ಪಂಪಭಾರತ' ಮತ್ತು 'ಆದಿಪುರಾಣ'. ಇವನ ಕಾಲ ಕ್ರಿ.ಶ. ೯೪೧. ಇವನು ಕರ್ನಾಟಕದ ತುಂಬಾ ಪ್ರತಿಭಾವಂತ ಹಾಗೂ ಶಕ್ತಿಯುತವಾದ ಕವಿಯಾಗಿದ್ದಾನೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅವನ ಸ್ಥಾನ ತುಂಬಾ ಹಿರಿದಾದದ್ದು. ಬಿ.ಎಲ್. ರೈಸ್ ಅವರು The Journal of the Royal Asiatic Society of Great Britain and Ireland ಸಂ. XIV ರಲ್ಲಿ ಪಂಪನ ಹುಟ್ಟಿದ ಕಾಲವನ್ನು ಕ್ರಿ.ಶ. ೯೦೨ ಎಂದು ನಿರ್ಧರಿಸಿದ್ದಾರೆ. ರೆವರೆಂಡ್ ಎಫ್ ಕಿಟ್ಟೆಲ್ ಅವರು Indian Antiquary Vol IV. ೧೮೭೫ರಲ್ಲಿ ಹಳಗನ್ನಡ ಸಾಹಿತ್ಯದ ಬಗ್ಗೆ ಚರ್ಚಿಸುತ್ತಾ ಒಂಭತ್ತು ಮತ್ತು ಹತ್ತನೇ ಶತಮಾನದಲ್ಲಿದ್ದಿರಬಹುದಾದ ಶಾಸ್ತ್ರೀಯ ಗ್ರಂಥಕರ್ತರ ಹೆಸರನ್ನು ಹಾಗೂ ಅವರ ಕೃತಿಗಳನ್ನು ಉಲ್ಲೇಖಿಸಿ ವಿವರಿಸುತ್ತಾರೆ. ಶಾಂತಿ ಪುರಾಣ, ರಾಮಕಥೆ ಬರೆದ ಪೊನ್ನ (ಕ್ರಿ.ಶ. ೯೫೦) ಚಾವುಂಡರಾಯ ಪುರಾಣದ ಚಾವುಂಡರಾಯ (ಸು ೯೭೧) ಗದಾಯುದ್ಧ, ಅಜಿತ ಪುರಾಣ ಬರೆದ ರನ್ನ (ಕ್ರಿ.ಶ. ೯೯೩) ಕರ್ನಾಟಕ ಕಾದಂಬರಿ, ಛಂದೋಬುಧಿಗಳನ್ನು ಕೊಟ್ಟ ೧ನೇ ನಾಗವರ್ಮ (ಸು ೯೯೦) ಪಂಪರಾಮಾಯಣ, ಮಲ್ಲಿನಾಥ ಪುರಾಣ ಬರೆದ ನಾಗಚಂದ್ರ (ಸು ೧೧೦೦) ಕಾವ್ಯಾವಲೋಕನ ವಸ್ತುಕೋಶದ ೩ನೇ ನಾಗವರ್ಮ (ಸು. ೧೧೪೫) ಈ ಕಾಲದ ರಚನೆಗಳಲ್ಲಿ ಕಾವ್ಯಶಾಸ್ತ್ರ ಎರಡೂ ಬಗೆಯ ಕೃತಿಗಳಿವೆ. ರಾಮಾಯಣ, ಮಹಾಭಾರತ, ಜೈನ ಪುರಾಣ ತೀರ್ಥಂಕರ ಚರಿತೆಗಳಿಂದ ವಸ್ತುಗಳನ್ನು ತೆಗೆದುಕೊಂಡಿದ್ದರೂ ಅವುಗಳನ್ನು ಕನ್ನಡ ಸಂಸ್ಕೃತಿಗೆ ಒಗ್ಗುವಂತೆ ಕಲಾತ್ಮಕಗೊಳಿಸಿದ್ದಾರೆ. ವಿಶಿಷ್ಟವಾದ ಚಂಪೂ ರೂಪದಲ್ಲಿ ಒಂದು ಲೌಕಿಕ ಮತ್ತೊಂದು ಆಗಮಿಕ ಹೀಗೆ ಕೃತಿ ರಚನೆ ಮಾಡುವ ಒಂದು ಸಂಪ್ರದಾಯವಿದೆ. ದುರ್ಗಸಿಂಹ, ನಯಸೇನ, ಹರಿಹರ, ರಾಘವಾಂಕ, ಷಡಕ್ಷರಿ, ಜನ್ನ, ನೇಮಿಚಂದ್ರ ಅಂಡಯ್ಯ, ರುದ್ರಭಟ್ಟ, ಕುಮಾರವ್ಯಾಸ ಇವರೆಲ್ಲರೂ ತಮ್ಮದೇ ಆದ ಛಾಪನ್ನು ಮೂಡಿಸಿದ್ದಾರೆ. ಇದರೊಂದಿಗೆ ೧೨ನೇ ಶತಮಾನದ ವಚನಕಾರರಾದ ಬಸವಣ್ಣ, ಅಲ್ಲಮ ಅಕ್ಕಮಹಾದೇವಿ ಇವರು ಆಧ್ಯಾತ್ಮಿಕ ಅನುಭವಗಳ ಅಭಿವ್ಯಕ್ತಿಗಾಗಿ ಜನಭಾಷೆಯ ಒಂದು ಶೈಲಿ ರೂಪಿಸಿದರು. ಸಾಮಾಜಿಕ ಬದಲಾವಣೆಗಾಗಿಯೂ ಜನಭಾಷೆಯ ಶೈಲಿ ರೂಪಗೊಂಡಿತು. ಇದೇ ರೀತಿ ಹದಿನಾರನೇ ಶತಕಾರಂಭದ ಪುರಂದರದಾಸ, ಕನಕದಾಸ ಮುಂತಾದವರೂ ಕೂಡಾ ಕನ್ನಡ ಭಾಷೆಯನ್ನು ಶ್ರೀಮಂತಗೊಳಿಸಿದರು. ರತ್ನಾಕರವರ್ಣಿ, ಚಾಮರಸ ಇವರೂ ಸಹ ದೇಸಿ ಶೈಲಿಗಳನ್ನು ಅಳವಡಿಸಿಕೊಂಡರು. ೧೭ನೇ ಶತಮಾನದ ತಿರುಮಲಾರ್ಯ, ಚಿಕುಪಧ್ಯಾಯರಂತಹ ಕವಿಗಳು ಸರ್ವಜ್ಞ, ಲಕ್ಷ್ಮೀಶನಂತಹ ಜನಪ್ರಿಯ ಕವಿಗಳೂ ಕನ್ನಡದ ಶ್ರೀಮಂತಿಕೆಯನ್ನು ಹೆಚ್ಚಿಸಿವೆ. ಇದೇ ಅಲ್ಲದೆ ೧೦ ರಿಂದ ೧೮ನೇ ಶತಮಾನದವರೆಗೆ ಕೆಲವು ಶಾಸ್ತ್ರೀಯ ಗ್ರಂಥಗಳು ರಚನೆಯಾಗಿವೆ. ಆರ್. ನರಸಿಂಹಾಚಾರ್ ಅವರು ಇವುಗಳ ಪಟ್ಟಿ ಮಾಡಿದ್ದಾರೆ. ಇದರಲ್ಲಿ ವ್ಯಾಕರಣ, ಛಂದಸ್ಸು, ಭಾಷಾಶಾಸ್ತ್ರ, ನಾಟಕ, ಕಾವ್ಯಶಾಸ್ತ್ರ, ತರ್ಕಶಾಸ್ತ್ರ, ಅಡುಗೆ ಶಾಸ್ತ್ರ ಅಥವಾ ಪಾಕಶಾಸ್ತ್ರ, ಗಣಿತಶಾಸ್ತ್ರ, ಔಷಧ ಶಾಸ್ತ್ರ, ಜ್ಯೋತಿಷ್ಯಶಾಸ್ತ್ರ, ಜೀವನಚರಿತ್ರೆ, ಇತಿಹಾಸ ಮುಂತಾದ ಶಾಸ್ತ್ರಗ್ರಂಥಗಳು ವಿಪುಲವಾಗಿ ರಚನೆಯಾಗಿರುವುದನ್ನು ಗಮನಿಸಬಹುದು.

ಹತ್ತನೇ ಶತಮಾನದ ಪಂಪ ಆದಿಪುರಾಣದಲ್ಲಿ 'ಮನುಷ್ಯ ಜಾತಿ ತಾನೊಂದೆ ವಲಂ' ಎಂದು ಹೇಳುತ್ತಾನೆ. ವಚನಕಾರರು, ದಾಸರು, ಜಾನಪದ ಕವಿಗಳು, ರನ್ನ, ಪೊನ್ನ, ಜನ್ನ, ನಾಗಚಂದ್ರ, ಹರಿಹರ, ರಾಘವಾಂಕ, ಕುಮಾರವ್ಯಾಸ, ಚಾಮರಸ, ಲಕ್ಷ್ಮೀಶ ಮುಂತಾದ ಎಲ್ಲಾ ಮಹತ್ವದ ಕವಿಗಳು ಪಂಪನ ಮನೋಧರ್ಮವನ್ನು ಮುಂದುವರೆಸಿದ್ದಾರೆ. ಕನ್ನಡ ಸಂಸ್ಕೃತಿಯನ್ನು ಒಂದು ಜೀವಂತ ಸತ್ವವಾಗಿ ಮಾಡಿದ್ದಾರೆ. ಬಾದಾಮಿಯ ಕಪ್ಪೆ ಅರಭಟ್ಟನ ಶಾಸನವೂ (ಕ್ರಿ.ಶ. ೭ನೇ ಶತಮಾನ) ಕೂಡಾ ಇದೇ ಮನೋಧರ್ಮದ್ದಾಗಿದ್ದು ಕನ್ನಡಿಗರ ಸ್ವಾಭಿಮಾನದ ಅಭಿವ್ಯಕ್ತಿಯಾಗಿದೆ ಎಂದು ಹೇಳಲಾಗುತ್ತದೆ. ಪಂಪ ರನ್ನರ ಸಾವಿರ ವರ್ಷದ ಜನ್ಮ ದಿನಾಚರಣೆಯನ್ನು ಕರ್ನಾಟಕ ಸರ್ಕಾರ ಆಚರಿಸಿದೆ. ಪಂಪನ ಹೆಸರಿನಲ್ಲಿ ಕರ್ನಾಟಕ ಸರ್ಕಾರವು ಒಂದು ಲಕ್ಷ ಮೊತ್ತದ ಪ್ರಶಸ್ತಿಯನ್ನು ಪ್ರತಿವರ್ಷವೂ ಉನ್ನತ ಮಟ್ಟದ ಸಾಧನೆಗೈದ ಸಾಹಿತಿಗೆ ನೀಡಲಾಗುತ್ತಿದೆ. ಪಂಪ, ರನ್ನ, ರಾಘವಾಂಕ, ಕುಮಾರವ್ಯಾಸ, ಭೀಮಕವಿ, ಸರ್ವಜ್ಞ, ಲಕ್ಷ್ಮೀಶರ ಕಾವ್ಯಗಳು ಗ್ರಾಮಾಂತರ ಪ್ರದೇಶಗಳ ಜನರಿಗೂ ತಮ್ಮ ಕಾವ್ಯ ಗುಣದಿಂದಾಗಿ ತಲುಪಿದೆ. ವಚನಗಳು ಜನಸಾಮಾನ್ಯರ ನಾಲಗೆ ಮೇಲೆ ನರ್ತಿಸುತ್ತಿವೆ. ಈ ವಚನಗಳು ಇಂದಿನ ದಲಿತ ಬಂಡಾಯ ಸಾಹಿತ್ಯಕ್ಕೆ ಸ್ಫೂರ್ತಿ ಪ್ರೇರಣೆಯಾಗಿವೆ. ಸರ್ವಜ್ಞ ತಮಿಳಿನ ತಿರುವಳ್ಳವರ್ ಮತ್ತು ತೆಲುಗಿನ ವೇಮನನಂತಹ ಸರಿಸಾಟಿಯಾಗಿ ನಿಲ್ಲುತ್ತಾನೆ. ಕನಕದಾಸ ಮತ್ತು ಪುರಂದರ ದಾಸರ ಹೆಸರಲ್ಲಿ ಕರ್ನಾಟಕ ಸರ್ಕಾರ ಸಂಗೀತದ ದೊಡ್ಡ ಪ್ರಶಸ್ತಿಯನ್ನು ಸ್ಥಾಪಿಸಿವೆ.

**ಮಾನದಂಡ ೩.**

**ಭಾಷೆಯ ಸಾಹಿತ್ಯ ಪರಂಪರೆಯು ಮೌಲಿಕ ಅಥವಾ ಸ್ವಂತದ್ದಾಗಿದ್ದು ಯಾವುದೇ ಇನ್ನೊಂದು ಭಾಷೆಯ ಉಪ ಉತ್ಪನ್ನವಾಗಿರಬಾರದು ಇಲ್ಲವೇ ಸ್ವೀಕರಿಸಿರಬಾರದು**

ಕನ್ನಡದ ಆದಿಮಹಾಕವಿಯೆಂದು ಪ್ರಸಿದ್ಧನಾದ ಪಂಪ ಹತ್ತನೇ ಶತಮಾನದ ಪ್ರಮುಖ ಕವಿ. ಅವನು ಹಾಕಿ ಕೊಟ್ಟ ಕಾವ್ಯ ಮಾರ್ಗವನ್ನು ಮುಂದಿನ ಕೆಲವು ಕವಿಗಳು ಅನುಸರಿಸಿದರು.

ಹಿಂದೂ ಮಹಾಕಾವ್ಯ ಮತ್ತು ಜೈನ ಪುರಾಣದಿಂದ ವಸ್ತುವನ್ನು ಆರಿಸಿಕೊಂಡ ಪಂಪನು ಒಂದನ್ನು ಲೌಕಿಕ ಮತ್ತೊಂದು ಆಗಮಿಕ ಎಂದು ಕರೆದು ಮಹತ್ವದ ಕೃತಿಗಳನ್ನು ಚಂಪೂವಿನಲ್ಲಿ ಬರೆದನು. ಇದನ್ನು ರನ್ನ ಪೊನ್ನರೂ ಅನುಸರಿಸಿದರು.

ಚಾಮರಸ ಮತ್ತು ಕುಮಾರವ್ಯಾಸ ಕವಿಗಳು ದೇಸೀಯ ಛಂದಸ್ಸಿನಲ್ಲಿ ಕಾವ್ಯಗಳನ್ನು ರಚಿಸಿದರು. ಇವು ಪಂಪನಿಗಿಂತ ಭಿನ್ನವಾದವು ಹಾಗೂ ವಸ್ತುವಿನಲ್ಲೂ ಸಹ ಭಿನ್ನತೆಯನ್ನು ಪಡೆದುಕೊಂಡಿವೆ.

ಚಂಪೂಕಾವ್ಯದ ಮಾರ್ಗಶೈಲಿಯನ್ನು 'ಪಂಪ' ಕವಿಯು ರೂಡಿಸಿಕೊಂಡು ಹಾಕಿಕೊಟ್ಟ ಮಾರ್ಗವನ್ನು ರನ್ನ, ಪೊನ್ನ, ನಾಗವರ್ಮ, ನೇಮಿಚಂದ್ರ, ಹರಿಹರ, ಷಡಕ್ಷರಿ ಮುಂತಾದವರು ಅನುಸರಿಸಿ ಉತ್ಕೃಷ್ಟವಾದ ಕಾವ್ಯಗಳನ್ನು ರಚಿಸಿದ್ದಾರೆ.

ಮೇಲ್ಕಂಡ ಕವಿಗಳೆಲ್ಲರೂ ವೈವಿಧ್ಯಮಯವಾದ ಛಂದಸ್ಸಿನಲ್ಲಿ ಕಾವ್ಯ ರಚಿಸಿದ್ದಾರೆ. ವೃತ್ತ, ಕಂದ, ರಗಳೆ, ಷಟ್ಪದಿ, ತ್ರಿಪದಿ ಮುಂತಾದ ಕಾವ್ಯ ಪ್ರಕಾರದ ಶೈಲಿಗಳನ್ನು ಅಳವಡಿಸಿಕೊಂಡಿದ್ದಾರೆ.

ಪಂಪ ತನ್ನ ಕಾವ್ಯವಾದ ಪಂಪಭಾರತದಲ್ಲಿ ತನ್ನ ರಾಜನಾದ ಅರಿಕೇಸರಿಯನ್ನು ಅರ್ಜುನನೊಂದಿಗೆ ಅಬೇಧವಾಗಿ ಕಲ್ಪಿಸಿ ಕಾವ್ಯವನ್ನು ರಚಿಸಿದ್ದಾನೆ. ಈ ಮಾರ್ಗವನ್ನು ರನ್ನನೂ ಅನುಸರಿಸಿ ಗದಾಯುದ್ಧ ಕಾವ್ಯವನ್ನು ಬರೆದಿದ್ದಾನೆ. ಈ ಕಾರಣದಿಂದ ಪಂಪನನ್ನು ನಾಡೋಜ, 'ಕವಿಗುರು ತಿಲಕ' ಎಂದು ಕರೆಯಲಾಗಿದೆ.

कर्णाटा : कांस्यकुट्टाश्च पद्मजालाः सतीनराः ।

अथापरे जनपदाः दक्षिणा भरतर्षभ ।
द्रविडाः केरलाः प्राच्या मूषिका वनवासिकाः ॥
कर्णा महिषका विकल्पा मूषकास्तथा ।
र्झि ाः कुन्तलाश्चैव सौहृदा नभकाननाः ॥

'ಪಂಪ'ನು ಕತೆ ಹೇಳುವ ರೀತಿ ವಿಶಿಷ್ಟವಾದದ್ದು ಮಹಾಭಾರತದ ವಸ್ತುವಾದರೂ ಅವನು ವ್ಯಾಸ ಭಾರತ ತನ್ನದೇ ಆದ ರಕ್ತ ಮತ್ತು ಮಾಂಸವನ್ನು ತುಂಬಿ ಹೊಸದಾಗಿಯೇ ಹೇಳುತ್ತಾನೆ. ಇದರಲ್ಲಿ ತನ್ನ ಕಾಲದ ಮೌಲ್ಯಗಳು, ಅಂತರ್ಗತವಾಗುವಂತೆ ರಚಿಸಿದ್ದಾನೆ. ಕೃಷ್ಣ ವ್ಯಾಸಭಾರತದಲ್ಲಿ ಮೇಲುಗೈ ಪಡೆದು ಮುಖ್ಯಪಾತ್ರವಾಗಿದ್ದರೆ ಪಂಪನಲ್ಲಿ ದುರ್ಯೋಧನ ಅದರಲ್ಲೂ ಕರ್ಣನೇ ಮುಖ್ಯನಾಗುತ್ತಾನೆ. 'ನೆನೆಯದಿರಣ್ಣ ಭಾರತದೊಳಿಂ' ಎಂದು ಪ್ರಾರಂಭವಾಗುವ ಪದ್ಯದಲ್ಲಿ ಮಹಾಭಾರತದಲ್ಲಿ ಕರ್ಣನನ್ನು ನೆನೆ ಬೇರೆ ಯಾರನ್ನು ಬೇಡ ಎಂಬ ಧ್ವನಿ ಇದೆ. ಪಂಪಭಾರತವು ವೀರಯುಗದ ಮೌಲ್ಯಗಳನ್ನೊಳಗೊಂಡಿದೆ. ಹಾಗೆಯೇ ತನ್ನ ಕಾಲದ ಸಾಮಾಜಿಕ ಮತ್ತು ರಾಜಕೀಯ ಮೌಲ್ಯಗಳನ್ನು ಸ್ಥಿತಿಗತಿಗಳನ್ನು ಅಂತರ್ಗತವಾಗಿಸಿದ್ದಾನೆ. ಆ ಕಾರಣದಿಂದಾಗಿಯೇ ಇಂದಿಗೂ ಕೂಡ ಈ ಕೃತಿ ಪ್ರಸ್ತುತವಾಗಿ ವಿಮರ್ಶಕರಿಂದ ವಿವಿಧ ವ್ಯಾಖ್ಯಾನಗಳಿಗೆ ಒಳಗಾಗುತ್ತಿದೆ.

ಪಂಪನನ್ನು ಬಿಟ್ಟರೆ ಗಮನಿಸಬೇಕಾದ ಮತ್ತೊಬ್ಬ ಕವಿಯೆಂದರೆ ಹರಿಹರ ಇವನ ಕಾಲ ಕ್ರಿ.ಶ. ೧೨೦೦. ಅವನ ಕಾವ್ಯದ ವಾಸ್ತು ಶೈಲಿಗಳು ವಿಭಿನ್ನವಾಗಿವೆ. ೧೨೦ ಶೈವ ಭಕ್ತರ ಕತೆಗಳನ್ನು ಹೇಳುತ್ತಾ ಜನಸಾಮಾನ್ಯರ ಬದುಕಿನ ಚಿತ್ರಣಗಳನ್ನು ಕಟ್ಟಿಕೊಡುತ್ತಾನೆ. ರಾಜಮಹಾರಾಜರು ನಾಯಕರನ್ನಾಗಿ ಚಿತ್ರಿಸದೆ ಜನಸಾಮಾನ್ಯರನ್ನು ನಾಯಕರನ್ನಾಗಿ ಮಾಡಿಕೊಂಡಿದ್ದು ಹರಿಹರನ ಹೆಗ್ಗಳಿಕೆ. ಹಾಗೆಯೇ 'ರಗಳೆ' ಎಂಬ ಛಂದಸ್ಸನ್ನು ಬಳಸಿಕೊಂಡ ಹರಿಹರನು ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪಡೆದುಕೊಂಡಿದ್ದಾನೆ. ಅಸ್ಪೃಶ್ಯನನ್ನು ನಾಯಕನನ್ನಾಗಿ ಮಾಡಿ ಕಾವ್ಯ ಬರೆದ ಶ್ರೇಯಸ್ಸು ಹರಿಹರನದು. ಈ ದೃಷ್ಟಿಯಿಂದ ದಲಿತ ಕಾವ್ಯ ಬರೆದ ಮೊಟ್ಟ ಮೊದಲ ಕವಿ ಇವನೆನ್ನಬಹುದು.

೧೨ನೇ ಶತಮಾನದ ವಚನ ಚಳುವಳಿಯೂ ಸಹ ಅನನ್ಯವಾದದ್ದು. ಆಡು ಮಾತನ್ನು ಕಾವ್ಯಕ್ಕೆ ಒಗ್ಗಿಸಿದ ಕೀರ್ತಿ ವಚನಕಾರರಿಗೆ ಸಲ್ಲುತ್ತದೆ. ಮಹತ್ವದ ವಿಚಾರವೆಂದರೆ ಸಾಹಿತ್ಯ ರಚನೆಯಲ್ಲಿ ಸ್ತ್ರೀಯರು ಮಹತ್ವದ ಪಾತ್ರ ವಹಿಸಿದ್ದು ಈ ಕಾಲದಲ್ಲಿ ದಲಿತರು, ಸ್ತ್ರೀಯರು, ಕೆಳವರ್ಗದವರೆಲ್ಲರೂ ಈ ಕಾಲದಲ್ಲಿ ವಚನಗಳನ್ನು ರಚಿಸಿದರು. ಈ ವಚನ ಸಾಹಿತ್ಯವು ವಸ್ತು ಶೈಲಿಗಳಿಂದ ಭಿನ್ನವಾದದ್ದು; ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣಾ ಚಳುವಳಿಯಲ್ಲಿ ಮಹತ್ವದ ಪಾತ್ರವಹಿಸಿದವು. ಡಾ. ಸಿದ್ಧಯ್ಯ ಪುರಾಣಿಕ, ಎ.ಕೆ. ರಾಮಾನುಜನ್, ಎಂ. ಚಿದಾನಂದಮೂರ್ತಿ, ಡಾ. ಎಲ್. ಬಸವರಾಜು ಮುಂತಾದ ವಿದ್ವಾಂಸರು ವಚನ ಸಾಹಿತ್ಯದ ಸ್ವರೂಪ, ಅದರ ಪ್ರಾಮುಖ್ಯತೆ, ಅದು ಬೀರಿದ ಪ್ರಭಾವಗಳನ್ನು ಕುರಿತು ಅನೇಕ ಗ್ರಂಥಗಳನ್ನು ಬರೆದಿದ್ದಾರೆ.

ಪಂಪ, ಬಸವ ಮತ್ತು ಹರಿಹರ ಇವರು ಸುಮಾರು ೫೦೦ ವರ್ಷಗಳ ಕಾಲ ತಮ್ಮ ಪ್ರಭಾವ ಬೀರಿದರು. ಅಂದರೆ ೧೦ನೇ ಶತಮಾನದಿಂದ ೧೫ನೇ ಶತಮಾನದವರೆಗೆ ಇವರ ಪ್ರಭಾವ ಇತ್ತು. ಆನಂತರ ಕುಮಾರವ್ಯಾಸ ಕವಿ ತನ್ನ ಪ್ರಭಾವ ಬೀರಿದನು.

ಕುಮಾರವ್ಯಾಸ ಮಹಾನ್ ಕಲಾವಿದ, ಅವನು ತನ್ನ ಚಿತ್ರ ಶಾಲೆಯನ್ನು ಪ್ರತಿಯೊಂದು ಪರಿಪೂರ್ಣವಾಗಿರುವ ವಿವಿಧ ಪಾತ್ರಗಳಿಂದ ತುಂಬಿದ್ದಾನೆ. ಅವನ ಹಿರಿಮೆ ಇರುವುದು ಮೂಲ ಮಹಾಭಾರತದ ಪಾತ್ರಗಳ ಪರಿವರ್ತನೆಯಲ್ಲಲ್ಲ. ಪಾತ್ರಗಳನ್ನು ಸ್ಫುಟವಾಗಿ ಸಮಂಜಸವಾಗಿ ಬೆಳಗಿಸಿ ವರ್ಣಿಸುವುದರಲ್ಲಿ. ಎಲ್ಲಾ ಬಗೆಯ ಪಾತ್ರ ನಿರೂಪಣೆಯಲ್ಲಿ ಅವನು ಎಲ್ಲರನ್ನು ಮೀರಿಸುತ್ತಾನೆ. ಮಹಾಭಾರತದ ಸಮಸ್ತ ವಾತಾವರಣವನ್ನು ಅದ್ವಿತೀಯ ಸಾಮರ್ಥ್ಯದಿಂದ ಪುನರ್‌ಸೃಷ್ಟಿಸುತ್ತಾನೆ. ಧಾರ್ಮಿಕ ಮತ್ತು ಸಾಮಾಜಿಕ ಚಳುವಳಿಯ ಮತ್ತೊಂದು ರೂಪವೆಂದು ಕರೆಯಬಹುದಾದ ಭಕ್ತಿ ಸಾಹಿತ್ಯ ಕನಕದಾಸ ಮತ್ತು ಪುರಂದರದಾಸರಿಂದ ಸೃಷ್ಟಿಯಾಯಿತು. ಸಮಾಜ ಸುಧಾರಣೆಗಾಗಿ ಭಕ್ತಿಯ ಮನೋಧರ್ಮ ಬೆಳೆಸುವುದಕ್ಕಾಗಿ ಅವರು ಗೀತೆಗಳನ್ನು ರಚಿಸಿದರು. ಕರ್ನಾಟಕ ಸಂಗೀತಕ್ಕೆ ಮಹತ್ವದ ಕಾಣಿಕೆಯನ್ನು ಇವರು ನೀಡಿದ್ದು ಮಹತ್ವದ ವಿಚಾರವಾಗಿದ್ದು ಕನ್ನಡ ಸಂಸ್ಕೃತಿಗೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಕನಕದಾಸರ 'ರಾಮಧಾನ್ಯಚರಿತೆ' ಎಂಬ ಪುಟ್ಟಕಾವ್ಯವು ಅನ್ಯೋಕ್ತಿ ವಿಧಾನದಲ್ಲಿ ರಚನೆಯಾಗಿದ್ದು ಬಡವರಲ್ಲಿ ಎಷ್ಟೇ ಪ್ರತಿಭೆಯಿದ್ದರೂ ಅದಕ್ಕೆ ಬೆಲೆಯಿಲ್ಲ ಎಂಬ ವಿಚಾರವನ್ನು ಒಳಗೊಂಡ ಅತ್ಯುತ್ತಮವಾದ ಕಾವ್ಯವಾಗಿದೆ. ರಾಗಿ ಮತ್ತು ಅಕ್ಕಿಯು ಕ್ರಮವಾಗಿ ಬಡವ ಮತ್ತು ಶ್ರೀಮಂತರಿಗೆ ಸಂಕೇತವಾಗಿ ಬರುತ್ತದೆ. ಇಬ್ಬರಲ್ಲಿ ಸ್ಪರ್ಧೆ ಏರ್ಪಟ್ಟು ರಾಗಿ ಗೆಲ್ಲುತ್ತದೆ. ಪ್ರತಿಭೆ ಇದ್ದವರಿಗೆ ಜಯ ಎಂಬ ತತ್ವವನ್ನು ಇದು ರೂಪಕಾತ್ಮಕವಾಗಿ ಹೇಳುವುದರಿಂದ ಕನ್ನಡ ಸಾಹಿತ್ಯದಲ್ಲಿ ತನ್ನದೇ ಆದ ಸ್ಥಾನವನ್ನು ಇದು ಗಳಿಸಿಕೊಂಡಿದೆ.

ಈ ಮೇಲಿನ ಅಂಶಗಳು ಕನ್ನಡ ಭಾಷೆಯ ಸಾಹಿತ್ಯ ಪರಂಪರೆಯು ಮೌಲಿಕ ಅಥವಾ ಸ್ವಂತದ್ದಾಗಿದ್ದು ಯಾವುದೇ ಇನ್ನೊಂದು ಭಾಷೆಯ ಉಪಉತ್ಪನ್ನವಾಗಿಲ್ಲ ಎಂಬುದನ್ನು ಸೂಚಿಸುತ್ತವೆ.

**ಮಾನದಂಡ ೪**

**ಶಾಸ್ತ್ರೀಯ ಭಾಷೆಯು ಅದರ ಮುಂದಿನ ಸ್ವರೂಪದಿಂದ ಭಿನ್ನವಾಗಿರಬಹುದು ಅಥವಾ ಅದರ ಬೆಳವಣಿಗೆ ಸ್ಥಗಿತಗೊಂಡಿರಬಹುದು.**

ಕನ್ನಡ ಭಾಷೆಗೆ ಅದರದೇ ಆದ ನಿರಂತರತೆ ಇದೆ. ಅದು ತನ್ನ ಪರಂಪರೆಯನ್ನು ಯಾವುದೇ ಅಡೆತಡೆಗಳಿಲ್ಲದೆ ಮುಂದುವರಿಸಿಕೊಂಡು ಬೆಳೆಯುತ್ತಿದೆ. ಹಾಗೂ ಚಲನಶೀಲವಾಗಿ ವಿಕಾಸಗೊಳ್ಳುತ್ತಾ ಸಮೃದ್ಧಿಯ ಕಡೆ ಸಾಗುತ್ತಿದೆ. ತನ್ನ ೨೦ ಶತಮಾನಗಳ ಅವಧಿಯಲ್ಲಿ ಕನ್ನಡ ಭಾಷೆಯು ಈ ಕೆಳಕಂಡಂತೆ ೪ ಹಂತಗಳಲ್ಲಿ ಬೆಳೆದಿದೆ.

ಹಂತ ೧. ಕ್ರಿ.ಶ. ಪೂರ್ವದಿಂದ–೮ನೇ ಶತಮಾನದವರೆಗೆ ಪೂರ್ವದ ಹಳಗನ್ನಡ
ಹಂತ ೨. ಕ್ರಿ.ಶ. ೮ನೇ ಶತಮಾನದಿಂದ ೧೨ನೇ ಶತಮಾನದವರೆಗೆ ಹಳಗನ್ನಡ
ಹಂತ ೩. ಕ್ರಿ.ಶ. ೧೨ನೇ ಶತಮಾನದಿಂದ ೧೯ನೇ ಶತಮಾನದವರೆಗೆ ನಡುಗನ್ನಡ
ಹಂತ ೪. ಕ್ರಿ.ಶ. ೧೯ನೇ ಶತಮಾನದಿಂದ ಈಚೆಗೆ ಹೊಸಗನ್ನಡ.

ಕನ್ನಡ ಭಾಷೆಯು ನಿರಂತರವಾಗಿ ಬದಲಾವಣೆಗೆ ಒಳಗಾಗುತ್ತಾ ಆಧುನಿಕ ವಿಚಾರಗಳನ್ನು ಸಮರ್ಥವಾಗಿ ಹೇಳಲು ಸಾಧ್ಯವಾಗುವಂತೆ ಬೆಳೆದಿದೆ. ಪ್ರೊ. ಎಲ್.ಎಸ್. ಶೇಷಗಿರಿರಾವ್ ಅವರು ತಮ್ಮ History of Kannada Literature (೧೯೮೩) ಗ್ರಂಥದಲ್ಲಿ ೧೯೨೦ರಿಂದ ಈಚೆಗೆ ಕನ್ನಡ ಸಾಹಿತ್ಯವು ಹುಲುಸಾಗಿ ವೈವಿಧ್ಯಮಯವಾಗಿ ಬೆಳೆದಿದೆ ಎಂದು ಹೇಳುವ ಮಾತುಗಳು ಉಲ್ಲೇಖನೀಯ. ಹತ್ತನೇ ಶತಮಾನದ ಪಂಪನಿಂದ ಪ್ರಾರಂಭವಾದ ಸಾಹಿತ್ಯ ಸೃಷ್ಟಿಯೂ ಇಂದಿಗೂ ಕೂಡಾ ಸಮೃದ್ಧವಾಗಿ ಬೆಳೆಯುತ್ತಿದೆ. ಕನ್ನಡಕ್ಕೆ ಏಳು ಜ್ಞಾನಪೀಠ ಪ್ರಶಸ್ತಿಗಳು ಹಾಗೂ ೫೮ ಕೃತಿಗಳಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕಾರಗಳು ಸಂದಿವೆ. ಈ ಮೇಲ್ಕಂಡ ಅಂಶಗಳು ಶಾಸ್ತ್ರೀಯ ಭಾಷೆಯು ಅದರ ಮುಂದಿನ ಸ್ವರೂಪದಿಂದ ಭಿನ್ನವಾಗಿರಬಹುದು ಎಂಬ ವಿಚಾರವನ್ನು ದೃಢಗೊಳಿಸುತ್ತವೆ.

# ಶಾಸ್ತ್ರೀಯ ಪಟ್ಟ!

# ಎತ್ತ ಸಾಗಿದೆ ಪ್ರಯತ್ನ

ಎಸ್. ಮಂಜುನಾಥ್

ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನಮಾನವನ್ನು ಕೇಂದ್ರ ಸರ್ಕಾರ ಪ್ರಕಟಿಸಿದೆ. ಅದು ಯಾವ ಉದ್ದೇಶ ಇಟ್ಟುಕೊಂಡು ಪ್ರಕಟಿಸಿದ್ದರೂ ಈ ಅವಕಾಶವನ್ನು ಸರಿಯಾಗಿ ಬಳಸಿಕೊಳ್ಳುವುದು ಕನ್ನಡ ವಿದ್ವತ್ ವಲಯದ ಹೊಣೆಗಾರಿಕೆ. ಶಾಸ್ತ್ರೀಯ ಭಾಷೆಯ ಸ್ಥಾನ ನೀಡಿಕೆಯಿಂದ ಗಣನೀಯ ಪ್ರಮಾಣದ ಹಣದ ನೆರವನ್ನು ಕೇಂದ್ರ ಸರ್ಕಾರವು ನೀಡಬೇಕಾಗುತ್ತದೆ. ಅಂದರೆ ಕನ್ನಡಕ್ಕೆ ಸಂಬಂಧಿಸಿ ವಿದ್ವತ್ ಕ್ಷೇತ್ರದಲ್ಲಿ ಕೈಗೊಳ್ಳಲಿರುವ ಯಾವುದೇ ಕೆಲಸಕ್ಕೆ ಇನ್ನು ಮುಂದೆ ಹಣದ ಕೊರತೆ ಬೀಳಲಾರದು.

ಶಾಸ್ತ್ರೀಯ ಭಾಷೆಯ (ಇದನ್ನು ಅಭಿಜಾತ ಎಂದು ಕರೆಯುವುದು ಅತ್ಯಂತ ಸೂಕ್ತ ಎಂಬ ಅಭಿಪ್ರಾಯ ವಿದ್ವತ್ ವಲಯದಲ್ಲಿದೆ) ಸ್ಥಾನದ ಮಾನ್ಯತೆಗೆ ಕಾರಣವಾದ ಅಂಶಗಳೆಂದರೆ ಸ್ಥೂಲವಾಗಿ ಅದರ ಪ್ರಾಚೀನತೆ, ಸ್ವತಂತ್ರ ಪರಂಪರೆಯೊಂದಿಗೆ ಬೆಳೆದು ಬಂದ ಪರಿ ಮತ್ತು ಸಮೃದ್ಧ ಪ್ರಾಚೀನ ಸಾಹಿತ್ಯ ರಾಶಿ. ಈ ಮೂರು ಅಂಶಗಳಲ್ಲಿಯೂ ಕನ್ನಡದಲ್ಲಿ ಕೊರತೆ ಇಲ್ಲ. ಆದ್ದರಿಂದ ಶಾಸ್ತ್ರೀಯ ಭಾಷೆಯ ಮಾನ್ಯತೆಗೆ ತಕ್ಕ ಮಾನದಂಡಗಳನ್ನು ಕನ್ನಡ ಈಗಾಗಲೇ ಪೂರೈಸಿದೆ. ಪ್ರಾಚೀನ ಸಾಹಿತ್ಯವನ್ನು ಇಂದಿನ ಅಗತ್ಯಗಳ ಹಿನ್ನೆಲೆಯಲ್ಲಿ ಪತ್ತೆ ಮಾಡಿ ವ್ಯಾಖ್ಯಾನಿಸಿ ಅದು ಜನಪರವಾದ ಆಶಯಗಳನ್ನು ಇಂದಿನ ಪೀಳಿಗೆಗೆ ನೀಡುವಂತಹ ಅಧ್ಯಯನ ನಡೆಯುವುದು ಪ್ರಸ್ತುತ ಅವಶ್ಯಕತೆ.

ಕನ್ನಡದಲ್ಲಿ ಪ್ರಾಚೀನ ಸಾಹಿತ್ಯದ ವಿಪುಲತೆಯನ್ನು ತಿಳಿಸಲು ಆರ್. ನರಸಿಂಹಾಚಾರ್ಯರ 'ಕರ್ನಾಟಕ ಕವಿಚರಿತೆ'ಗಿಂತ ಬೇರೆ ಆಕರಗಳಿಲ್ಲ. ಅಲ್ಲಿರುವ ಕವಿ ಕಾವ್ಯಗಳ ಪಟ್ಟಿಯಲ್ಲಿ ನಾನಾ ರೀತಿಯಿಂದ ವಿಶೇಷವೆಂದೂ ಅನನ್ಯವೆಂದೂ ತೋರುವ ಕೃತಿಗಳನ್ನು ಗುರುತಿಸಿ ಅವುಗಳಲ್ಲಿ ಇನ್ನೂ ಪ್ರಕಟವಾಗದ ಕೃತಿಗಳ ಬಗ್ಗೆ ಸಂಶೋಧನೆ ನಡೆಸುವುದು ಲಾಭಕರ ಎಂಬುದು ವಿದ್ವಾಂಸರ ಅಭಿಪ್ರಾಯ. ಅಂಥ ಕೃತಿಗಳಲ್ಲಿ ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಮಹತ್ವದವನ್ನು ಗುರುತಿಸಬೇಕು. ಹಾಗೆಯೇ ಐತಿಹಾಸಿಕವಾಗಿ ವಿವರಗಳಿರುವ, ಕಥನ ಸ್ವರೂಪದ ಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸಬೇಕು. ಶಾಸನಗಳು ಪ್ರಾಚೀನ ಕನ್ನಡ ಸಾಹಿತ್ಯದ ಅವಿಭಾಜ್ಯ ಅಂಗಗಳು. ಇವನ್ನು ಗ್ರಾಂಥಿಕ ಸಾಹಿತ್ಯದ ಜತೆಗೆ ಕೂಡಿಸಿಕೊಂಡು ಸ್ವತಂತ್ರವಾಗಿ ಮತ್ತು ತುಲನಾತ್ಮಕವಾಗಿ ಅಧ್ಯಯನ ಮಾಡುವುದೂ ಅಪೇಕ್ಷಣೀಯ.

ಪ್ರಾಚೀನ ಸಾಹಿತ್ಯದಲ್ಲಿ ಇರುವುದೆಲ್ಲ ಬಯಲಿಗೆ ಬಂದಿಲ್ಲ. ಆದ್ದರಿಂದ ಯುವಪೀಳಿಗೆಯ ಸಂಶೋಧಕರು ಪ್ರಾಚೀನ ಕನ್ನಡ ಸಾಹಿತ್ಯವನ್ನು ಈ ಕಾಲದ ಜನರ ನಡೆನುಡಿಗಳು ಉನ್ನತಿಯ ಶಿಖರಗಳಿಗೆ ಏರಲು ಸಾಧ್ಯವಾಗುವಂತೆ ಪರಿಶೋಧಿಸುವ, ವ್ಯಾಖ್ಯಾನಿಸುವ ಮತ್ತು ಪ್ರಕಟಿಸುವ ಕೆಲಸವನ್ನು ಕೈಗೆತ್ತಿಕೊಳ್ಳಬಹುದಾಗಿದೆ. ಹಿಂದಿನ ಕಾಲಕ್ಕಿಂತಲೂ ಹೆಚ್ಚಿನ ಅನುಕೂಲಗಳು ಇಂದಿನ ವಿಶ್ವವಿದ್ಯಾಲಯಗಳ ವಿದ್ವಾಂಸರಿಗೆ ಸಿಗುತ್ತವೆ. ವಿಶ್ವವಿದ್ಯಾಲಯ ಧನಸಹಾಯ ಆಯೋಗದ ಶಿಫಾರಸ್ಸಿನ ನಂತರ ಕಾಲೇಜು ಉಪನ್ಯಾಸಕರ ವೇತನ ಭತ್ಯೆಗಳು ಹಿಂದಿನ ಯಾವೊಬ್ಬ ಕನ್ನಡ ವಿದ್ವಾಂಸರೂ ಕಲ್ಪಿಸಿಕೊಳ್ಳಲು ಆಗದಷ್ಟು ಅತ್ಯುನ್ನತ ಮಟ್ಟದಲ್ಲಿದೆ.

ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನ ಸಿಗುವುದಕ್ಕೆ ಬೀದಿಗೆ ಇಳಿದು ಹೋರಾಟ ನಡೆಸಬೇಕಾಗಿ ಬಂತು. ಕನ್ನಡದ ಬಗ್ಗೆ ಅಧಿಕಾರಸ್ಥರು ಮತ್ತು ವಿದ್ವತ್ ವಲಯದಲ್ಲಿದ್ದ ಅವಜ್ಞೆಯೇ ಇಂಥ ಹೋರಾಟಕ್ಕೆ ಕಾರಣವಾಯಿತು. ಕನ್ನಡದ ಬಗೆಗಿನ ನಿರ್ಲಕ್ಷ್ಯ ಈಗಿನದೇನೂ ಅಲ್ಲ. ೧೮೮೫ರಷ್ಟು ಹಿಂದೆಯೇ ಜೆ.ಎಫ್.ಫ್ಲೀಟ್ ಅವರು ಫರ್ಡಿನಾಂಡ್ ಕಿಟೆಲ್ ಅವರ ಕನ್ನಡ – ಇಂಗ್ಲಿಷ್ ನಿಘಂಟನ್ನು ವಿಮರ್ಶಿಸುವ ಸಂದರ್ಭದಲ್ಲಿ ಈ ಕುರಿತು ವ್ಯಕ್ತಪಡಿಸಿದ ಅಭಿಪ್ರಾಯಗಳು ಇಂಡಿಯನ್ ಆಂಟಿಕ್ವರಿಯಲ್ಲಿ ಪ್ರಕಟವಾಗಿರುವುದನ್ನು ಹಿರಿಯ ವಿದ್ವಾಂಸ ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ ಅವರು ಈಚಿನ ತಮ್ಮೊಂದು ಕೃತಿಯಲ್ಲಿ ಉಲ್ಲೇಖಿಸಿದ್ದಾರೆ. ಅದರ ಭಾಗಗಳು ಇಲ್ಲಿವೆ:

'ಬಹು ಪ್ರಾಚೀನ ಕಾಲದಿಂದಲೂ ಇರುವ ವಾಸ್ತವವಾದ, ಬೆಳಗಾವಿ, ಬಿಜಾಪುರ, ಧಾರವಾಡ ಜಿಲ್ಲೆಗಳಲ್ಲಿಯೂ ಸೊಲ್ಲಾಪುರದ ಕೆಲವು ಭಾಗಗಳಲ್ಲಿಯೂ ಬೊಂಬಾಯಿ ಅಧಿಪತ್ಯದ ಉತ್ತರ ಕನ್ನಡ ಜಿಲ್ಲೆಯಲ್ಲಿಯೂ, ದಕ್ಷಿಣ ಮರಾಠ ಪ್ರಾಂತ್ಯವೆಂದು ವ್ಯವಹರಿಸುವ ಇತರ ದೇಶೀಯ ಸಂಸ್ಥಾನಗಳಲ್ಲಿಯೂ ಮದರಾಸು ಅಧಿಪತ್ಯದ ಬಳ್ಳಾರಿ ಜಿಲ್ಲೆಯಲ್ಲಿಯೂ, ಮೈಸೂರಿನಲ್ಲಿ, ನಿಜಾಂ ಪ್ರಭುತ್ವದ ಪ್ರಾಂತ್ಯಗಳಲ್ಲಿ ಕೂಡ ಈಗಲೂ ವಿಶೇಷವಾಗಿ ಬಳಕೆಯಲ್ಲಿರುವ ದೇಶಭಾಷೆಯಾದ ಕನ್ನಡ ಭಾಷೆಗೆ ತನಗೆ ನ್ಯಾಯವಾಗಿ ಸಲ್ಲಬೇಕಾದ ಮನ್ನಣೆಯನ್ನು, ಲಕ್ಷ್ಯವನ್ನು ಪಡೆಯುವುದು ಇನ್ನೂ ಸಾಧ್ಯವಾಗಿಲ್ಲ'.

'ಕನ್ನಡ ಭಾರತೀಯವಾದ ಭಾಷೆಗಳಲ್ಲೆಲ್ಲ ಜೇನಿನಂತೆ ಸವಿಯಾದ ಭಾಷೆ. ಅಭಿವ್ಯಕ್ತಿಯ ಸಾಮರ್ಥ್ಯದಲ್ಲಿ ಹಾಗೂ ಪರಿಣಾಮಕಾರಿತ್ವದಲ್ಲಿ ಅತ್ಯಂತ ಶ್ರೀಮಂತವಾದದ್ದು. ಮೌಲಿಕ ಸಾಹಿತ್ಯ ರಚನೆಯ ಗಾತ್ರ (ಸಮೃದ್ಧಿ) ಮತ್ತು ಗುಣ (ಮೌಲ್ಯ) ಇವುಗಳ ದೃಷ್ಟಿಯಿಂದ ಬಹುಶಃ ಉಳಿದೆಲ್ಲ ಭಾಷೆಗಳನ್ನೂ ಮೀರಿ ನಿಲ್ಲುವಂಥದ್ದು..'

ಕನ್ನಡದ ಪ್ರಾಚೀನತೆ ಮತ್ತು ಮಹತ್ವ ಕುರಿತಾಗಿ ಬಿ.ಎಲ್. ರೈಸ್ ಅವರು ವ್ಯಕ್ತಪಡಿಸಿದ ಅಭಿಪ್ರಾಯಗಳೂ ಕುತೂಹಲಕಾರಿ. 'ದಕ್ಷಿಣ ಭಾರತದಲ್ಲಿ ದ್ರಾವಿಡ ಭಾಷೆಗಳೆಂಬುದಾಗಿ ಕರೆದುಕೊಳ್ಳುವ ಭಾಷೆಗಳಲ್ಲಿ ನಡೆದಿರುವ ಸಾಹಿತ್ಯ ಕೃಷಿಯ ವಿಷಯದಲ್ಲಿ ಕನ್ನಡಕ್ಕಿಂತ ಹೆಚ್ಚು ಪ್ರಾಚೀನತೆಯನ್ನು ಕೊಚ್ಚಿಕೊಳ್ಳುವ ಭಾಷೆ ಬೇರೆ ಯಾವುದೂ ಇಲ್ಲ. ಆದರೆ, ತಮಿಳು, ತೆಲುಗು, ಈ ಸೋದರ ಭಾಷೆಗಳಲ್ಲಿ ಅವಕ್ಕೆ ಶ್ರದ್ಧಾನ್ವಿತರಾದ ಉಪಾಸಕರು ಇರುವ ಹಾಗೆ ಕನ್ನಡ ಭಾಷೆಯ ಬಗೆಗೆ ಲಕ್ಷ್ಯ ಕೊಡುತ್ತಿರುವ ಪ್ರಾಚ್ಯವಿದ್ಯಾಪಂಡಿತರು ಹೆಚ್ಚಾಗಿಲ್ಲ...'.

ಕನ್ನಡದ ಹಿರಿಮೆಯನ್ನು ಸಾರಲು ಈ ಪಾಶ್ಚಾತ್ಯ ವಿದ್ವಾಂಸರು ವ್ಯಕ್ತಪಡಿಸಿದ ಅಭಿಪ್ರಾಯಗಳು ಕನ್ನಡಿಗರಲ್ಲಿ ತಮ್ಮ ಭಾಷೆಯ ಬಗೆಗಿನ ಅಭಿಮಾನವನ್ನು ಇಮ್ಮಡಿಗೊಳಿಸಬೇಕು. ಶಾಸ್ತ್ರೀಯ ಭಾಷೆಯ ಸ್ಥಾನದ ನೆಪದಲ್ಲಿ ಇನ್ನೂ ನಿದ್ರಾವಸ್ಥೆಯಲ್ಲಿರುವ ಹಸ್ತಪ್ರತಿಭಂಡಾರದ ನೂರಾರು ಅಪ್ರಕಟಿತ ಸಾಹಿತ್ಯ ಕೃತಿಗಳು ಬಯಲಿಗೆ ಬರಬೇಕು. ನಮ್ಮ ಅಗತ್ಯ, ಅವಕಾಶ ಆದ್ಯತೆಗಳಿಗೆ ಅನುಸಾರವಾಗಿ ನಮ್ಮ ಯೋಜನೆಗಳ ಸ್ವರೂಪವನ್ನು ಗೊತ್ತುಮಾಡಿಕೊಳ್ಳಬಹುದು. ಕಾರ್ಯಕ್ರಮಗಳನ್ನು ಕೈಗೊಳ್ಳಬಹುದು. ಈ

ಸಂಬಂಧದಲ್ಲಿ ರಾಜ್ಯದ ವಿಶ್ವವಿದ್ಯಾಲಯಗಳು, ಎಲ್ಲ ಸರ್ಕಾರಿ, ಅರೆ ಸರ್ಕಾರಿ ಮತ್ತು ಖಾಸಗಿ ಸಂಘ ಸಂಸ್ಥೆಗಳು ಅವುಗಳ ಶಕ್ತಿ ಮತ್ತು ಅರ್ಹತೆಗಳ ಮೇಲೆ ಅನುದಾನ ಪಡೆದು ಕನ್ನಡದ ಮುನ್ನಡೆಗೆ ಶ್ರಮಿಸಬಹುದಾಗಿದೆ ಎಂದು ವೆಂಕಟಾಚಲಶಾಸ್ತ್ರಿಗಳು ಅಭಿಪ್ರಾಯಪಡುತ್ತಾರೆ.

ಈಚೆಗೆ ವಿಶ್ವವಿದ್ಯಾಲಯಗಳು, ಅಕಾಡೆಮಿಗಳು ಅಭಿಜಾತ ಸಾಹಿತ್ಯದ ಅಧ್ಯಯನಗಳಿಗೆ ಪೋಷಕವಾದ ಪ್ರೋತ್ಸಾಹಕರ ವಾತಾವರಣವನ್ನು ನಿರ್ಮಿಸುತ್ತಿಲ್ಲ ಎಂಬ ಮಾತು ಕೇಳಿಬರುತ್ತಿವೆ. ಪ್ರಾಚೀನ ಪಠ್ಯಗಳ ಲಕ್ಷಣಗ್ರಂಥಗಳ ಅಧ್ಯಯನವಿಲ್ಲ. ಪ್ರಕಟಣೆಗಳಿಲ್ಲ ಎಂಬುದಾಗಿಯೂ ದೂರುಗಳಿವೆ. ನಮ್ಮ ಭಾಷೆಗೆ ಹೆಮ್ಮೆಯ ಕೋಡು ಮೂಡಿಸಿದ ಪಂಪ, ರನ್ನ, ಜನ್ನ, ನೇಮಿಚಂದ್ರ, ಕುಮಾರವ್ಯಾಸ, ಲಕ್ಷ್ಮೀಶರ ಕೃತಿಗಳನ್ನು ಧೀರಗಂಭೀರವಾದ ದನಿಯಲ್ಲಿ ವಾಚಿಸುವ, ರಸಸ್ಥಾನಗಳನ್ನು ಹಿಡಿದು ವ್ಯಾಖ್ಯಾನಿಸುವ, ಭಾಷಾಶೈಲಿಗಳ ಗತಿ ಗಮಕಗಳ ಸೂಕ್ಷ್ಮತೆಗಳನ್ನು ವಿಶ್ಲೇಷಿಸುವ ಯುವಪೀಳಿಗೆಯೇ ಕಣ್ಮರೆಯಾಗುತ್ತಿರುವಂತೆ ಭಾಸವಾಗುತ್ತಿದೆ. ಈ ದಿಕ್ಕಿನಲ್ಲಿ ಸಾಹಿತ್ಯಾಸಕ್ತ ಯುವಕ ಯುವತಿಯರಿಗೆ ಪ್ರೋತ್ಸಾಹದಾಯಕವಾದ ಯೋಜನೆಗಳು ಏರ್ಪಡಬೇಕು, ಮಾರ್ಗದರ್ಶನ ಶಿಕ್ಷಣಗಳು ದೊರೆಯಬೇಕು. ಇದಕ್ಕೆ ವಿಶೇಷವಾಗಿ ಸಾಂಸ್ಥಿಕ ಪ್ರಯತ್ನಗಳೇ ಬೇಕು ಎಂದೂ ಡಾ. ಶಾಸ್ತ್ರೀ ಅಭಿಪ್ರಾಯಪಡುತ್ತಾರೆ.

ಸರ್ಕಾರದಿಂದ ಆಗಿರುವ ಪ್ರಯತ್ನಗಳು ಕರ್ನಾಟಕ ಸರ್ಕಾರದ ಆದೇಶ (ಸಂಖ್ಯೆ: ಕಸಂವಾಪ್ರ ೨ ಕೆಒಎಲ್ ೨೦೦೮, ದಿನಾಂಕ ೧೩.೨.೨೦೦೯ರಲ್ಲಿ) ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನಮಾನ ದೊರೆತಿರುವ ಹಿನ್ನೆಲೆಯಲ್ಲಿ ಕನ್ನಡ ಭಾಷೆಯ ಸರ್ವಾಂಗೀಣ ಅಭಿವೃದ್ಧಿಗೆ ಅಗತ್ಯವಾದ ಸಲಹೆ-ಸೂಚನೆಗಳನ್ನು ನೀಡಲು ಮತ್ತು ಕಾರ್ಯಕ್ರಮದ ರೂಪುರೇಷೆಗಳನ್ನು ಸಿದ್ಧಪಡಿಸಿ, ಅನುಷ್ಠಾನಗೊಳಿಸಲು ಬೇಕಾದ ಮಾರ್ಗದರ್ಶನ ನೀಡುವುದಕ್ಕಾಗಿ ಮುಖ್ಯಮಂತ್ರಿ ಅಧ್ಯಕ್ಷತೆಯಲ್ಲಿ ಭಾಷಾ ವಿದ್ವಾಂಸರನ್ನೊಳಗೊಂಡ ಉನ್ನತ ಮಟ್ಟದ ಸಮಿತಿಯನ್ನು ರಚಿಸಲಾಗಿದೆ. ಹಾಗೆಯೇ ಕಾರ್ಯಾನುಷ್ಠಾನಗೊಳಿಸಲು ಮತ್ತು ಪ್ರಗತಿ ಪರಿಶೀಲಿಸಲು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಕಾರ್ಯಕಾರಿ ಸಮಿತಿಯನ್ನು ರಚಿಸಲಾಗಿದೆ.

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು (ಉನ್ನತ ಶಿಕ್ಷಣ ಇಲಾಖೆ) ಇವರ ಮುಖಾಂತರ ಕನ್ನಡ ಭಾಷಾ ಅಭಿವೃದ್ಧಿಗಾಗಿ ೧೧ ವಿ.ವಿ. ಗಳಿಗೆ- ಮೈಸೂರು ವಿಶ್ವವಿದ್ಯಾಲಯ, ಕರ್ನಾಟಕ ವಿಶ್ವವಿದ್ಯಾಲಯ (ಧಾರವಾಡ), ಬಿಜಾಪುರ ಮಹಿಳಾ ವಿಶ್ವವಿದ್ಯಾಲಯ, ಕುವೆಂಪು ವಿಶ್ವವಿದ್ಯಾಲಯ (ಶಂಕರಘಟ್ಟ), ಗುಲ್ಬರ್ಗಾ ವಿಶ್ವವಿದ್ಯಾಲಯ, ಮಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ವಿಶ್ವವಿದ್ಯಾಲಯ, ಕನ್ನಡ ಹಂಪಿ ವಿಶ್ವವಿದ್ಯಾಲಯ, ತುಮಕೂರು ವಿಶ್ವವಿದ್ಯಾಲಯ, ತಾಂತ್ರಿಕ ವಿಶ್ವವಿದ್ಯಾಲಯ (ಬೆಳಗಾವಿ) ಮತ್ತು ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, (ಮೈಸೂರು)- ತಲಾ ಒಂದು ಕೋಟಿ ರೂಪಾಯಿಗಳಂತೆ ಒಟ್ಟು ೧೧ ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

ದಿನಾಂಕ ೫.೯.೨೦೦೯ರಂದು ಕನ್ನಡ ಭಾಷಾ ಕಾರ್ಯಕಾರಿ ಸಮಿತಿಯ ಸಭೆಯನ್ನು ಕರೆಯಲಾಗಿದ್ದು ಈ ಸಭೆಯಲ್ಲಿ ಭಾಗವಹಿಸಿದ ವಿದ್ವಾಂಸರು ಚರ್ಚಿಸಿ, ತೆಗೆದುಕೊಂಡ ನಿರ್ಣಯಗಳ ಪ್ರಕಾರ ಒಂದು ಸವಿವರ ಕ್ರಿಯಾಯೋಜನೆಯನ್ನು ಸಿದ್ಧಪಡಿಸಿ ರಾಜ್ಯ ಸರ್ಕಾರದ ಮೂಲಕ ಕೇಂದ್ರ ಸರ್ಕಾರಕ್ಕೆ ಕಳಿಸಲು ಕ್ರಮಕೈಗೊಳ್ಳಲಾಗುತ್ತಿದೆ. ಈ ಕ್ರಿಯಾಯೋಜನೆಯನ್ನು ಸಿದ್ಧಪಡಿಸಲು ಪ್ರೊ. ಲಿಂಗದೇವರು ಹಳೆಮನೆಯವರನ್ನು ಕೋರಲಾಗಿದೆ.

ಕನ್ನಡ ಅಧ್ಯಾಪಕರು ಹಾಗೂ ಸಂಶೋಧನಾರ್ಥಿಗಳಿಗಾಗಿ ಕನ್ನಡ ಶಾಸ್ತ್ರೀಯ ಭಾಷೆಯ ಸ್ಥಾನಮಾನ ಕುರಿತು ಸಂಶೋಧನಾ ಕಮ್ಮಟಗಳನ್ನು ೨೭.೧೧.೨೦೦೯ರಂದು ಮೈಸೂರು ವಿ.ವಿ.ಯಲ್ಲೂ ೩.೧೨.೨೦೦೯ರಂದು ಕರ್ನಾಟಕ ವಿಶ್ವವಿದ್ಯಾಲಯದಲ್ಲೂ ಏರ್ಪಡಿಸಲಾಗಿತ್ತು. ಅಲ್ಲಿ ಶಾಸ್ತ್ರೀಯ ಭಾಷಾ

ಸ್ಥಾನಮಾನದ ಹಿನ್ನೆಲೆಯಲ್ಲಿ ಇನ್ನು ಮುಂದೆ ಮಾಡಬೇಕಾದ ಕಾರ್ಯಚಟುವಟಿಕೆಗಳ ಬಗ್ಗೆ ಹಾಗೂ ಈವರೆಗೆ ಆದ ಪ್ರಗತಿಯ ಬಗ್ಗೆ ವಿವರವಾಗಿ ಪರಾಮರ್ಶಿಸಲಾಗಿದೆ.

ದಿನಾಂಕ ೨೧.೦೧.೨೦೧೦ರಂದು ಬೆಂಗಳೂರು ವಿಶ್ವವಿದ್ಯಾಲಯದ ಡೆಂಟಲ್ ಕಾಲೇಜಿನ ಸಭಾಂಗಣದಲ್ಲಿ ಕನ್ನಡ ಶಾಸ್ತ್ರೀಯ ಭಾಷೆಯ ೩ನೇ ಭಾಷಾ ಕಮ್ಮಟವನ್ನು ಏರ್ಪಡಿಸಲು ಕ್ರಮಕೈಗೊಳ್ಳಲಾಗುತ್ತಿದೆ.

ವಿಶ್ವವಿದ್ಯಾಲಯಗಳಲ್ಲಿ ಆಗಿರುವ ಪ್ರಯತ್ನಗಳು ಮಂಗಳೂರು ವಿ.ವಿ. ಮಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗಕ್ಕೆ ಈಗಾಗಲೇ ಒಂದು ಕೋಟಿ ರೂಪಾಯಿ ಅನುದಾನ ಬಿಡುಗಡೆಯಾಗಿದ್ದು, ಅನುದಾನದ ಬಳಕೆಗೆ ನಾಲ್ವರು ಕನ್ನಡ ಪ್ರಾಧ್ಯಾಪಕರ ನೇತೃತ್ವದಲ್ಲಿ ನಾಲ್ಕು ಯೋಜನೆಗಳನ್ನು ರೂಪಿಸಲಾಗಿದೆ. ಯೋಜನೆಗಳ ಕಾಲಮಿತಿ ಎರಡು ವರ್ಷ. ಈಗಾಗಲೇ ೨೧ ಸಂಶೋಧನಾ ಸಹಾಯಕರನ್ನು ನೇಮಿಸಿಕೊಳ್ಳಲಾಗಿದೆ ಎನ್ನುತ್ತಾರೆ ಮಂಗಳೂರು ವಿ.ವಿ. ಕುಲಪತಿ ಪ್ರೊ. ಕೆ.ಎಂ. ಕಾವೇರಿಯಪ್ಪ.

**ಮಂಗಳೂರು ವಿ.ವಿ. ಹಮ್ಮಿಕೊಂಡಿರುವ ಯೋಜನೆಗಳು ಹೀಗಿವೆ:**

೧. ಡಾ. ಬಿ. ಶಿವರಾಮ ಶೆಟ್ಟಿ ನೇತೃತ್ವದಲ್ಲಿ ಮಂಗಳೂರು ವಿ.ವಿ. ವ್ಯಾಪ್ತಿಗೆ ಬರುವ ದಕ್ಷಿಣ ಕನ್ನಡ, ಉಡುಪಿ ಹಾಗೂ ಕೊಡಗು ಜಿಲ್ಲೆಯಲ್ಲಿನ ಭಾಷೆಗಳ ಅಧ್ಯಯನ ನಡೆಸಲಾಗುವುದು. ಈ ಭಾಷೆಗಳ ಪರಸ್ಪರ ಸಂಬಂಧ, ಸಾಂಸ್ಕೃತಿಕ ಹಿನ್ನೆಲೆಯ ಅಧ್ಯಯನ ನಡೆಯಲಿದೆ.

೨. ಡಾ. ಅಭಯ್ ಕುಮಾರ್ ಮುಂದಾಳತ್ವದ ತಂಡ ಮೂರು ಜಿಲ್ಲೆಗಳ ಭಿನ್ನ ಸಮುದಾಯಗಳ ಸಾಂಸ್ಕೃತಿಕ ಮಾಹಿತಿಕೋಶ ತಯಾರಿಸಲಿದೆ. ಪ್ರತಿಯೊಂದು ಜಾತಿಯ ಆಚರಣೆ, ಆರಾಧನೆ, ನಂಬಿಕೆ, ಕುಲಕಸುಬು, ಆಹಾರ ಪದ್ಧತಿ, ವೇಷಭೂಷಣ, ಸಂಸ್ಕೃತಿಯ ಸವಿವರಗಳನ್ನು ಆಡಿಯೋ, ವಿಡಿಯೋ ಮೂಲಕ ದಾಖಲೀಕರಣ ಮಾಡಿಕೊಳ್ಳಲಿದೆ.

೩. ಡಾ. ಕೆ. ಚಿನ್ನಪ್ಪ ಗೌಡ ನೇತೃತ್ವದಲ್ಲಿ ಮೂರು ಜಿಲ್ಲೆಗಳ ಆರಾಧನೆ, ರಂಗ ಪ್ರದರ್ಶನ, ಕಲೆಗಳ ಆಡಿಯೋ, ವಿಡಿಯೋ ದಾಖಲೀಕರಣ ಮಾಡಲಾಗುವುದು. ಭೂತಾರಾಧನೆ, ನಾಗಾರಾಧನೆ, ಯಕ್ಷಾರಾಧನೆ, ಸಿರಿ ಆರಾಧನೆ, ಮಾರಿ ಆರಾಧನೆ, ಶಿಷ್ಟ ದೇವತೆಗಳ ವಿಶಿಷ್ಟತೆ, ವಿಭಿನ್ನತೆಯ ಸಮಗ್ರ ಅಧ್ಯಯನ ನಡೆಸಲಾಗುವುದು.

೪. ಡಾ. ಸಬಿಹಾ ಭೂಮಿಗೌಡ ನೇತೃತ್ವದಲ್ಲಿ ಮೂರು ಜಿಲ್ಲೆಗಳಲ್ಲಿ ಕಳೆದ ೧೦ ವರ್ಷಗಳಲ್ಲಿ ಆದ ಚಳವಳಿ, ಹೋರಾಟಗಳ ಅಧ್ಯಯನ ನಡೆಸಲಾಗುವುದು.

ಕರ್ನಾಟಕ ವಿಶ್ವವಿದ್ಯಾಲಯ: ಹಸ್ತಪ್ರತಿಗಳ ಸಂರಕ್ಷಣೆ, ರಂಗಭೂಮಿ ಮತ್ತು ಪ್ರದರ್ಶನ ಕಲೆಗಳ ಅಧ್ಯಯನ, ಭಾಷಾ ಪ್ರಯೋಗಶಾಲೆ, ಭಾಷಾವಿಜ್ಞಾನ ಮತ್ತು ಭಾಷಾಂತರ- ಇವು ಕನ್ನಡ ಭಾಷೆಯ ಅಭಿವೃದ್ಧಿ ನಿಟ್ಟಿನಲ್ಲಿ ಕನಾಟಕ ವಿವಿ ಹಮ್ಮಿಕೊಂಡಿರುವ ಮುಖ್ಯ ಯೋಜನೆಗಳು.

ವಿಶ್ವವಿದ್ಯಾಲಯದ ಕನ್ನಡ ಅಧ್ಯಯನಪೀಠದಲ್ಲಿ ೭೦೦೦ ಹಸ್ತಪ್ರತಿಗಳ ಸಂಗ್ರಹವಿದ್ದು ಅವುಗಳ ಸಂರಕ್ಷಣೆ ಮತ್ತು ಪ್ರಕಟಣೆಗಾಗಿ ೬೬,೨೬,೦೦೦ ರೂ. ಗಳ ಯೋಜನೆ ರೂಪಿಸಲಾಗಿದೆ. ೧೯.೮ ಲಕ್ಷ ರೂಪಾಯಿ ವೆಚ್ಚದಲ್ಲಿ ರಂಗಭೂಮಿ ಮತ್ತು ಪ್ರದರ್ಶನ ಕಲೆಗಳ ಅಧ್ಯಯನ, ೧೫.೭ ಲಕ್ಷ ರೂಪಾಯಿ ವೆಚ್ಚದಲ್ಲಿ ಭಾಷಾ ಪ್ರಯೋಗಶಾಲೆ ಯೋಜನೆಗಳನ್ನು ಸಿದ್ಧಪಡಿಸಲಾಗಿದೆ.

ಮೈಸೂರು ವಿಶ್ವವಿದ್ಯಾಲಯ: ಒಟ್ಟು ಎರಡು ಕೋಟಿ ರೂಪಾಯಿಗಳ ಕ್ರಿಯಾಯೋಜನೆಯನ್ನು ಮೈಸೂರು ವಿ.ವಿ. ಸಿದ್ಧಪಡಿಸಿದೆ. ಇದರಲ್ಲಿ ೪೪.೫ ಲಕ್ಷ ರೂಪಾಯಿ ರಾಜ್ಯದ ಅರಸು ಮನೆತನಗಳ ಶಾಸನ ಸಂಪುಟಗಳ ಬೆಳಕು ಕಾಣಿಸಲು ಮೀಸಲು. ಹಸ್ತಪ್ರತಿಗಳ ಸಂರಕ್ಷಣೆ, ದಾಖಲಾತಿಗಾಗಿ ೨೫ ಲಕ್ಷ, ಕನ್ನಡ ವಿಶ್ವಕೋಶಗಳಲ್ಲಿ ಪ್ರಕಟವಾದ ಲೇಖನಗಳ ವಿಷಯವಾರು ಗ್ರಂಥಗಳ ಪ್ರಕಟಣೆಗೆ ೬೦ ಲಕ್ಷ, ಕನ್ನಡ ವಿಷಯ ವಿಶ್ವಕೋಶ ಕರ್ನಾಟಕ ಸಂಪುಟದ ಅನುವಾದ ಕ್ರಿಯಾಯೋಜನೆಗೆ ೪೬.೫ ಲಕ್ಷ, ಸಾಹಿತ್ಯ ಚಿಂತನೆಗಳ ಪಾರಿಭಾಷಿಕ ಪದವಿವರಣ ಕೋಶಕ್ಕೆ ೧೦ ಲಕ್ಷ, ಕನ್ನಡದಲ್ಲಿ ಅನ್ಯಭಾಷಿಕ ಪದಗಳ ನಿಷ್ಪತ್ತಿಯ ಕೋಶಕ್ಕೆ ೧೪ ಲಕ್ಷ–ಹೀಗೆ, ಅಧ್ಯಯನ ಮತ್ತು ಪ್ರಕಟಣೆಗೆ ಸಂಬಂಧಿಸಿದ ಯೋಜನೆಗಳಿಗೆ ಮೈಸೂರು ವಿ.ವಿ. ಒತ್ತು ನೀಡಿದೆ.

ಹಂಪಿ ಕನ್ನಡ ವಿಶ್ವವಿದ್ಯಾಲಯ: ಸಂವಾದ ಮತ್ತು ಕಾರ್ಯಾಗಾರ, ಕ್ಷೇತ್ರಕಾರ್ಯ ಮತ್ತು ಮಾಹಿತಿ ಸಂಗ್ರಹ, ಸಿಬ್ಬಂದಿ ನೇಮಕ, ಸಲಕರಣೆಗಳ ಖರೀದಿ– ಹೀಗೆ ವಿವಿಧ ಯೋಜನೆಗಳಿಗೆ ಸಂಬಂಧಿಸಿದಂತೆ ಕನ್ನಡ ವಿ.ವಿ. ೧.೬೦ ಕೋಟಿ ರೂಪಾಯಿಗಳ ಯೋಜನೆ ತಯಾರಿಸಿದೆ. ಈ ಯೋಜನೆಗಳು ಜಾರಿಗೊಳ್ಳುವುದರಿಂದ– ಆಧುನಿಕ ದಿನಮಾನಕ್ಕೆ ಕನ್ನಡವನ್ನು ಶಿಕ್ಷಣ, ಆಡಳಿತ ಮತ್ತು ಮಾಧ್ಯಮಗಳಲ್ಲಿ ಸಶಕ್ತವಾಗಿ ಬಳಸುವುದಕ್ಕೆ ಸಜ್ಜುಗೊಳಿಸುವುದು ಸೇರಿದಂತೆ ಸರ್ಕಾರ ಮತ್ತು ಸಮಾಜಕ್ಕೆ ಹಲವು ಪ್ರಯೋಜನಗಳಿವೆ ಎನ್ನುವುದು ವಿ.ವಿ. ಅನಿಸಿಕೆ.*

* ಸೌಜನ್ಯ: ಪ್ರಜಾವಾಣಿ, ೧೭೧.೨೦೧೦.

## ಸಾಂಕೇತಿಕ ಸಂತೃಪ್ತಿ

ಕನ್ನಡಿಗರ ಭಾವನಾತ್ಮಕ ಬಯಕೆ ಈಡೇರಿದಂತಾಗಿದೆ. ಸಾಂಕೇತಿಕ ಸಂತೃಪ್ತಿ ಮತ್ತು ಸಂತೋಷ ಸಿಕ್ಕಿದೆ.
ಕನ್ನಡ ಭಾಷೆಯ ಬೆಳವಣಿಗೆಗೆ ಶಾಸ್ತ್ರೀಯ ಸ್ಥಾನಮಾನ ನೆರವಾಗಲಿದೆ.
ಎಲ್ಲ ಭಾಷೆಗಳಿಗೂ ಹಿಂದಿ ಭಾಷೆಗೆ ಇರುವ ಸ್ಥಾನಮಾನವನ್ನು ವಿಸ್ತರಿಸಬೇಕು.
ಎಲ್ಲ ಭಾಷೆಗಳನ್ನು ಸಮಾನವಾಗಿ ಪರಿಗಣಿಸಬೇಕು ಮತ್ತು ಗೌರವಿಸಬೇಕು.

–ಪ್ರೊ. ಬರಗೂರು ರಾಮಚಂದ್ರಪ್ಪ

# ಶಾಸ್ತ್ರೀಯ ಭಾಷೆ



# ಕನ್ನಡ: ಮುಂದಿನ ಯೋಜನೆಗಳು

ಡಾ. ಡಿ.ಕೆ. ಚಿತ್ತಯ್ಯ ಪೂಜಾರ್

ಶಾಸ್ತ್ರೀಯ ಭಾಷೆ ಎನ್ನುವುದು ವಾಸ್ತವವಾಗಿ ಭಾಷಾವಿಜ್ಞಾನದ ಕ್ಷೇತ್ರದಲ್ಲಿ ನಮ್ಮ ಅಧ್ಯಯನದ ಅನುಕೂಲಕ್ಕಾಗಿ ಬಳಕೆಯಲ್ಲಿರುವ ಪಾರಿಭಾಷಿಕ ಪದ. ಇದಕ್ಕೆ ಹಲವಾರು ಪರ್ಯಾಯ ಪದಗಳಿವೆ. ಪ್ರಾಚೀನ ಭಾಷೆ, ಅಭಿಜಾತ ಭಾಷೆ, ಬಳಕೆಯಲ್ಲಿಲ್ಲದ ಮೃತಭಾಷೆ, ಇತ್ಯಾದಿಯಾಗಿ ಕರೆಯುತ್ತಿದ್ದೇವೆ. ಅಂದರೆ 'classical language' ಎಂಬ ಆಂಗ್ಲ ಭಾಷಾ ಪರಿಭಾಷೆಗೆ ಸಂವಾದಿಯಾಗಿ ನಾವೀಗ 'ಶಾಸ್ತ್ರೀಯ ಭಾಷೆ' ಎಂಬ ಪದವನ್ನು ಬಳಸುತ್ತಿದ್ದೇವೆ. ಲ್ಯಾಟಿನ್ ಭಾಷೆಯಲ್ಲಿ 'classical' ಅಂದರೆ 'ಅತ್ಯುನ್ನತವರ್ಗ' ಎಂದರ್ಥ. ನಮ್ಮ ಹಿರಿಯರು ಇದಕ್ಕೆ ಸಮಾನಾರ್ಥ ಕೊಡುವ 'ಅಭಿಜಾತ' ಎಂಬ ಪದವನ್ನು ಬಹಳ ಹಿಂದೆಯೇ ಬಳಸಿದ್ದಾರೆ. ಇತ್ತೀಚೆಗೆ ನಡೆಯುತ್ತಿರುವ ಚರ್ಚೆಯಿಂದ ಇನ್ನೂ ಕೆಲವರು 'ಶಾಸ್ತ್ರೀಯ' ಎಂಬ ಪದಕ್ಕೆ ಬದಲಾಗಿ 'ಪಳಮೈ ಕನ್ನಡ' ಎಂಬ ಪದ ಸೂಚಿಸಿದ್ದಾರೆ. ಇದೂ ಸಹ ಒಪ್ಪಬಹುದಾದದ್ದೇ. ಆದರೆ ಈಗಾಗಲೇ ವಿದ್ವಾಂಸರಾಗಲೀ, ಮಾಧ್ಯಮದವರಾಗಲಿ 'ಶಾಸ್ತ್ರೀಯ ಕನ್ನಡ' ಎಂದೇ ಪ್ರಚುರಪಡಿಸುತ್ತಿರುವುದರಿಂದ ಬಹುಮಟ್ಟಿಗೆ ಇದನ್ನೇ ಒಪ್ಪಿ ಮುನ್ನಡೆಯುತ್ತಿದ್ದೇವೆ ಎನ್ನಿಸುತ್ತಿದೆ.

ನನ್ನ ಮುಂದಿನ ಮಾತುಗಳನ್ನು ಇಲ್ಲಿ ಸ್ಪಷ್ಟಪಡಿಸುತ್ತಿದ್ದೇನೆ. ಇತರ ಶಾಸ್ತ್ರೀಯ ಭಾಷೆಗಳಿಗೂ ಕನ್ನಡಕ್ಕೂ ಇರುವ ವ್ಯತ್ಯಾಸ ಮತ್ತು ಸಂಬಂಧಗಳಾವುವು ಎಂಬುದನ್ನಾಗಲಿ, ಕನ್ನಡ ಭಾಷೆಯ ವೈಶಿಷ್ಟ್ಯಗಳಾವುವು ಎನ್ನುವುದಾಗಲೀ, ಭಾಷಾ ರಾಜಕೀಯದ ವಿವರಗಳನ್ನಾಗಲೀ ಎತ್ತುವುದು ನನ್ನ ಉದ್ದೇಶವಲ್ಲ. ಇಂಥ ಭಾಷೆಗೆ ಶಾಸ್ತ್ರೀಯ ಸ್ಥಾನಮಾನ ಸಿಕ್ಕಿರುವುದರಿಂದ ಕನ್ನಡ ಭಾಷೆಗೂ ಕೊಡಬೇಕು ಎನ್ನುವ ವಾದವನ್ನೂ ನಾನು ಮಂಡಿಸುತ್ತಿಲ್ಲ. ಕಾರಣ ಈಗಾಗಲೇ ಕನ್ನಡ ಭಾಷೆಗೆ ಕೇಂದ್ರ ಸರ್ಕಾರ 'ಶಾಸ್ತ್ರೀಯ ಭಾಷೆ'ಯ ಸ್ಥಾನಮಾನವನ್ನು ಘೋಷಿಸಿಯಾಗಿದೆ.

ತಮಿಳು ಭಾಷೆಯಿಂದ ಅಥವಾ ಆ ಭಾಷೆಗೆ ನೀಡಿರುವ ಸ್ಥಾನಮಾನದಿಂದ ಇದುವರೆಗೂ 'ಶಾಸ್ತ್ರೀಯ ಭಾಷೆ'ಗೆ ಇದ್ದ ಮಾನದಂಡವೇ ಬದಲಾಗಿದೆ. ಅಂದರೆ ಈ ಮುಂಚೆ ಶಾಸ್ತ್ರೀಯ ಭಾಷೆ ಎಂದರೆ "ಸಾವಿರಾರು ವರ್ಷಗಳ ಹಿಂದೆ ಬಳಕೆಯಲ್ಲಿದ್ದ ಭಾಷೆಯೊಂದು ಜನ ಬಳಕೆಯಲ್ಲಿದ್ದ ಕಾಲದಲ್ಲಿ ಸಂಪದ್ಭರಿತವಾಗಿದ್ದು, ಸಾಹಿತ್ಯ, ಸಂಸ್ಕೃತಿ, ಧರ್ಮ, ಶಿಕ್ಷಣ, ರಾಜಕಾರಣ ಮುಂತಾದ ಕ್ಷೇತ್ರಗಳಲ್ಲಿ ಮುಂದುವರೆದಿದ್ದು ಅನೇಕ ಮೌಲಿಕ ಗ್ರಂಥಗಳನ್ನು

ರಚಿಸಿ ಅಭ್ಯಸಿಸುತ್ತಿದ್ದ ಸಂಪದ್ಭರಿತ ಭಾಷೆಯಾಗಿದ್ದು ಪ್ರಸ್ತುತ ಆಧುನಿಕ ಕಾಲದಲ್ಲಿ ಬಳಕೆ ತಪ್ಪಿರುವ ಭಾಷೆ ಎಂದರ್ಥವಿತ್ತು ಆದರೆ ಈಗ ಇಂದಿಗೂ ಬಳಕೆಯಲ್ಲಿರುವ ಪ್ರಾಚೀನತೆಯನ್ನು ಹೊಂದಿರುವ ಸಮೃದ್ಧ ಭಾಷೆ" ಎಂದಾಗಿದೆ. ಅಂದರೆ living classical language ಜೀವಂತ ಶಾಸ್ತ್ರೀಯ ಭಾಷೆ ಎಂದಾಗಿದೆ. ಇದಲ್ಲದೆ ಶಾಸ್ತ್ರೀಯ ಭಾಷೆಯ ದಾಖಲಾದ ಇತಿಹಾಸ ಒಂದು ಸಾವಿರ ವರ್ಷಕ್ಕೂ ಪುರಾತನವಾಗಿರಬೇಕು ಎಂದು ಇದ್ದದ್ದು ತಮಿಳಿಗರ ಒತ್ತಡಕ್ಕೆ ಅದು ೧ ೧/೨ ಸಾವಿರ ವರ್ಷದಷ್ಟು ಹಿಂದಕ್ಕೆ ಹೋಗಬೇಕಾಯಿತು.

ಅದೇನೇ ಇರಲಿ ಇಂದು ಬಳಕೆ ತಪ್ಪಿದ/ತಪ್ಪುತ್ತಿರುವ ಪ್ರಾಚೀನ ಸಂಪದ್ಭರಿತ ಸಾಹಿತ್ಯ ಸಂಸ್ಕೃತಿಯನ್ನು ಹೊಂದಿರುವ ಶಾಸ್ತ್ರೀಯ ಭಾಷೆಗಳ ಅಧ್ಯಯನ, ಸಂಶೋಧನೆ ಮತ್ತು ಅದರ ಸತ್ವವನ್ನು ತನ್ನ ಭಾಷೆ ತಂದುಕೊಳ್ಳುವ ಮೂಲಕ ಬಳಕೆಯಲ್ಲಿರುವ ಜೀವಂತ ಭಾಷೆಯನ್ನು ಬಳಸುವ ಉದ್ದೇಶದಿಂದ ಆ ಭಾಷೆಗೆ ಕೆಲವು ಅನುದಾನಗಳು ಸಹಜವಾಗಿ ಬೇಕಾಗುತ್ತವೆ. (ಶಾಸ್ತ್ರೀಯ ಭಾಷೆಯ ಘೋಷಣೆಯಿಂದ ಬರುವ ಸೌಲಭ್ಯಗಳಿಗಿಂತ ನಮಗೆ ಇದು ಅಸ್ತಿತ್ವದ, ನಮ್ಮ ತನದ, ಮರ್ಯಾದೆಯ, ಪ್ರತಿಷ್ಠೆಯ ಪ್ರಶ್ನೆಯಾಗಬೇಕು)ಇಂದು ನಾನು ಬಹಳ ಮುಖ್ಯವಾಗಿ ಪ್ರಸ್ತಾಪ ಮಾಡಬೇಕಾಗಿರುವ ಅಥವ ನಿಮ್ಮ ಮುಂದೆ ಎತ್ತಬೇಕಾಗಿರುವ ಪ್ರಶ್ನೆ ಎಂದರೆ ಕೇಂದ್ರ ಸರ್ಕಾರ ಈಗಾಗಲೇ ಕನ್ನಡ ಭಾಷೆಗೆ 'ಶಾಸ್ತ್ರೀಯ ಸ್ಥಾನಮಾನ'ವನ್ನು (೨೦೦೮ ನವೆಂಬರ್) ಘೋಷಿಸಿಯಾಗಿದೆ. ಹೀಗೆ ಘೋಷಿಸುವುದರಿಂದ ಆ ಭಾಷೆಗೆ ಮುಂದಿನ ದಿನಗಳಲ್ಲಿ ಆಗಬಹುದಾದ ಪ್ರಯೋಜನಗಳೇನು ಅಥವಾ ಕೇಂದ್ರ ಸರ್ಕಾರ ಅದಕ್ಕಾಗಿ ನೀಡುವ ಸೌಲಭ್ಯಗಳನ್ನು ಅಥವಾ ಅನುದಾನವನ್ನು ಕನ್ನಡ ಭಾಷಾ ಬೆಳವಣಿಗೆಗೆ ಹೇಗೆ ಉಪಯೋಗಿಸಿಕೊಳ್ಳಬೇಕು ಎಂಬುದು ನನ್ನ ಪ್ರಶ್ನೆಯಾಗಿದೆ.

ಒಂದು ಭಾಷೆಯನ್ನು 'ಶಾಸ್ತ್ರೀಯ' ಭಾಷೆ ಎಂದು ಘೋಷಿಸುವುದರಿಂದ ಆ ಭಾಷೆಗೆ ದೊರೆಯುವ ಪ್ರಯೋಜನಗಳೇನು, ಲಾಭಗಳೇನು ಎಂಬುದರ ಬಗ್ಗೆ ಸಹಜವಾಗಿಯೇ ಕುತೂಹಲಗಳು ಏಳುತ್ತವೆ. ಈಗಾಗಲೇ ಪತ್ರಿಕೆಗಳಲ್ಲಿ ವಿವಿಧ ಮಾಧ್ಯಮಗಳಲ್ಲಿ ಕೆಲವರು ತಮ್ಮ ಊಹೆಗಳಿಗೆ ಅನುಗುಣವಾಗಿ ತಮ್ಮ ತಮ್ಮ ಹೇಳಿಕೆಗಳನ್ನು ನೀಡಿದ್ದಾರೆ. ಕೋಟಿಗಟ್ಟಲೆ ಹಣ ಲಭ್ಯವಾಗುತ್ತದೆ ಎಂಬ ಸುದ್ದಿಯಂತೂ ಜನಜನಿತವಾಗಿದೆ. ಇಲ್ಲಿ ಆರ್ಥಿಕ ಲಾಭಕ್ಕಿಂತ ಹೆಚ್ಚಾಗಿ ಆ ಭಾಷೆಗೆ ದೊರಕುವ ಪ್ರತಿಷ್ಠಿತ ಭಾಷೆಯ ಸ್ಥಾನಮಾನವೂ ಒಂದು ಪ್ರತಿಷ್ಠೆ. ಕಾರಣ ಭಾಷೆ ಕೇವಲ ಭಾಷೆಯಲ್ಲ ಅದು ಒಂದು ಸಮುದಾಯ, ಒಂದು ಪರಂಪರೆ. ಒಂದೂ ಭೂಪ್ರದೇಶ, ಒಂದು ಸಂಸ್ಕೃತಿ, ಇತ್ಯಾದಿ ಇತ್ಯಾದಿ ಹಾಗಾಗಿ ಇದೂ ಒಂದು ಪ್ರತಿಷ್ಠಿತ ಮಾನದಂಡವಾಗಿದೆ.

ಕೇಂದ್ರ ಸರ್ಕಾರ ಶಾಸ್ತ್ರೀಯ ಭಾಷೆಗೆ ಅಥವಾ ಅದರ ಅಭಿವೃದ್ಧಿಗೆ ಒದಗಿಸುವ ಆರ್ಥಿಕ ಸಹಾಯವನ್ನು ಗಮನದಲ್ಲಿಟ್ಟುಕೊಂಡು "ತಮಿಳು ಭಾಷೆಗೆ ಕ್ಲಾಸಿಕಲ್ ಸ್ಥಾನ-ಮಾನ ಸಿಕ್ಕ ಸಂದರ್ಭದಲ್ಲಿ ಆ ಭಾಷೆಗೆ ಒದಗಿರುವ ಲಾಭಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಿತ್ತು."

೧. ಪ್ರತಿವರ್ಷ ಎರಡು ಅಂತರ ರಾಷ್ಟ್ರೀಯ ಪ್ರಶಸ್ತಿಗಳನ್ನು ಭಾರತೀಯ ಶಾಸ್ತ್ರೀಯ ಭಾಷೆಗಳ ಬಗ್ಗೆ ಕೆಲಸ ಮಾಡಿರುವ ಶ್ರೇಷ್ಠ ವಿದ್ವಾಂಸರುಗಳಿಗೆ ನೀಡುವುದು.

೨. ರಾಷ್ಟ್ರೀಯ ಭಾಷೆಯ ಅಧ್ಯಯನಕ್ಕೆ ಒಂದು ಉನ್ನತ ಮಟ್ಟದ ಸಂಶೋಧನಾ ಕೇಂದ್ರ ಸ್ಥಾಪಿಸುವುದು.

೩. ಭಾರತದ ವಿವಿಧ ವಿಶ್ವವಿದ್ಯಾನಿಲಯಗಳಲ್ಲಿ ಶಾಸ್ತ್ರೀಯ ಭಾಷೆಗಳ ಪ್ರಾಧ್ಯಾಪಕ ಪೀಠಗಳನ್ನು ವಿಶ್ವವಿದ್ಯಾಲಯದ ಅನುದಾನ ಆಯೋಗದ ಮೂಲಕ ಸ್ಥಾಪಿಸುವುದು.

೪. ಈಗಾಗಲೇ ನೀಡುತ್ತಿರುವ ಭಾಷಾ ಸಂಶೋಧನಾ ಸಂಸ್ಥೆಗಳ ಅನುದಾನಗಳನ್ನು ಹೆಚ್ಚಿಸುವುದು ಮತ್ತು ವಿಸ್ತರಿಸುವುದು. ಅಥವಾ ಕರ್ನಾಟಕ ಮತ್ತು ಹೊರರಾಜ್ಯಗಳಲ್ಲಿ ಕನ್ನಡ ಭಾಷೆಯನ್ನು ಅಭಿವೃದ್ಧಿ ಪಡಿಸುವುದು, ಪ್ರಚಾರ ಮಾಡುವುದು ಅಥವಾ ಸಂರಕ್ಷಿಸಲು ಕೇಂದ್ರದಿಂದ ಆರ್ಥಿಕ ನೆರವು ಪಡೆಯುವುದು ಇತ್ಯಾದಿಯಾಗಿ.

ನನ್ನ ಮುಖ್ಯಪ್ರಶ್ನೆ ಎಂದರೆ ಒಂದು ಭಾಷೆಯನ್ನು ಬಲಿಷ್ಠಗೊಳಿಸಲು ಇಷ್ಟು ಯೋಜನೆಗಳು ಸಾಕಾಗುತ್ತವೆಯೇ. ಒಂದು ವೇಳೆ ಅದು ಸಾಕಾಗುವುದಾದರೆ ಇದುವರೆಗೆ ನಮ್ಮ ಸರ್ಕಾರಗಳು ಸ್ಥಾಪಿಸಿರುವ ಸಾಹಿತ್ಯ ಅಕಾಡೆಮಿಗಳು, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ನಾಡು ನುಡಿಗಾಗಿ ದುಡಿಯುತ್ತಿರುವ ಅಸಂಖ್ಯಾತ ಸಂಘ ಸಂಸ್ಥೆಗಳು, ರಾಜ್ಯದ ಹತ್ತಾರು ವಿಶ್ವವಿದ್ಯಾಲಯಗಳು, ಕನ್ನಡ ವಿಭಾಗಗಳು ಅವೆಲ್ಲಕ್ಕಿಂತಲೂ ಭಿನ್ನವಾಗಿ ಕರ್ನಾಟಕ, ಕನ್ನಡ, ಕನ್ನಡಿಗನಿಗೆ ಸಂಬಂಧಿಸಿದಂತೆ ಸಂಶೋಧನೆಗೆಂದೇ ರೂಪು ತಳೆದ ಹಂಪಿ ಕನ್ನಡ ವಿಶ್ವವಿದ್ಯಾಲಯ, ಮೈಸೂರಿನ CIIL ನಂತಹ ಸಂಶೋಧನಾ ಕೇಂದ್ರಗಳು ಇದುವರೆಗೆ ಏನು ಮಾಡಿಕೊಂಡು ಬಂದಿವೆ. ಒಂದು ವೇಳೆ ಅವು ಸರಿಯಾದ ದಿಕ್ಕಿನಲ್ಲಿ ಕೆಲಸ ನಿರ್ವಹಿಸಿಕೊಂಡು ಬಂದಿದ್ದರೆ ಆ ಭಾಷೆಗೆ ಶಾಸ್ತ್ರೀಯ ಸ್ಥಾನಮಾನ ಗಳಿಸಿಕೊಳ್ಳಲು ಇಷ್ಟೊಂದು ಹೋರಾಟದ ಅವಶ್ಯಕತೆ ಬೇಕಿತ್ತೆ ಮುಂತಾದ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಬೇಕಾಗುತ್ತದೆ.

ಪ್ರಾಚೀನ ಸಾಹಿತ್ಯವನ್ನು ಪುನರ್‌ಮುದ್ರಿಸುವುದು, ಅನುವಾದ ಮಾಡುವುದು, ಶಾಸನಗಳನ್ನೂ ಓದುವುದು ಇತ್ಯಾದಿಗಳಿಂದಷ್ಟೇ ಭಾಷೆ ಸಮರ್ಥವಾಗಲು ಸಾಧ್ಯವೆ? ಒಂದು ವೇಳೆ ಹೌದಾದರೆ ಈ ಕೆಲಸವನ್ನು ಮಾಡಲು ಒಂದು ಭಾಷೆಗೆ ಶಾಸ್ತ್ರೀಯ ಸ್ಥಾನಮಾನ ಬೇಕೆ? ಇದಲ್ಲದೆ ಜಗತ್ತಿನಲ್ಲಿ ಇದುವರೆವಿಗೂ ಭಾರತವನ್ನೂ ಒಳಗೊಂಡಂತೆ 'ಶಾಸ್ತ್ರೀಯ ಸ್ಥಾನಮಾನ' ಪಡೆದ ಭಾಷೆಗಳು ಹಾಕಿಕೊಂಡು ಯೋಜನೆಗಳು ಯಾವುವು? ಅದರಿಂದ ಏನು ಪ್ರಯೋಜನವಾಗಿದೆ ಎಂಬುದನ್ನು ನೋಡಬೇಕಾಗಿದೆ. ಉದಾ: ಸಂಸ್ಕೃತ, ತಮಿಳು, ಭಾಷೆಗಳ ವಿಷಯದಲ್ಲಿ ನಡೆದಿರುವ ಅಭಿವೃದ್ಧಿ ಕೆಲಸಗಳನ್ನು ಅಥವಾ ಯೋಜನೆಗಳನ್ನು ಪರಿಶೀಲಿಸಬಹುದು.



'ಶಾಸ್ತ್ರೀಯ ಕನ್ನಡ' ಎಂದಾದ ಮೇಲೆ ಅದರ ಅಭಿವೃದ್ಧಿಗಾಗಿ 'ಭಾಷೆ ಮತ್ತು ಪ್ರಾಚೀನ ಕೃತಿಗಳ ಬಗೆಗೆ ಹೊಸ ರೀತಿಯ ಪ್ರಶ್ನೆಗಳನ್ನು ಕೇಳಿಕೊಳ್ಳಬೇಕಾಗಿದೆ. ಇದುವರೆಗಿನ ಅಧ್ಯಯನಗಳನ್ನು ಅಧ್ಯಯನದ ವಿಧಾನಗಳನ್ನು ಮರು ಪರಿಶೀಲನೆ ಮಾಡಬೇಕಾಗಿದೆ. ಈಗಾಗಲೇ ತಮಿಳು, ಸಂಸ್ಕೃತ, ತೆಲುಗು ಮುಂತಾದ ಭಾಷೆಗಳಲ್ಲಿ ಈ ಕೆಲಸ ನಡೆಯುತ್ತಿದೆ ಎಂದು ವಿದ್ವಾಂಸರು ನಿನ್ನೆಯಿಂದ ಹೇಳುತ್ತಿದ್ದಾರೆ. ಹಾಗಾಗಿ ಈ ಕೆಲಸ ಕನ್ನಡದ ಸಂದರ್ಭದಲ್ಲಿಯೂ ತ್ವರಿತವಾಗಿ ಆಗಬೇಕಾಗಿದೆ. ಕಾರಣ "ಕನ್ನಡ ಭಾಷೆಯ ವರ್ತಮಾನದ ನೆಲೆಗಟ್ಟುಗಳನ್ನು ಆಳವಾಗಿ ತಿಳಿದುಕೊಳ್ಳಬೇಕಾದರೆ ಅದರ ಗತಕಾಲದ ರಚನೆಗಳ ಬಗೆಗೆ ಖಚಿತ ತಿಳಿವಳಿಕೆ ಇರಬೇಕಾದುದು ಅಗತ್ಯ." ನಾವು ಈಗ ತಲುಪಿರುವ ಸ್ಥಿತಿ ಇದೆಯಲ್ಲಾ ಅದರ ಹಿಂದಿನ ಸ್ವರೂಪದ ತಿಳಿವಳಿಕೆ ಬೇಡವೇ.

ಈ ಹಿನ್ನೆಲೆಯಲ್ಲಿ ಕನ್ನಡ ಭಾಷೆಯ ಮೌಲಿಕ ಗ್ರಂಥಗಳು, ಪ್ರಾಚೀನಗ್ರಂಥಗಳ ಅಧ್ಯಯನ, ಅಭ್ಯಾಸ, ಪುನಾಸೃಷ್ಠಿ, ಅನುವಾದ, ಪ್ರಭಾವ ಇತ್ಯಾದಿಗಳನ್ನು ಒಳಗೊಂಡು ಆ ಪ್ರದೇಶದ ಭಾಷಾ ಸಂಸ್ಕೃತಿ ಸಂಪದ್ಭರಿತವಾಗಿದೆ. ಅದು ಇಂದು ನಶಿಸಿ ಹೋಗುವ ಹಾದಿಯಲ್ಲಿದೆ ಅದರ ಉಳಿವಿಗೆ ಹೆಚ್ಚಿನ ಸಂಶೋಧನೆ ಆಗಬೇಕಿದೆ. ಆ ಮೂಲಕ ಭಾಷೆಯ ಅಭಿವೃದ್ಧಿ ಕಾವ್ಯ ಹೀಗೆ ಬಳಕೆ ತಪ್ಪುತ್ತಿರುವ ಪ್ರಾಚೀನ ಸಂಪದ್ಭರಿತ ಸಾಹಿತ್ಯ ಸಂಸ್ಕೃತಿಯನ್ನು ಹೊಂದಿರುವ ಭಾಷೆಯ ಅಧ್ಯಯ, ಸಂಶೋಧನೆಯನ್ನು ನಡೆಸುವುದರ ಮುಖೇನ ಅದರ ಸತ್ವವನ್ನು ಬಳಕೆಯಲ್ಲಿರುವ ಜೀವಂತ ಭಾಷೆಗೆ ತಂದುಕೊಡಬಹುದು. ಭಾಷೆಯನ್ನು ಬಲಿಷ್ಠ ಅಥವಾ ಬಹುಕಾಲ ಬದುಕುವ ಸಾಮರ್ಥ್ಯವನ್ನು ತಂದು ಕೊಡಬಹುದು.

ಪ್ರಸಕ್ತ ಜಾಗತೀಕರಣದ ಅಬ್ಬರದ ಈ ಸಂದರ್ಭದಲ್ಲಿ ಒಂದು ಭಾಷೆ ಬಹುಭಾಷೆಗಳ ಮಧ್ಯೆ ತನ್ನ ಉಳಿವಿಗಾಗಿ ಸದಾ ಪೈಪೋಟಿ ನಡೆಸುತ್ತಿರುತ್ತದೆ. ಜೊತೆಗೆ ಅದು ಅನ್ನದ ಸಾಮರ್ಥ್ಯವನ್ನು ಪಡೆದುಕೊಳ್ಳಬೇಕಾಗುತ್ತದೆ. ಯಾವ ಭಾಷೆ ಆ ಭಾಷಿಕನಿಗೆ ಅನ್ನ ಗಳಿಸಿಕೊಡುವ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತದೆಯೇ ಆ ಭಾಷೆ ಸಾಲಿನಂಚಿಗೆ ಸಾಗುತ್ತಿದೆಯೆಂದೇ ಅರ್ಥೈಸಬೇಕು. ನಾನು ಖಚಿತಪಡಿಸಲು ಹೊರಟಿರುವ ವಿಷಯವೆಂದರೆ ಕನ್ನಡ ಭಾಷೆಯನ್ನು ಒಂದು 'ಜೀವಂತ ಶಾಸ್ತ್ರೀಯ ಭಾಷೆ' ಎಂದು ಒಪ್ಪುವುದು ಸೂಕ್ತ? ಹಾಗೆ ಒಪ್ಪುವುದಾದರೆ ಅದು ಪ್ರಾಚೀನ ಕಾಲದಿಂದ ಇಂದಿನ ಈ ಪ್ರಸ್ತುತ ಸಂದರ್ಭದಲ್ಲೂ, ಮುಂದೂ ಸಹ ಸಮರ್ಥವಾಗಿ ಜನಸಮುದಾಯದಲ್ಲಿ ಉಳಿತಾಯ ಕೆಲವು ಯೋಜನೆಗಳನ್ನು ಹಾಕಿಕೊಳ್ಳಬೇಕಾಗುತ್ತದೆ. ಹಾಗಾಗದಿದ್ದರೆ ಅದು ಕೆಲವೇ ವರ್ಷಗಳಲ್ಲಿ 'ಮೃತ ಶಾಸ್ತ್ರೀಯ ಭಾಷೆ'ಯಾಗಿ ಮಾರ್ಪಡುತ್ತದೆ.

ಜೀವಂತ ಶಾಸ್ತ್ರೀಯ ಭಾಷೆಯನ್ನು ಅಭಿವೃದ್ಧಿಪಡಿಸಲು ಹಾರಿಕೊಳ್ಳಬಹುದಾದ ಯೋಜನೆಗಳನ್ನು ನಾನು ಈ ರೀತಿ ಪಟ್ಟಿ ಮಾಡಬಹುದು ಎಂದುಕೊಂಡಿದ್ದೇನೆ. ಆದರೆ ಇದೇ ಅಂತಿಮವಲ್ಲ, ನನ್ನ ತಿಳಿವಳಿಕೆಯ ಈ ಕ್ಷಣದವರೆಗಿನ ಆಲೋಚನೆಗಳು ಮಾತ್ರ ಇದಾಗಿದೆ. ಅದು ವಿಸ್ತರಿಸಲು ಎಲ್ಲಾ ರೀತಿಯ ಸಾಧ್ಯತೆಗೂ ಅವಕಾಶವಿದೆ.

೧. ಮೊದಲು ಕೇಂದ್ರ ಸರ್ಕಾರ ಸೌಲಭ್ಯಗಳನ್ನು ಪಡೆಯಲು ಒಂದು ಉನ್ನತ ಅಧ್ಯಯನ ಸಂಸ್ಥೆ ಸ್ಥಾಪಿತವಾಗಬೇಕು. ಕೆಲ ವಿದ್ವಾಂಸರು ಈಗಾಗಲೇ 'ಕನ್ನಡ ಅಧ್ಯಯನ' 'ಕರ್ನಾಟಕ ಅಧ್ಯಯನ' ಎನ್ನುವ ಹೆಸರುಗಳನ್ನು ಪ್ರಸ್ತಾಪ ಮಾಡುತ್ತಿದ್ದಾರೆ. ತಮಿಳು ನಾಡಿನಲ್ಲಿ ಈಗಾಗಲೇ 'ತಮಿಳು ಭಾಷಾ ಸಂಶೋಧನಾ ಕೇಂದ್ರ' (ಸಿಇಸಿಟಿ) ಎಂಬುದು ಅಸ್ತಿತ್ವಕ್ಕೆ ಬಂದು ಕಾರ್ಯಾರಂಭ ಮಾಡಿದೆ. ಹಾಗೆಯೇ ಕರ್ನಾಟಕದಲ್ಲಿಯೂ ಅಂಥದೊಂದು ಸಂಸ್ಥೆ ಶೀಘ್ರವಾಗಿ ಅಸ್ತಿತ್ವಕ್ಕೆ ಬರಬೇಕು. ಅಂದರೆ ನನ್ನ ಅಭಿಪ್ರಾಯವೆಂದರೆ 'ಕರ್ನಾಟಕ ಸಂಸ್ಕೃತಿ ಅಧ್ಯಯನ ಸಂಸ್ಥೆ' ಅಥವಾ

'ಕರ್ನಾಟಕ ಸಂಸ್ಕೃತಿ ಅಧ್ಯಯನ ಕೇಂದ್ರ' ಎಂಬುದು ಅಸ್ತಿತ್ವಕ್ಕೆ ಬರಬೇಕು. ಅದರ ಅಡಿಯಲ್ಲಿ 'ಕನ್ನಡ ಭಾಷೆ, ಕರ್ನಾಟಕದ ಪ್ರಾಚೀನತೆ, ಧರ್ಮ, ರಾಜಕಾರಣ, ಸಾಮಾಜಿಕ ಜನಜೀವನ, ಭೌಗೋಳಿಕ ಲಕ್ಷಣಗಳು, ನದಿ, ಪರಿಸರ, ಮುಂತಾದ ಎಲ್ಲವನ್ನು ಅಧ್ಯಯನ ಮಾಡಲು ಅವಕಾಶವಿರಬೇಕು" ಇದು ಕರ್ನಾಟಕ ವಿಶ್ವವಿದ್ಯಾಲಯಗಳ ಕನ್ನಡ ಅಧ್ಯಯನ ಕೇಂದ್ರಗಳು, ಸಂಶೋಧನಾ ಕೇಂದ್ರಗಳು, ಅಕಾಡೆಮಿಗಳು ಇವೆಲ್ಲಕ್ಕಿಂತ ಭಿನ್ನವಾಗಿರಬೇಕು.

೨. ಕನ್ನಡ ಭಾಷೆಯ, ಕರ್ನಾಟಕದ ಪ್ರಾಚೀನತೆಯನ್ನು ಹೇಳುವ 'ಕನ್ನಡದ ಹಳಮೆ, ಗರಿಮೆ, ಅಂತಃಸತ್ವ ಅಸ್ಮಿತೆಗಳನ್ನು ಪ್ರತಿನಿಧಿಸುವ ಕೃತಿಗಳ ಮರು ಮುದ್ರಣ ಆಗಬೇಕು. ಹಾಗೆಯೇ ಇನ್ನೂ ಪ್ರಕಟವಾಗದಿರುವ ಅಸಂಖ್ಯಾತ ಪ್ರಾಚೀನ ತಾಳೆಗರಿಗಳನ್ನು, ಕಾವ್ಯಗಳನ್ನು ಶಾಸನಗಳನ್ನು ಪ್ರಕಟಿಸುವ ಕಾರ್ಯ ಆಗಬೇಕು. ಕರ್ನಾಟಕ ಹಾಗೂ ಕರ್ನಾಟಕದ ಹೊರಗೆ ಹಸ್ತಪ್ರತಿಗಳ ಸಂಗ್ರಹ ಆಗಬೇಕು. ಏಕೆಂದರೆ ಕವಿರಾಜ ಮಾರ್ಗಕಾರನು ಹೇಳು ಕರ್ನಾಟದ ನಕ್ಷೆಯನ್ನು ಇಟ್ಟುಕೊಂಡರೆ ಈಗಿನ ಕರ್ನಾಟಕಕ್ಕಿಂತ ಹಿಂದಿನ ಕರ್ನಾಟಕದಲ್ಲಿ ಅವನು ಹೇಳಿರುವ ಕೃತಿಗಳು ಹಂಚಿಹೋಗಿರಬಹುದು. ಆ ಹಿನ್ನೆಲೆಯಲ್ಲಿ ಕವಿರಾಜಮಾರ್ಗ ಕೃತಿಯ ಮರುಓದು ಆಗಬೇಕಾಗಿದೆ.

೩. ವಿದ್ವಾಂಸರನ್ನು ಯುವ ಸಂಶೋಧಕರನ್ನು ಈ ಕ್ಷೇತ್ರದಲ್ಲಿ ತೊಡಗಿಸಿಕೊಳ್ಳುವ ಸಲುವಾಗಿ ಡಿಪ್ಲೊಮೋ ಅಥವಾ ಈ ರೀತಿಯ ಹೊಸ ಕೋರ್ಸ್‌ಗಳನ್ನು ಪ್ರಾರಂಭಿಸಬೇಕು. ಪ್ರೌಢ ಮತ್ತು ಉನ್ನತ ಶಿಕ್ಷಣದ ಪಠ್ಯಕ್ರಮದಲ್ಲಿ ಶಾಸ್ತ್ರೀಯ ಭಾಷಾ ಕೃತಿಗಳನ್ನು ಅಳವಡಿಸಿಕೊಳ್ಳಬೇಕಾಗಿದೆ. ಹಾಗೆಯೇ ಪದವಿಗಾಗಿ, ಭಡ್ತಿಗಾಗಿ ಸಂಶೋಧನೆ ಎಂಬುದನ್ನು ತಪ್ಪಿಸಿ ಸಂಶೋಧನೆಗಾಗಿ ಪದವಿ, ಭಡ್ತಿ ಎಂಬುದನ್ನು ರೂಪಿಸಬೇಕು. ವೃತ್ತಿ ಸಂಶೋಧಕರೂ, ಹವ್ಯಾಸಿ ಸಂಶೋಧಕರೂ, ಪ್ರವಾಸಿ ಸಂಶೋಧಕರೂ, ನಿವಾಸಿ ಸಂಶೋಧಕರೂ ಎಲ್ಲರೂ ಇದರಲ್ಲಿ ಪಾಲ್ಗೊಳ್ಳುವಂತೆ ಮಾಡಬೇಕು.

೪. ಕವಿರಾಜಮಾರ್ಗಕಾರ ಹೇಳುವ ಹಲವು ಕನ್ನಡರಿಗಳ್ ಹಾಗೂ ಕನ್ನಡ ಉಪಭಾಷೆಗಳ ವೈಶಿಷ್ಟ್ಯಗಳನ್ನು ಅಲ್ಲಿನ ಪದಸಂಪತ್ತನ್ನು ದಾಖಲಿಸಬೇಕು, ಪ್ರಾದೇಶಿಕ ಉಪಭಾಷೆಗಳ ನಿಘಂಟುಗಳು, ಪದಕೋಶಗಳು ರಚನೆಯಾಗಬೇಕಾಗಿದೆ.

೫. ರಾಜ್ಯದ ಗಡಿಭಾಗಗಳಲ್ಲಿ ಕನ್ನಡ ಭಾಷಾಭಿವೃದ್ಧಿಗೆ ವಿಶೇಷ ಯೋಜನೆಗಳನ್ನು ಹಾಕಿಕೊಳ್ಳಬೇಕಾಗಿದೆ. ಕರ್ನಾಟಕವನ್ನು ಆಳಿದ ಅರಸರು ದಕ್ಷಿಣಕ್ಕಿಂತ ಉತ್ತರಕ್ಕೆ ಹೋದದ್ದೇ ಹೆಚ್ಚು. ಉತ್ತರದಲ್ಲಿ ವಿಜಯನಗರದ ಅರಸರು ಒರಿಸ್ಸಾದವರೆಗೆ ಚಾಲುಕ್ಯರು ಮುಂಬೈವರೆಗೆ ಹೀಗೆ ಕರ್ನಾಟಕದ ಹೊರಗೂ ಆಳ್ವಿಕೆ ಅಥವಾ ಆಡಳಿತದ ಹೊರಚಾಚುಗಳ ಬಹಳ ಮುಖ್ಯವಾದವುಗಳು. ಮಹಾರಾಷ್ಟ್ರದ ಅನೇಕ ಊರುಗಳು, ಆಂಧ್ರದ ಅನೇಕ ಹಳ್ಳಿಗಳು, ಕೇರಳದ ಕೆಲವು ಪ್ರದೇಶಗಳು ಕನ್ನಡದವೇ ಆಗಿವೆ. ಪೇಶ್ವೆಗಳು ಕರ್ನಾಟಕಕ್ಕೆ ಬಂದರು ಅನೇಕರು ಇಲ್ಲಿಯೇ ಉಳಿದುಕೊಂಡರು ಹೀಗೆ ಕೊಡುಕೊಳ್ಳುವಿಕೆಯಿಂದ ಅನೇಕ ವೈಶಿಷ್ಟ್ಯತೆಗಳು ಉಳಿದುಕೊಂಡಿವೆ. ಇಂಥ ವಿಷಯಗಳ ಸಂಶೋಧನೆ ಆಗಬೇಕಿದೆ.

ನಮ್ಮ ಭಾಷೆ, ಸಂಸ್ಕೃತಿ, ಇತಿಹಾಸ, ಪರಂಪರೆಗಳನ್ನು ಧರ್ಮ, ರಾಜಕಾರಣ ಇತ್ಯಾದಿ ವೈಶಿಷ್ಟ್ಯಗಳು ಬೇರೆ ಭಾಷೆಗಳಿಗಿಂತ ಹೇಗೆ ಭಿನ್ನ, ಅವುಗಳನ್ನು ಹೇಗೆ ಔನ್ನತ್ಯಕ್ಕೆ ಒಯ್ಯಬೇಕು ಎನ್ನುವ ಕಡೆ ನಮ್ಮ ವಿದ್ವಾಂಸರು ಪ್ರಯತ್ನಿಸುವಂತೆ ಪ್ರೋತ್ಸಾಹಿಸುವ ಕೆಲಸ ಆಗಬೇಕಿದೆ.

ಅಂದರೆ ನಮ್ಮಲ್ಲಿರುವ, ನಾವು ಹೇಳುತ್ತಿರುವ ಕನ್ನಡ ಪ್ರಾಚೀನತೆಯ ಪುರಾವೆಗಳನ್ನು ಕ್ರಮ ಬದ್ಧ ಅಧ್ಯಯನಕ್ಕೆ ಒಳಪಡಿಸಬೇಕು.

೭. ನಮ್ಮಲ್ಲಿರುವ ಹಸ್ತಪ್ರತಿಗಳು, ತಾಳೆಗರಿ, ಓಲೆಗರಿ, ಸಿಕ್ಕಿರುವ ಪ್ರಾಚೀನ ಶಾಸನಗಳನ್ನು ಚಾರಿತ್ರಿಕ ಅಧ್ಯಯನಕ್ಕೆ ಒಳಪಡಿಸಬೇಕು. ಅಂದರೆ ಕಾವ್ಯ, ಶಾಸ್ತ್ರ, ಧರ್ಮ, ವ್ಯಾಕರಣ, ಸಂಕಲನ, ಲಕ್ಷಣ ಕೃತಿಗಳು, ಕಲೆ, ವಾಸ್ತುಶಿಲ್ಪಿ, ವೈದ್ಯಶಾಸ್ತ್ರ, ವಿಜ್ಞಾನ, ಜಲಶಾಸ್ತ್ರ, ಖಗೋಳಶಾಸ್ತ್ರ, ಭೂಗರ್ಭಶಾಸ್ತ್ರ, ಪ್ರಾಣಿಶಾಸ್ತ್ರ, ವ್ಯಾಕರಣ ಇಂಥವೇ ನೂರಾರು ವೈವಿಧ್ಯಮಯ ದೃಷ್ಟಿಕೋನಗಳನ್ನು ಹೊಂದಿರುವ ನಮ್ಮ ಸಂಸ್ಕೃತಿಯನ್ನ, ಸಂಪದ್ಭರಿತ ಕೃತಿಗಳನ್ನು ಶಾಸ್ತ್ರಬದ್ಧವಾಗಿ 'ಮರು ಓದಿಗೆ' ಒಳಪಡಿಸುವ ನಿಟ್ಟಿನಲ್ಲಿ ಕೆಲಸ ಆಗಬೇಕಾಗಿದೆ. ಉದಾ: ವಾಸ್ತುಶಿಲ್ಪದ ವಿಚಾರವಾಗಿ ಹೇಳುವುದಾದರೆ "ದೇವಾಲಯದ ವಾಸ್ತುಶಿಲ್ಪ" ತಮಿಳು ನಾಡಿನಲ್ಲಿ ಪಾವಿತ್ರ್ಯತೆಯಿಂದ ಕೂಡಿದೆ ಅಂದರೆ 'ದ್ರಾವಿಡ' ಶೈಲಿ ಎಂಬುದನ್ನು ತಮಿಳು ಹಾಗೆಯೇ ಕಾಪಾಡಿಕೊಂಡು ಬಂದಿದೆ. ಕನ್ನಡದಲ್ಲಿ ಇದು ಸಾಧ್ಯವಾಗಿಲ್ಲ ಕಾರಣ ಕನ್ನಡ-ಪರ್ಷಿಯನ್ ಇತ್ಯಾದಿಗಳ ಸಂಪರ್ಕದಿಂದ ಪಾವಿತ್ರತೆ ಸಾಧ್ಯವಾಗಿಲ್ಲ. ತಮಿಳು ಉದ್ದೇಶ ಪೂರ್ವಕವಾಗಿಯೇ ತಿರಸ್ಕರಿಸಿದೆ.

೮. ಕರ್ನಾಟಕದ ಪ್ರಾಚೀನತೆಯ ಜೊತೆಗೆ ಕರ್ನಾಟಕದ ತಾತ್ವಿಕ ನೆಲೆಗಳು ಯಾವುವು? ಎಂಬುದರ ಸಂಶೋಧನೆಯೂ ಈಗ ಆಗಬೇಕಾಗಿದೆ. ಇಲ್ಲಿ ಹುಟ್ಟಿ ಬೆಳೆದಂತಹ ಬೌದ್ಧ, ಜೈನ, ಶೈವ ಸಿದ್ಧಾಂತಗಳು ಅವುಗಳ ಸ್ವರೂಪ, ಪ್ರಸಾರ ಕುರಿತ ಸಂಶೋಧನೆ ಆಗಬೇಕಾಗಿದೆ. ಕಾಳಾಮುಖ ಪಂಥಕ್ಕೆ ಆಂಧ್ರದ ಶ್ರೀಶೈಲ ಕೇಂದ್ರವಾಗಿದೆ. ಕಾಶ್ಮೀರದ ಈ ಪಂಥದ ಕುರುಹುಗಳು ಬಳ್ಳಿಗಾವೆಯಲ್ಲೂ ಲಭ್ಯ. ಬೌದ್ಧರಲ್ಲಿ ಯಾವ ಪಂಥಗಳಿದ್ದವು ಜೈನರಲ್ಲಿ ಯಾವ ಪಂಥಗಳಿದ್ದವು. ಅವುಗಳ ಸ್ಥಳೀಯ ನೆಲೆಗಳಾವುವು ಹೀಗೆ ಅನೇಕ ವಿಷಯಗಳ ಸೂಕ್ಷ್ಮ ಸಂಶೋಧನೆ ಆಗಬೇಕಿದೆ.

೯. ಪ್ರಾಚೀನ ಕನ್ನಡ ಭಾಷಾ ಕೃತಿಗಳನ್ನು ಅನ್ಯಸೂದರ ದ್ರಾವಿಡ ಭಾಷೆಗಳಿಗೆ ಅನುವಾದಿಸುವ ಕೆಲಸ ಆಗಬೇಕಿದೆ. ಕನ್ನಡ-ತಮಿಳು, ಕನ್ನಡ-ತೆಲುಗು, ಕನ್ನಡ-ಮಲೆಯಾಳ ಭಾಷೆಗಳಿಗೆ ಅನುವಾದಿಸುವುದರಿಂದ ಅವುಗಳ ಸಂಬಂಧ, ವೈಶಿಷ್ಟ್ಯತೆ, ಭಿನ್ನತೆ, ಕಾರಣಗಳು ಗೋಚರಿಸುತ್ತವೆ. ಇದರ ಜೊತೆಗೆ ಅವುಗಳನ್ನು ಸರಿಯಾಗಿ ಪರಿಣಾಮಕಾರಿಯಾಗಿ ಅನುವಾದ ಮಾಡಿಸಬೇಕು. ಹಳಗನ್ನಡ-ಪೂರ್ವದ ಹಳಗನ್ನಡ, ನಡುಗನ್ನಡ, ಹೊಸಗನ್ನಡ ಕೃತಿಗಳು ಅನುವಾದವಾಗಬೇಕು. ಇದಕ್ಕಾಗಿ ಶಾಸ್ತ್ರೀಯ ಕನ್ನಡದ ವ್ಯಾಕರಣ ರಚನೆಯಾಗಬೇಕಾಗಿದೆ. ಇವತ್ತಿನ ಕನ್ನಡದ ಮಾರ್ಪಾಡುಗಳನ್ನು ಅರ್ಥಮಾಡಿಕೊಳ್ಳಲು ಅವು ಸಹಾಯಕ್ಕೆ ಬರುತ್ತವೆ.

೧೦. ಕರ್ನಾಟಕದ ಬುಡಕಟ್ಟು ಭಾಷೆಗಳ ವೈಶಿಷ್ಟ್ಯತೆ ಬಗ್ಗೆ ಸಂಶೋಧನೆ ಆಗಬೇಕಿದೆ. ಆ ಪದಗಳ ನಿಘಂಟು, ಅರ್ಥಕೋಶಗಳು ಸಿದ್ಧಗೊಳ್ಳಬೇಕಿದೆ. ಆ ಭಾಷೆಯ ಮಾದರಿ ಕುರಿತು ಯೋಚಿಸಬೇಕಾಗಿದೆ.

ಉದಾ: ಈಗಲೂ ಸೋಲಿಗರು ಶಕದರೇಫ 'ಱ' ಕಾರವನ್ನು ಬಳಸುತ್ತಿರುವುದು ಕಂಡುಬರುತ್ತದೆ. ಬೆಟ್ಟಕುರುಬರು ಕನ್ನಡದ ಹಳಗನ್ನಡ ರೂಪವನ್ನು ಬಳಸುತ್ತಿದ್ದಾರೆ.

೧೧. ಕನ್ನಡ-ತಮಿಳು, ಕನ್ನಡ ಪ್ರಾಕೃತ, ಕನ್ನಡ-ಸಂಸ್ಕೃತ ಅಧ್ಯಯನಗಳು ನಡೆಯಬೇಕಿದೆ. ಇದು ಕೇವಲ ಭಾಷಿಕವಾಗಿಯಲ್ಲದೆ ಸಾಂಸ್ಕೃತಿಕವಾಗಿಯೂ ಆಗಬೇಕು. ಹಾಗೆಯೇ ಕನ್ನಡ ಭಾಷೆಯನ್ನು ಕುರಿತು ಅದು ಇತರೆ ದ್ರಾವಿಡ ಭಾಷೆಗಳೊಂದಿಗೆ ಹೊಂದಿರುವ ಸಂಬಂಧವನ್ನು ತೌಲನಿಕವಾಗಿ ಅಭ್ಯಾಸ ಮಾಡುವ ಅಣತ್ಯವಿದೆ.

೧೨. ಕನ್ನಡದ ಪ್ರಾಚೀನತೆಯನ್ನು ಅಂತರ್‌ಶಾಸ್ತ್ರೀಯ ಅಧ್ಯಯನಕ್ಕೆ ಒಳಪಡಿಸಬೇಕಾಗಿದೆ.

೧೩. ಕನ್ನಡ ವ್ಯಾಕರಣದ ಬಗ್ಗೆ ಅಧ್ಯಯನ ನಡೆದಿದ್ದರೂ ಅದರ ಚಾರಿತ್ರಿಕ ಅಧ್ಯಯನ ಕ್ರಮಬದ್ಧವಾಗಿ ಆಗಿಲ್ಲ. ಆ ನಿಟ್ಟಿನಲ್ಲಿ ಯೋಚಿಸುವ ಕೆಲಸ ಆಗಬೇಕಿದೆ.

೧೪. ಶಾಸ್ತ್ರೀಯ ಸ್ಥಾನಮಾನ ಪಡೆಯಲು ನಾವು ಕೊಡುತ್ತಿರುವ ಪುರಾವೆಗಳನ್ನು ಅಥವಾ ಕನ್ನಡ ಭಾಷೆಯನ್ನು ಕುರಿತ ದೃಶ್ಯದಾಖಲೆಗಳನ್ನು ಸಂಗ್ರಹಿಸುವ ಕೆಲಸ ಆಗಬೇಕಿದೆ.

ಉದಾ: ಕನ್ನಡ ವ್ಯಾಕರಣ, ಸಾಹಿತ್ಯ, ಶಾಸನ, ಕಲೆ, ನಾಣ್ಯ, ವಾಸ್ತು, ಶಿಲ್ಪಿ, ವಿಜ್ಞಾನ ತಂತ್ರಜ್ಞಾನ ಇತ್ಯಾದಿ.

೧೫. ಹಳಗನ್ನಡ, ಶಾಸನಗಳು, ತಾಳೆಗರಿ, ಹಸ್ತಪ್ರತಿಗಳನ್ನು ಓದುವ ಅರ್ಥೈಸುವ ಅವಕಾಶಗಳನ್ನು ಮಾರ್ಗೋಪಾಯಗಳನ್ನು, ಹೊಸ ಸಾಧ್ಯತೆಗಳನ್ನು ಇಂದಿನ ಯುವಕರಿಗೆ ಹೆಚ್ಚು ಹೆಚ್ಚು ಒದಗಿಸಬೇಕು. ಅಥವಾ ಸೃಷ್ಟಿ ಮಾಡಬೇಕು. ಇಲ್ಲದಿದ್ದರೆ ಕೆಲವೇ ದಿನಗಳಲ್ಲಿ ಅದು ನಮ್ಮ ಮುಂದಿನ ಪೀಳಿಗೆಗೆ ದಕ್ಕದೆ ಹೋಗುವ ಆತಂಕವಿದೆ.

ಉದಾ: ಯುವಕರಿಗಾಗಿ, ಆಸಕ್ತರಿಗಾಗಿ ಶಿಲ್ಪಿಕ, ಕಮ್ಮಟ ವಿಚಾರ ಸಂಕಿರಣಗಳನ್ನು ಏರ್ಪಡಿಸಬೇಕು. ಡಿಪ್ಲಮೋ ಸರ್ಟಿಫಿಕೇಟ್‌ಕೋರ್ಸ್‌ಗಳನ್ನು ಪ್ರಾರಂಭಿಸಬೇಕು. ಅವರಿಗೆ ಬೇಕಾದ ಆರ್ಥಿಕ ಸಹಾಯವನ್ನು ಒದಗಿಸಬೇಕು. ಈ ಕೆಲಸವಾದರೆ ಕಾರ್ಯ ಸುಗಮವಾಗುತ್ತದೆ.

೧೬. ನಮ್ಮ ಭಾಷೆ, ನಡೆನುಡಿ, ಅದರ ಸೊಗಡು, ವೈಶಿಷ್ಟ್ಯ, ಮೌಲ್ಯಗಳು, ಸೌಂದರ್ಯ, ಇತಿಹಾಸ ಪರಂಪರೆಯ ಬಗ್ಗೆ ಇರುವ ಮಾಹಿತಿಗಳು ಕೇವಲ ಸರ್ಕಾರಿ ಕಡತಗಳಲ್ಲಿ ಇದ್ದರೆ ಸಾಲದು. ಜನರ ನಾಲಗೆಯ ತುದಿಯಲ್ಲಿ, ಹೃದಯದಲ್ಲಿ ಇರುವಂತೆ ನೋಡಿಕೊಳ್ಳಬೇಕು. ನಮ್ಮ ಶಾಲಾ ಕಾಲೇಜುಗಳ ಪಠ್ಯಗಳನ್ನು ಆ ರೀತಿ ಸಿದ್ಧಪಡಿಸಬೇಕು.

೧೭. ಬಹಳ ಮುಖ್ಯವಾಗಿ ಆಗಬೇಕಾದ ಮತ್ತೊಂದು ಕೆಲಸವೆಂದರೆ ಇತ್ತೀಚೆಗೆ ನಗರ ಪ್ರದೇಶಗಳಲ್ಲಿ ಅನ್ನದ ಸಮಸ್ಯೆ ಮುಂದಿಟ್ಟುಕೊಂಡು ಅಥವಾ ಹಣದ ಸಮಸ್ಯೆ ಮುಂದಿಟ್ಟುಕೊಂಡು ಕನ್ನಡ ಕಲಿಯುವವರ ಸಂಖ್ಯೆ ತೀರಾ ಕಡಿಮೆಯಾಗುತ್ತಿದೆ. ಅದಕ್ಕಾಗಿ ಅನ್ನ ದುಡಿಯುವ ಸಾಮರ್ಥ್ಯವನ್ನು ಭಾಷೆಗೆ ತಂದು ಕೊಡುವ ಕಾಯಕ ನಡೆಯಬೇಕಾಗಿದೆ. ಆದ್ದರಿಂದ ಮೆಡಿಕಲ್, ಇಂಜಿನಿಯರಿಂಗ್, ವಿಜ್ಞಾನ, ತಂತ್ರಜ್ಞಾನ ಇತ್ಯಾದಿ ವೃತ್ತಿಶಿಕ್ಷಣವನ್ನು ಕನ್ನಡ ಮಾಧ್ಯಮದಲ್ಲಿ ಹೇಳುವಂತಾಗಬೇಕು. ಅದಕ್ಕಾಗಿ ಕನ್ನಡದ 'ಪದಸಂಪತ್ತನ್ನ' ಸಿದ್ಧಗೊಳಿಸುವ ಕೆಲಸ ಆಗಬೇಕು.

೧೮. ಶಾಸನಗಳ ರಕ್ಷಣೆ, ಪುನರ್ ಅಧ್ಯಯನ, ಶಾಸನ ಪದಕೋಶ, ಪುರಾತನ ಶಿಕ್ಷಣ, ಆಡಳಿತ ಪದ್ಧತಿಗಳು, ಪ್ರಾಚೀನ ಕ್ರೀಡೆ, ಕಲೆ, ಆಹಾರ ಪಾನೀಯಗಳು, ಆಚರಣೆಗಳು, ಪ್ರಾಚೀನ ಅರ್ಥವ್ಯವಸ್ಥೆ ಪ್ರಾಚೀನ ನ್ಯಾಯಪದ್ಧತಿಗಳು, ಕೃಷಿ ವ್ಯವಸ್ಥೆ, ಆತ್ಮಬಲಿ ಪ್ರಕಾರಗಳು, ಶಾಸನಗಳ ಭಾಷಿಕ ಅಧ್ಯಯನ ನಾಣ್ಯಸಂಪತ್ತು ಅಳತೆ, ಮಾನ, ವಸ್ತು ಬೇದದ ಶಾಸನ ಸಂಪುಟಗಳು, ದೇವಾಲಯಗಳ ಅಧ್ಯಯನ ತೆರಿಗೆ ಪದ್ಧತಿಗಳು ಕೆರೆ–ನೀರಾವರಿ ಮುಂತಾದ ವಿಷಯಗಳ ಬಗ್ಗೆ ಅಧ್ಯಯನ ನಡೆಯಬೇಕಿದೆ.

೧೯. ಕರ್ನಾಟಕ ಕವಿಚರಿತೆಯಲ್ಲಿ ಉಲ್ಲೇಖವಾಗಿರುವ ಅನೇಕ ಕವಿಗಳ ಸಂಗತಿಗಳ ಬಗ್ಗೆ ಸಂಶೋಧನೆ ನಡೆದಿಲ್ಲ, ಕವಿರಾಜಮಾರ್ಗಕಾರನು ಹೇಳುವ ಅನೇಕ ಕವಿಗಳ ರಚನೆಗಳನ್ನೂ ಶೋಧಿಸುವ ಕಾರ್ಯ ಆಗಬೇಕಿದೆ.

೨೦. ಪ್ರಾಚೀನ ಕರ್ನಾಟಕದ ಸಾಮಾನ್ಯ ಮನುಷ್ಯನ ಜೀವನ ಚಿತ್ರಣಗಳ ಶೋಧ ನಡೆಯಬೇಕಿದೆ. ಲೋಹಕರ್ಮ, ಕುಂಬಾರಿಕೆ, ಗೃಹಕೈಗಾರಿಕೆ, ಚಮ್ಮಾರಿಕೆ, ನೇಕಾರಿಕೆ, ಉತ್ಪಾರಿಕೆ, ಪಶುಪಾಲನಕಾರಿಕೆ ಕುಲಕಸುಬುಗಳ ಅಧ್ಯಯನವೂ ಆಗಬೇಕಿದೆ.

ಹೀಗೆ ಪಟ್ಟಿ ಮಾಡುತ್ತಾ ಹೋದರೆ ಅದಕ್ಕೆ ಕೊನೆ ಇರುವುದಿಲ್ಲ ಹಾಗಾಗಿ ಈ ಯೋಜನೆಗಳು ಪೂರ್ಣ ಪ್ರಮಾಣದಲ್ಲಿ ಅನುಷ್ಠಾನವಾಗಬೇಕಾದರೆ ರಾಷ್ಟ್ರಮಟ್ಟದಲ್ಲಿ ನಿರ್ಮಾಣವಾಗುವ 'ಕರ್ನಾಟಕ ಸಂಸ್ಕೃತಿ ಅಧ್ಯಯನ ಸಂಸ್ಥೆ'ಗೆ ಪೂರ್ಣ ಪ್ರಮಾಣದ ಅನುದಾನವನ್ನೂ ಹಾಗೂ ವಿದ್ವಾಂಸರ ಅವಶ್ಯಕತೆಯೂ ಇದೆ. ಇವೆಲ್ಲವನ್ನು ಸರಿದೂಗಿಸಿಕೊಂಡಾಗ ಮಾತ್ರ ನಮ್ಮ ಈ ಯೋಜನೆಗಳು ಕಾರ್ಯರೂಪಕ್ಕೆ ಬರುತ್ತವೆ.

ಹೀಗಾಗಿ ಇನ್ನೂ ಹತ್ತು ಹಲವು ಯೋಜನೆಗಳು ವಿದ್ವಾಂಸರ ಚರ್ಚೆಗಳಿಂದ ಅಂತಿಮಗೊಳಿಸಿಕೊಂಡು ಕಾರ್ಯರೂಪಕ್ಕೆ ತರುವ ಕೆಲಸ ಆಗಬೇಕಿದೆ. ಇಲ್ಲಿ ಯುವ ವಿದ್ವಾಂಸರ ಅವಶ್ಯಕತೆ ಬಹಳಷ್ಟಿದೆ. ಅವರನ್ನು ತರಬೇತುಗೊಳಿಸುವ ಜವಾಬ್ದಾರಿಯೂ ಈ ಉನ್ನತ ಅಧ್ಯಯನ ಕೇಂದ್ರದ ಮೇಲಿದೆ.*



HO?-04-2008 11:20 From: To:22258?13

D AR / / COMP / 200
Dated

ಸರ್ಕಾರದ ಕಾರ್ಯದರ್ಶಿಯವರ
ಆಪ್ತ ಶಾಖೆ ಸಿ.ಆ.ಸು. ಇಲಾಖೆ
ಸಂಖ್ಯೆ 74965
07·11·08

**TO BE PUBLISHED IN PART –I SECTION I OF THE GAZETTE OF INDIA**

No. 2-16/2004-Akademies
Government of India/ Bharat Sarkar
Ministry of Culture/Sanskriti Mantralaya

Shastri Bhawan, New Delhi-110115
Dated 31st October, 2008

## NOTIFICATION

Government of India created a new category of languages as 'Classical Languages' vide Notification No. IV-14014/7/2004-NI-II dated 12th October, 2004 read with the Corrigendum Notification of even number dated 29th October, 2004 and Notification of even number dated 25th November, 2005 and fulfiling the following criteria to determine the eligibility of languages to be considered for classification as a 'Classical Language': -

(i) High antiquity of its early texts/recorded history over a period of 1500 2000 years.

(ii) A body of ancient literature/ texts, which is considered a valuable heritage by generations of speakers.

(iii) The literary tradition be original and not borrowed from another speech community.

(iv) The classical language and literature being distinct from modern, there may also be a discontinuity between the classical language and its later forms or its offshoots

2. It is hereby notified that the 'Telugu Language' and the 'Kannada Language satisfy the above criteria and will henceforth be classified as 'Classical Languages'

3. This Notification is subject to the decision in Writ Petition No. 18810 of 2008 in the High Court of Judicature at Madras.

(V.T. Joseph)
Under Secretary to the Government of India
Tel. No. 2338 9379

To

The Maneger.
Government of India Press,
Faridabad.

Dated the 31st October, 2008

No. 2-16/2004-Akademies

Copy to :-

1. Prime Minister's Office, South Block, New Delhi.
2. Cabinet Secretariat, Rashtrapati Bhawan, New Delhi.
3. Ministry of Home Affairs, Government of India, New Delhi.
4. Ministry of Human Resource Development (Department of Secondary & Higher Education), Shastri Bhawan, New Delhi.
5. The Chief Secretaries of all the States/Union Territories.

C.NO-6439/KC/04
3/11

TO BE PUBLISHED IN PART-I SECTION 1 OF THE GAZETTE OF INDIA

No.IV-14014/7/2004-NI-II
Government of India/Bharat Sarkar
Ministry of Home Affairs/Grih Mantralaya
........

Jaisalmer House, Mansingh Road,
New Delhi-110011 dated 12th October, 2004

## NOTIFICATION

It has been decided by the Government of India to create a new category of languages as 'Classical Languages'.

2. The following criteria will be used to determine the eligibility of languages to be considered for classification as a 'Classical Language' :-

(i) High antiquity of its early texts/recorded history over a thousand years.

(ii) A body of ancient literature/texts, which is considered a valuable heritage by generations of speakers.

(iii) The literary tradition be original and not borrowed from another speech community.

3. It is also notified that the 'Tamil Language' satisfies the criteria listed at para 2 above and would henceforth be classified as a 'Classical Language'.

.....2..

Whereas the Government of India have further decided that the following benefits shall be available to the languages declared or notified as classical languages: -

i) Two major international awards for scholars of eminence in Classical Indian languages are awarded annually.

ii) A 'CENTRE OF EXCELLENCE FOR STUDIES IN CLASSICAL LANGUAGES' is set up.

iii) The University Grants Commission be requested to create, to start with at least in the Central Universities, a certain number of Professional Chairs for Classical Languages for scholars of eminence in Classical Indian languages. .

(K. JAYAKUMAR)
JOINT SECRETARY TO THE GOVERNMENT OF India

ORDER

Ordered that a copy of the Resolution be published in the Official Gazette.

(K. JAYAKUMAR)
JOINT SECRETARY TO THE GOVERNMENT OF India

Manager
Government of India Press (Bharat Sarkar Press)
Mayapuri,
Ring Road,
New Delhi

Copy to:-

1. All Sections of the Ministry of Culture.
2. All attached/subordinate Offices/autonomous organisations of the Ministry of Culture.
3. All members of the Linguistic Expert Committee.
4. Ministry of Home Affairs, (Attn. Shri Jag Ram, Deputy Secretary). N.I. Wing, H.R. Division, Jaisalmer House, New Delhi-11.
5. Ministry of H.R.D., Department of S.E.&H.E. (Attn Smt. Bela Banerjee, Joint Secretary. )
6. All Ministries/Department of India
7. Chief Secretaries of all State/Union Territories.
8. D.P.I.O. Ministry of Culture, New Delhi (10 copies).

(M.A. Muraleedharan)
Under Secretary to the Government of India

TO BE PUBLISHED IN THE GAZETTE OF INDIA
EXTRAORDINARY
PART – 1 SECTION – 1

**No. 2-16/2004-US(Akademies)**
**Government of India**
**Ministry of Culture**

New Delhi, the 1st November 2004

## RESOLUTION

Whereas the Government of India received, from time to time, representations for declaring certain languages of antiquity as classical languages and whereas after taking into consideration all relevant issues and after consultation with Linguistic Experts, the Government of India declared Tamil language as one of the classical language vide Notification No. IV. -14014/7/2004-NI-II dated 12th October, 2004 issued by Ministry of Home Affairs, Government of India.

Whereas it is often difficult to exactly pinpoint the year of origin of a language, since it is the product of a long process of evolution and the final arrival of a specific linguistic identity. Therefore, the Government of India has decided to set up the following Committee of Linguistic Experts to consider future demands for categorization of languages as classical languages:-

Dr. Anvita Abbi
Professor of Linguistics
Center of Linguistics and English School of Language
Literature and Culture Studies
Jawaharlal Nehru University,
New Delhi-110 067
Phone: 26172401, 266174154 (Home)/26704234 (Uni.)
Fax:011-26165886(Fax)
E-mail: anvitaabbi@hotmail.com

Dr. K.V. Subbarao
Department of Linguistics,
New Arts Faculty Building,
University of Delhi
New Delhi-110007
Phone: 011 –27667126 (O)/ 27141791 (R)
Mobile: 9810605455
E mail: kvs2@vsnl.com

Prof. Udaya Narayana Singh
Director
Central Institute of Indian Languages
Manasagangotri
Mysore –570 006
Phone:0821-2515820
Fax: 0821 –2515032
E-mail chasha@sancharnet.in/udaya@ciil.stpmy.soft.net

Dr. B.N. Patnaik (retired)
Professor of English (Linguistics)
Head, Centre for Creative Writing and Publioation,
Indian Institute of Technology Kanpur,
Dept. of Humanities and Social Sciences
Kanpur – 208 016
Phone: 0512 – 2592205 /2598327 ® / 2597632 (D)
Fax: 0512 –2590260 /2590007
E-mail panaik@iitk.ac.in

Prof. Bh. Krishnamurti
H.No. 12-13-1233, "Bhaarati"
Street No. 9, Tarnaka
Hyderabad –500 017
Phone: 040-27005665
Email: hydi_bhk@sancharnet.in

President,
Sahitya Akademi (Ex-Officio member)

The Ministry of Culture will bring to the notice of the above Committee the request received by it for their consideration.

The Committee shall consider such future claims for declaration of any language as one of the classical languages on the following objective criteria -

(a) High antiquity of its early texts/recorded history over a thousand years.
(b) A body of ancient literature/texts, which is considered a valuable heritage by generations of speakers.
(c) The literary tradition has to be original and not borrowed from another speech community.
(d) The classical language and literature could be distinct from its current form or could be discontinuous with its later forms or its offshoots (like Latin Vs. Roman, Sanskrit- Pali Vs Prakrit and Modern Indo Aryan)

Whereas the Government of India have further decided that the following benefits shall be available to the languages declared or notified as classical languages: -

i) Two major international awards for scholars of eminence in Classical Indian languages are awarded annually.
ii) A 'CENTRE OF EXCELLENCE FOR STUDIES IN CLASSICAL LANGUAGES' is set up.
iii) The University Grants Commission be requested to create, to start with at least in the Central Universities, a certain number of Professional Chairs for Classical Languages for scholars of eminence in Classical Indian languages. .

(K. JAYAKUMAR)
JOINT SECRETARY TO THE GOVERNMENT OF India

ORDER

Ordered that a copy of the Resolution be published in the Official Gazette.

(K. JAYAKUMAR)
JOINT SECRETARY TO THE GOVERNMENT OF India

Manager
Government of India Press (Bharat Sarkar Press)
Mayapuri,
Ring Road,
New Delhi

Copy to:-

1. All Sections of the Ministry of Culture.
2. All attached/subordinate Offices/autonomous organisations of the Ministry of Culture.
3. All members of the Linguistic Expert Committee.
4. Ministry of Home Affairs, (Attn. Shri Jag Ram, Deputy Secretary), N.I. Wing, H.R. Division, Jaislmer House, New Delhi-11.
5. Ministry of H.R.D., Department of S.E.&H.E. (Attn Smt. Bela Banerjee, Joint Secretary.)
6. All Ministries/Department of India
7. Chief Secretaries of all State/Union Territories.
8. D.P.I.O. Ministry of Culture, New Delhi (10 copies).

(M.A. Muraleedharan)
Under Secretary to the Government of India

TO BE PUBLISHED IN PART-I SECTION 1 OF THE GAZETTE OF INDIA

No.IV-14014/7/2004-NI-II
Government of India/Bharat Sarkar
Ministry of Home Affairs/Grih Mantralaya

Lok Nayak Bhavan, Khan Market,
New Delhi-110003 dated, the 2 .. November, 2005



**NOTIFICATION**

Government of India created a new category of languages as 'Classical Languages' vide Notification No.IV-14014/7/2004-NI-II dated 12th October, 2004 read with the Corrigendum Notification dated 29th October 2004 and the following criteria was laid down to determine the eligibility of languages to be considered for classification as a 'Classical Language' :-



(i) High antiquity of its early texts/recorded history over a thousand years.

(ii) A body of ancient literature/texts, which is considered a valuable heritage by generations of speakers.

(iii) The literary tradition be original and not borrowed from another speech community.

(iv) The classical language and literature being distinct from modern, there may also be a discontinuity between the classical language and its later forms or its offshoots.

2. Tamil Language was notified as a 'Classical Language' vide para 3 of the aforesaid Notification dated 12th October, 2004.

....2

3. The Government of India has now decided to amend para 2 (i) of the Notification dated 12th October, 2004 so to read as under :-

> "High antiquity of its early texts/recorded history over a period of 1500-2000 years".

4. It is also notified that 'Sanskrit Language' satisfies the above criteria and will be classified as a 'Classical Language'.

5. All other provisions of the Notification dated 12th October, 2004 will remain unchanged.

6. The Ministry of Culture will take all further steps required to follow up and implement the above decisions.

(Jag Ram)
Deputy Secretary to the Govt. of India
Tel. 24616862

To

The Manager,
Government of India Press,
Faridabad.

No.IV-14014/7/2004-NI-II Dated the 25th November, 2005

Copy to :-

1. Prime Minister's Office, South Block, New Delhi.
2. Cabinet Secretariat, Rashtrapati Bhawan, New Delhi.
3. Ministry of Culture, Shastri Bhawan, New Delhi.
4. Ministry of Human Resource Development (Department of Secondary & Higher Education), Shastri Bhawan, New Delhi.
5. The Chief Secretaries of all the States/Union Territories.

--------

## ಸಂಚಿಕೆಯ ಲೇಖಕರು

**ನಾಡೋಜ ಪಾಟೀಲ ಪುಟ್ಟಪ್ಪ** – "ಪ್ರಪಂಚ" ವಿಶ್ವವಾಣಿ, ಕಿತ್ತೂರು ಚೆನ್ನಮ್ಮರಾಣಿ ವರ್ತುಲ ಹುಬ್ಬಳ್ಳಿ – ೫೮೦೦೨೯. ೦೮೩೬-೨೩೫೨೫೦೧

**ಪ್ರೊ. ಕೆ.ಎಸ್. ನಿಸಾರ್ ಅಹಮದ್** – "ಹಮೀದಾ ಹೈದರ್", ೩೪೧, ೭ನೇ ಅಡ್ಡರಸ್ತೆ, ಪದ್ಮನಾಭನಗರ, ಬನಶಂಕರಿ ೨ನೇ ಹಂತ, ಬೆಂಗಳೂರು ೫೬೦೦೭೦. ೨೬೬೯೧೪೫೩, ೨೬೬೯೧೮೪೭

**ಪ್ರೊ. ಎಲ್. ಎಸ್. ಶೇಷಗಿರಿ ರಾವ್** – "ಪಾರಿಜಾತ", ೫ನೇ ಅಡ್ಡರಸ್ತೆ, ೨೧ನೇ ಮುಖ್ಯರಸ್ತೆ, ಮಾರೇನಹಳ್ಳಿ, ಜೆ.ಪಿ.ನಗರ, ಎರಡನೇ ಹಂತ, ಬೆಂಗಳೂರು ೫೬೦೦೭೮

**ಡಾ. ಎಂ. ಚಿದಾನಂದ ಮೂರ್ತಿ** – "ಮಿಂಚು" ೬/ಎ, ೪ನೇ ಕ್ರಾಸ್, ೧೧ನೇ ಮುಖ್ಯರಸ್ತೆ, ೨ನೇ ಹಂತ, ವಿಜಯನಗರ (ಹಂಪಿನಗರ), ಬೆಂಗಳೂರು ೫೬೦೦೪೦. ೨೩೩೦೦೬೮೭

**ಪ್ರೊ. ಎ.ವಿ. ನರಸಿಂಹಮೂರ್ತಿ** – ೭/೮೨, ಗೋಕುಲಂ ರಸ್ತೆ, ಜಯಲಕ್ಷ್ಮೀಪುರ, ಮೈಸೂರು ೫೬೮೦೧೨. ೦೮೨೧-೨೫೧೦೦೮೫

**ಡಾ. ಅರ್ವಿಯಸ್ ಸುಂದರಂ** – ೪೯೮, ಚಿತ್ರಭಾನು ರಸ್ತೆ, ಕುವೆಂಪುನಗರ, ಮೈಸೂರು ೫೭೦೦೨೩. ೯೮೮೪೪೦೧೫೭೯

**ಡಾ. ಪ್ರಧಾನ ಗುರುದತ್ತ** – ೨೭೦, ೨ನೇ ಕ್ರಾಸ್, ಬನಶಂಕರಿ ೩ನೇ ಫೇಸ್, ೩ನೇ ಹಂತ, ಬೆಂಗಳೂರು ೫೬೦೦೮೫. ೨೬೭೯೮೮೩೧, ೯೪೪೯೬೦೫೫೩೮

**ನಾ. ಗೀತಾಚಾರ್ಯ** – ೨೩/೨, ೫ನೇ ಕ್ರಾಸ್, ಕೆಂಪೇಗೌಡನಗರ, ಬೆಂಗಳೂರು ೫೬೦೦೧೯. ೨೬೫೨೫೩೫೦

**ಶ್ರೀ ಮನು ಬಳಿಗಾರ್** – ೩೭, "ಶಿಗ್ಲಿಮನೆ" ೬ನೇ ಕ್ರಾಸ್, ೩೫ನೇ ಮುಖ್ಯರಸ್ತೆ, ಬಿ.ಟಿ.ಎಂ. ೨ನೇ ಹಂತ, ಬೆಂಗಳೂರು ೫೬೦೦೬೮. ೯೮೪೪೦೧೭೦೨೪

**ಡಾ. ದೇ. ಜವರೇಗೌಡ** – "ಕಲಾನಿಲಯ" ವಿಶ್ವಚೇತನ, ಜಯಲಕ್ಷ್ಮೀಪುರಂ, ಕಾಳಿದಾಸ ರಸ್ತೆ, ಮೈಸೂರು ೫೭೦೦೧೨. ೦೮೨೧-೨೫೧೭೮೦೯, ೨೪೧೯೩೫೦, ೪೦೦೮೧೦೦

**ಶ್ರೀ ಲಿಂಗದೇವರು ಹಳೆಮನೆ** – ೨೫೪/ಎ, ೧ನೇ ಫೇಸ್, ಹುಡ್ಕೋ, ಕುವೆಂಪುನಗರ, ಮೈಸೂರು ೫೭೦೦೨೩. ೯೮೮೦೧೩೬೧೩

**ಶ್ರೀ ಅಗ್ರಹಾರ ಕೃಷ್ಣಮೂರ್ತಿ** – Secretary, Sahitya Akademi, Rabindra Bhavan, 35, Ferozeshah Road, New Delhi. 011-23387064, 09810372186

**ಡಾ. ಕೆ.ವಿ. ನಾರಾಯಣ** – ೩೨೯, "ಗೌರಿ" ಪಿ.ಓ. ಮಾರ್ಪೆಲ್ ಲೇಔಟ್, ಅನಂತಪುರ ರಸ್ತೆ, ಯಲಹಂಕ, ಬೆಂಗಳೂರು ೫೬೦೦೦೪. ೯೪೪೯೬೧೦೩೩೩
**ಪ್ರೊ. ಟಿ.ವಿ. ವೆಂಕಟಾಚಲ ಶಾಸ್ತ್ರೀ** – "ಬ್ರಾಹ್ಮೀ" ೬೮/ಬಿ, ಆಶ್ರಮದ ರಸ್ತೆ, ಜಯಲಕ್ಷ್ಮೀಪುರಂ, ಮೈಸೂರು ೫೭೦೦೧೨. ೦೮೨೧-೨೫೧೨೯೯೦

**ಶ್ರೀ ಎನ್. ಎಸ್. ಸುಬ್ಬಣ್ಣ** – ೪೯೬, ೪೭ನೇ ಅಡ್ಡರಸ್ತೆ, ೫ನೇ ಬ್ಲಾಕ್, ಜಯನಗರ, ಬೆಂಗಳೂರು ೫೬೦೦೪೧. ೦೮೦-೨೬೬೪೧೮೬೩

**ಶ್ರೀ ಎಂ. ಪಿ. ಪ್ರಕಾಶ** – ೪೫೩, ೪ನೇ ಮುಖ್ಯರಸ್ತೆ, ೭ನೇ ಕ್ರಾಸ್, ಬಿಡಿಎ ಕಾಲೋನಿ, ರಾಜಮಹಲ್ ವಿಲಾಸ್ ಬಡಾವಣೆ, ೨ನೇ ಹಂತ, ಬೆಂಗಳೂರು ೫೬೦೦೦೬.
೦೮೦-೨೩೪೧೫೨೦೪

**ಶ್ರೀ ಡಿ. ಪಾಂಡುರಂಗ ಬಾಬು** – ಪ್ರಾಧ್ಯಾಪಕರು, ಕನ್ನಡ ಭಾಷಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಬಳ್ಳಾರಿ ಜಿಲ್ಲೆ ೫೮೩೨೭೬. ೯೪೪೯೭೭೦೩೬೧

**ಶ್ರೀ ಬಿ.ಆರ್. ಜಯರಾಮರಾಜೇ ಅರಸ್** – ಸರ್ಕಾರದ ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ, ಕರ್ನಾಟಕ ಸರ್ಕಾರ. ವಿಕಾಸಸೌಧ, ಬೆಂಗಳೂರು ೫೬೦೦೦೧

**ಶ್ರೀ ಕಿಕ್ಕೇರಿ ನಾರಾಯಣ** – ೨೬೨, ೧೯ನೇ ಮುಖ್ಯರಸ್ತೆ, 'ಬಿ' ಬ್ಲಾಕ್ ವಿಜಯನಗರ, ೩ನೇ ಹಂತ, ಮೈಸೂರು ೫೭೦೦೧೭. ೦೮೨೧-೨೫೦೦೬೦೮, ೯೪೪೮೯೧೦೦೮೬

**ಡಾ. ಪುರುಷೋತ್ತಮ ಬಿಳಿಮಲೆ** – 6098/8, D-6, Vasant Kunj, New Delhi 110070
09811733378

**ಶ್ರೀ ಎಚ್. ದಂಡಪ್ಪ** – ೫೬೧, "ಶ್ರೇಯಸ್", ೨ನೇ ಕ್ರಾಸ್, ಯುವಿಸಿಇ ಲೇಔಟ್, ಹಳೇ ಸಬ್‌ರಿಜಿಸ್ಟ್ರಾರ್ ಕಛೇರಿ ಹತ್ತಿರ, ಬಸವೇಶ್ವರನಗರ, ಬೆಂಗಳೂರು ೫೬೦೦೭೯.
೦೮೦-೨೩೨೨೧೧೫೫

**ಶ್ರೀ ಎಸ್. ಮಂಜುನಾಥ್** – ನಂ, ೫, ಮಂಜನಾಥ ನಿಲಯ, ೧೨ನೇ ಅಡ್ಡರಸ್ತೆ, ರಾಘವೇಂದ್ರ ಬ್ಲಾಕ್, ಬನಶಂಕರಿ ೩ನೇ ಹಂತ, ಶ್ರೀನಗರ, ಬೆಂಗಳೂರು ೫೬೦೦೫೦

**ಡಾ. ಡಿ.ಕೆ. ಚಿತ್ತಯ್ಯ ಪುಜಾರ್** – ಅಧ್ಯಾಪಕರು, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ೫೬೦೦೫೬. ೨೨೯೬೧೭೭೩, ೯೮೪೫೬೩೭೨೪೭

ಭಾರತ ಸರ್ಕಾರದ ಸೇವೆಯಲ್ಲಿ

ಪುಸ್ತಕ ಲೋಕ



ಕರ್ನಾಟಕ ಸರ್ಕಾರ
ಕನ್ನಡ ಪುಸ್ತಕ ಪ್ರಾಧಿಕಾರ



**PUSTAKALOKA** - Kannada quarterly (No. MAG(1) NPT/116/2007-08)
Vol. : 1, Issue : 3, January - July, 2010 (Combined Issue)
Published by : **Ashok N Chalavadi**, Administrator, Kannada Book Authority
Kannada Bhavana, J.C. Road, Bangalore 560002. Tel: +91-80-22484516
Chief Editor: **Dr. Siddalingaiah.** Editor: **J. N. Shama Rao.**
Cover Page and Design : **U.T. Suresh**
Printed at: **Raja Printers**, Bangalore 560027